ಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ
ಪ್ರಕಟನೆಗಳು: ಸಂ. ೨

---

ಪ್ರಧಾನ ಸಂಪಾದಕರು:
ಶ್ರೀ. ಹು. ಫ. ಕಟ್ಟೀಮನಿ, ಬಿ. ಎ., ಎಮ್. ಎಲ್. ಸಿ.

ಚಾಮರಸ ಕೃತ

# ಪ್ರಭುಲಿಂಗಲೀಲೆ

ದ್ವಿತೀಯ ಮುದ್ರಣ



# ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ
## ಸಾಹಿತ್ಯ ಸಮಿತಿ ಸದಸ್ಯರು

೧ ಶ್ರೀ ಹುಚ್ಚಯ್ಯಸ್ವಾಮಿ ಫಕ್ಕೀರಯ್ಯಾಸ್ವಾಮಿ ಕಟ್ಟೀಮನಿ
ಬಿ. ಎ., ಎಂ. ಎಲ್. ಸಿ., ಕಾರ್ಯಾಧ್ಯಕ್ಷರು

೨ ಶ್ರೀ ಬಸವಪ್ಪಾ ಮಲ್ಲಪ್ಪಾ ಶಿಂತ್ರಿ ಬಿ. ಎ., ಬಿ. ಟಿ.
ಡೆಪ್ಯುಟಿ ಚನ್ನಬಸವಪ್ಪನವರ ಪುಸ್ತಕಾಲಯದ ವ್ಯವಸ್ಥಾಪಕರು;
ಗೌರವ ಕಾರ್ಯದರ್ಶಿಗಳು ಹಾಗೂ ಲೈಬ್ರೇರಿಯ

೩ ಶ್ರೀ ಮಲ್ಲನಗೌಡ ಸೋಮನಗೌಡ ಪಾಟೀಲ ಬಿ. ಎ., ಎಲೆಲ್. ಬಿ.
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಗೌರವ ಕಾರ್ಯದರ್ಶಿಗಳು
ಎಕ್ಸ-ಅಫೀಶಿಯೋ, ಕೋಶಾಧ್ಯಕ್ಷ

೪ ಶ್ರೀ ವಿರುಪಾಕ್ಷಪ್ಪ ಶಿವಯೋಗಪ್ಪ ಬಸವನಾಳ ಬಿ. ಎ., ಎಲೆಲ್. ಬಿ
ಚೇರಮನ್, ಕರ್ನಾಟಕ ಸೆಂಟ್ರಲ್ ಕೋ-ಅಪರೇಟಿವ್ಹ ಬ್ಯಾಂಕ ಲಿ,
ಹಾಗೂ ಕರ್ನಾಟಕ ಕೋ-ಅಪರೇಟಿವ್ಹ ಲಿಟರರಿ ಕಮೀಟಿ, ಧಾರವಾ

೫ ಶ್ರೀ ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ ಬಿ. ಎ., ಎಲೆಲ್. ಬಿ.
ಅಡ್ವೊಕೇಟ, ಪ್ರಕಾಶಕರು ಶ್ರೀ ಮಹಾಲಿಂಗ ಗ್ರಂಥ ಮಾಲಾ, ಹುಬ್ಬ

೬ ಶ್ರೀ ವೀರಭದ್ರಪ್ಪ ರುದ್ರಪ್ಪ ಕೊಪ್ಪಳ ಎಂ. ಎ., ಬಿ. ಟಿ.
ಮುಖ್ಯಾಧ್ಯಾಪಕರು, ರಾಜಾ ಲಖಮಗೌಡಾ ಸರದೇಸಾಯಿ ಹಾಯಸ್ಕೂ

೭ ಶ್ರೀ ಶಾಂತವೀರಪ್ಪ ಕೊಟ್ರಬಸಪ್ಪ ಭಾವಿಕಟ್ಟಿ ಬಿ. ಎ.
ಮ್ಯಾನೇಜರ, ಕೆ. ಸಿ. ಸಿ. ಬ್ಯಾಂಕ ಲಿಮಿಟೆಡ್, ಧಾರವಾ

೮ ಡಾಕ್ಟರ ಆರ್. ಸಿ. ಹಿರೇಮಠ ಎಂ. ಎ, ಪಿಎಚ್. ಡಿ.
ರೀಡರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾ

೯ ಶ್ರೀ ಪುರಾಣಿಕ ಬುದ್ಧಯ್ಯಸ್ವಾಮಿಗಳು ತೇರದಾಳ
ಸಂಪಾದಕರು: ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾ

೧೦ ಶ್ರೀ ಗದ್ದಿಗಿಮಠದ ಮುರಿಗೆಪ್ಪನವರ ವಿರೂಪಾಕ್ಷನ್ ಅವರು, ಹರಿಹರ

ಶ್ರೀ ವೀರಭದ್ರಪ್ಪಾ ಮಹಾಲಿಂಗಪ್ಪಾ ಮುಲ್ಲಾಬಾದಿ ದಾವಣಗೆರೆ
ಪ್ರಚಾರಾಧಿಕಾರಿ



ಸಿಕ್ಕದೆ ಹೋದದು

ಚಾಮರಸ ಕೃತ

# ಪ್ರಭುಲಿಂಗಲೀಲೆ


ಸಂಪಾದಕರು:

ಪ್ರೊ. ಶಿ. ಶಿ. ಬಸವನಾಳ, ಎಂ. ಎ.





ಸಾಹಿತ್ಯ ಸಮಿತಿ

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ

೧೯೫೬

ಪ್ರಕಾಶಕರು :
ಶ್ರೀ ಬಸವಪ್ಪಾ ಮಲ್ಲಪ್ಪಾ ಶೀಲ್ರಿ ಬಿ. ಎ., ಬಿ. ಟಿ
ಗೌರವ ಕಾರ್ಯದರ್ಶಿ ಹಾಗೂ ಲೈಬ್ರೇರಿಯನ್
ಸಾಹಿತ್ಯ ಸಮಿತಿ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ (ಮನೆ ನಂಬರ್ ೬೨೩೦)
ಧಾರವಾಡ





ಪ್ರಥಮ ಮುದ್ರಣ: ೧೯೩೮
ದ್ವಿತೀಯ ಮುದ್ರಣ: ೧೯೫೬




ಬೆಲೆ :
ಸುಂದರ ಪ್ರತಿ ೪—೦—೦
ಕ್ಯಾಲಿಕೋ ಪ್ರತಿ ೫—೦—೦

ಮುದ್ರಕರು :
ಶ್ರೀ. ಡಿ. ಟಿ. ಕಾಯ
ರವೀಂದ್ರ ಮುದ್ರಣಾ
ಮನೆ ನಂಬರ್ ೧೦
ಉಳವಿ ಬಸವೇಶ್ವರ
ಧಾರವಾಡ

# ಪ್ರಕಾಶಕರ ಅರಿಕೆ

( ಎರಡನೆಯ ಮುದ್ರಣ )

ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಯವರು ಚಾಮರಸಕೃತ ಪ್ರಭುಲಿಂಗಲೀಲೆ ಗ್ರಂಥವನ್ನು ಸುಪ್ರಸಿದ್ಧ ವಿದ್ವಾಂಸರೂ ಅನುಭಾವಿಗಳೂ ಆದ ಪ್ರೊಫೆಸರ ಶಿ. ಶಿ. ಬಸವನಾಳ ಎಂ.ಎ. ಅವರ ಸಂಪಾದಕತ್ವದಲ್ಲಿ ಕ್ರಿ. ಶ. ೧೯೩೩ರಲ್ಲಿ ಪ್ರಕಟಿಸಿದರು. ಇದೂ ಸಹಾ ವಿರೂಪಾಕ್ಷ ಪಂಡಿತಕೃತ ಚೆನ್ನಬಸವಪುರಾಣದಂತೆ ಧರ್ಮಾಭಿಮಾನಿಗಳನ್ನು ಸಾಹಿತ್ಯ ಪ್ರೇಮಿಗಳನ್ನು 'ಸರಕಾರದ ವಿದ್ಯಾಖಾತೆ' ಹಾಗೂ ವಿಶ್ವವಿದ್ಯಾಲಯ ಗಳನ್ನು ಆಕರ್ಷಿಸಿತು. ಸಮಾಜವು ಅತ್ಯಾದರದಿಂದ ಈ ಕಾರ್ಯವನ್ನು ಸ್ವಾಗತಿ ಸುತ್ತ ಕೊಂಡಾಡಿತು. ಹತ್ತು ಹನ್ನೆರಡು ವರ್ಷಗಳಲ್ಲಿ ಮೊದಲು ಮುದ್ರಣ ಗೊಂಡ ಪ್ರತಿಗಳು ಮುಗಿದು ಹೋಗಿ ಪುನರ್ಮುದ್ರಣಕ್ಕೆ ಎಡೆಗೊಟ್ಟಿತು ಬಸವಣ್ಣನವರ ಷಟಸ್ಥಳದ ವಚನಗಳ ಹಾಗೂ ಅವರ ಹೆಚ್ಚಿಗೆದೊರೆತ ವಚನ ಗಳ ಮುದ್ರಣ ಕೆಲಸ ಮುಗಿಯುತ್ತಲೇ ಈ ಗಂಥದ ಬೇಡಿಕೆಯೂ ಅಧಿಕ ವಾಗಿದ್ದರಿಂದ ಸಾಹಿತ್ಯ ಸಮಿತಿಯವರು ಪ್ರಭುಲಿಂಗಲೀಲೆಯ ಎರಡನೆಯ ಮುದ್ರಣದ ಕಾರ್ಯವನ್ನು ಕೈಕೊಂಡರು

ಮೊದಲನೆಯ ಮುದ್ರಣದಲ್ಲಿ ಪ್ರತಿ ಗತಿಯ ಆರಂಭಕ್ಕೆ ಬರುವ ವಚನ ಗಳನ್ನು ಅನುಬಂಧ ರೂಪದಲ್ಲಿ ಕೊಡಬೇಕೆಂದು ಸಂಪಾದಕರು ಸೂಚಿಸಿದ್ದರು ಹಾಗು ಅವರೇ ಇನ್ನಷ್ಟು ವಿಸ್ತರಿಸಿ ಬರೆದಿಟ್ಟ ಶಬ್ದಕೋಶವನ್ನು ಈ ಮುದ್ರಣ ದಲ್ಲಿ ಸೇರಿಸಲಾಗಿದೆ ಈ ಗ್ರಂಥದ ಬಗೆಗೆ ಪಂಡಿತರ ಅಭಿಪ್ರಾಯವನ್ನು ಕೊಡ ಗಿದೆ. ಮೊದಲಿದ್ದ 'ಡೆಮಿ' ಆಕಾರವನ್ನು 'ಕ್ರೌನ್' ಆಕಾರಕ್ಕೆ ಪರಿವರ್ತಿಸ ಲಾಗಿದೆ. ಕೆಲವೆಡೆ ಸರಿಕಂಡ ಹೆಚ್ಚಿನ ಪಾಠಾಂತರಗಳನ್ನು ಕೊಡಲಾಗಿದೆ.

ಅಲ್ಲಮಪ್ರಭುವಿನ ವೈಶಿಷ್ಟ್ಯಪೂರ್ಣ ಚರಿತ್ರೆಯೊಡನೆ ೧೨ ನೆಯ ಶತ ಮಾನದ ಬಸವಾದಿ ಮಹಾ ಶರಣರ ಭಕ್ತಿಯ ಬೆಳಕಿನೊಡನೆ ಕಾವ್ಯದ ಮಾಧುರ್ಯವನ್ನು ತತ್ತ್ವದ ಗಾಂಭೀರ್ಯವನ್ನು ಸರ್ವತಂತ್ರ ಸ್ವತಂತ್ರ ರೀತಿ ಯಲ್ಲಿ ಬೀರುತ್ತಿರುವ ಈ ಪ್ರಭುಲಿಂಗಲೀಲೆಯ ಅಭ್ಯಾಸ, ಪ್ರವಚನ ಪ್ರಚಾರ ಇಂದಿನಂತೆ ಕನ್ನಡ ನಾಡಿನಲ್ಲಿ ಹೆಚ್ಚಾಗಿರುವುದು ಓದುಗರ ಅಭಿರುಚಿದ್ಯೋತಕ

ವಾಗಿದೆ. ವೀರಶೈವ ಸಾಹಿತ್ಯದಲ್ಲಿ ಮಹೋನ್ನತ ಕಲಾಕೃತಿಯಾಗಿರುವ ಈ ಗ್ರಂಥವು ಮಠಮಾನ್ಯಗಳಲ್ಲಿ ಪ್ರವಚನ ರೂಪದಲ್ಲಿಯೂ ವಿದ್ಯಾಖಾತೆಯಲ್ಲಿ ಕ್ರಮಿಕ ಪುಸ್ತಕಗಳ ಭಾಗವಾಗಿಯೂ ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕವೆಂದೂ ಪರಿಗಣಿತವಾಗಿ ಸರ್ವವಿಧದಿಂದಲೂ ಮೇಲ್ಮೆ ಹೊಂದಿದೆ. ಸಂಗೀತ ವಿದ್ವಾಂಸರೂ ಗಮಕಕಲಾವಿದರೂ ತಮ್ಮ ತಮ್ಮ ಸಾರ್ವಜನಿಕ ಕಾರ್ಯಕ್ರಮದಲ್ಲಿ ಇದನ್ನು ಹೆಚ್ಚಾಗಿ ಬಳಸುತ್ತಿರುವದು ಆನಂದದಾಯಕವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪಠ್ಯಪುಸ್ತಕ ಸಮಿತಿಯವರು ಎಂ. ಎ. ತರಗತಿಗೆ ಸನ್ ೧೯೫೬—೫೭—೫೮ ಈ ಮೂರು ವರ್ಷ ಈ ಗ್ರಂಥವನ್ನು ಪಠ್ಯಪುಸ್ತಕವೆಂದು ಆರಿಸಿಕೊಂಡಿರುವುದಕ್ಕಾಗಿ ಅವರಿಗೆ ಸಾಹಿತ್ಯ ಸಮಿತಿಯವರು ಅಭಿನಂದನೆಗಳನ್ನು ಸಲ್ಲಿಸುತ್ತೇವೆ. ಅದರಂತೆ ಶ್ರಾವಣ ಮಾಸದಲ್ಲಿ ಪ್ರವಚನಕ್ಕಾಗಿ ಈ ಗ್ರಂಥವನ್ನು ಆಯ್ದುಕೊಳ್ಳುವ ವಿದ್ವಾಂಸರಿಗೂ ಮಠಾಧಿಪತಿಗಳಿಗೂ ಉಪಕೃತರಾಗಿದ್ದೇವೆ.

ಎರಡನೆಯ ಮುದ್ರಣದ ಅಚ್ಚೋಲೆ (ಪ್ರೂಫಷೀಟ್ಸ)ಗಳನ್ನು ತಿದ್ದುವ ಕಾರ್ಯದಲ್ಲಿ ಶ್ರೀ. ವೀರಭದ್ರಪ್ಪಾ ರುದ್ರಪ್ಪಾ ಕೊಪ್ಪಳ ಎಂ. ಎ. ಬಿ ಟಿ. ಅವರು ಹಾಗು ಶ್ರೀ. ಬಸವರಾಜ ಚನ್ನವೀರಪ್ಪಾ ಜವಳಿ. ಬಿ. ಎ. (ಆನರ್ಸ) ಹಾವಣಗಿ ಅವರು ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು ನೆರವಾಗಿದ್ದಾರೆ. ಲಿಂಗರಾಜ ಮುದ್ರಣಾಲಯದವರು "ಮಾಯಾಕೋಲಾಹಲ" ವರ್ಣರಂಜಿತ ಚಿತ್ರವನ್ನು ಮುದ್ರಿಸಿ ಕೊಟ್ಟಿದ್ದಾರೆ. ರವೀಂದ್ರಪ್ರೆಸ್ ಒಡೆಯರೂ ವ್ಯವಸ್ಥಾಪಕರೂ ಆದ ಶ್ರೀ ಶಿವಯೋಗಪ್ಪ ಶಿವಲಿಂಗಪ್ಪ ಬಸವನಾಳ ಬಿ. ಎಸ್‌ಸಿ ಅವರು ಈ ಗ್ರಂಥವನ್ನು ಅಂದವಾಗಿಯೂ ಅಚ್ಚುಕಟ್ಟಾಗಿಯೂ ಸಕಾಲದಲ್ಲಿಯೂ ಮುದ್ರಿಸಿ ಕೊಟ್ಟಿದ್ದಾರೆ. ಈ ಕಾರ್ಯದಲ್ಲಿ ನೆರವಾದ ಎಲ್ಲ ಮಹನೀಯರಿಗೆ, ಮತ್ತು ವಾಚಕರಿಗೆ, ಹಾಗೂ ಮುದ್ರಣಾಲಯದವರಿಗೆ ಅಭಾರ ಸಲ್ಲಿಸುತ್ತೇವೆ.

ಸಾಹಿತ್ಯ ಸಮಿತಿ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ
ಲಿಂಗಾಯತ ಭವನ, ಧಾರವಾಡ
೧೫-೮-೧೯೫೬

ಶಿಂತ್ರಿ ಬಸವಪ್ಪ, ಬಿ.ಎ.,ಬಿ.ಟಿ.
ಪ್ರಕಾಶಕರು
ಗೌರವ ಕಾರ್ಯದರ್ಶಿಗಳು
ಹಾಗೂ ಲಾಬ್ರೇರಿಯನ್

# ಅನುಕ್ರಮಣಿಕೆ

ಚಿತ್ರಗಳು:







ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ ಮಹಾಪ್ರಭುಗಳವರು

ಕರ್ನಾಟಕ ರತ್ನಸಿಂಹಾಸನಾಧಿಪತಿಗಳೂ, ಮೈಸೂರು ರಾಜಪ್ರಮುಖರೂ
ಯದುವಂಶ ಚೂಡಾಮಣಿಗಳೂ ಆದ ಶ್ರೀಮನ್ ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹಾದ್ದೂರ**

**G. C. S. I., G. C. B., LL. D.**

ಅವರು

ದಿನಾಂಕ ೨೬-೧೦-೧೯೫೬ನೆಯ ಶುಕ್ರವಾರ

**ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ**

**ಸಾಹಿತ್ಯ ಸಮಿತಿಯ ಬೆಳ್ಳಿಯ ಹಬ್ಬದ**

**ಸಮಾರಂಭದ**

ಅಧ್ಯಕ್ಷತೆ ವಹಿಸಿದ ಶುಭಮುಹೂರ್ತದಲ್ಲಿ,
ಕರ್ನಾಟಕದ ಸುಪ್ರಸಿದ್ಧ ವಿದ್ವಾಂಸರೂ ಅನುಭಾವಿಗಳೂ ಆದ

**ಪ್ರೊ. ಬಸವನಾಳ ಶಿವಲಿಂಗಪ್ಪನವರು,** M. A., M. R. S.

ಅವರಿಂದ ಸಂಪಾದಿಸಲ್ಪಟ್ಟು ದ್ವಿತೀಯ ಸಂಸ್ಕರಣಗೊಂಡ

'ವೀರಶೈವ ಮತ ಸಾರೋದ್ಧಾರ'

**ಮಹಾಕವಿ ಚಾಮರಸಕೃತ**

# ಪ್ರಭುಲಿಂಗಲೀಲೆ

ಈ ಗ್ರಂಥವನ್ನು
ಮಹಾಪ್ರಭುಗಳು ತಮ್ಮ ಅಮೃತ ಹಸ್ತದಿಂದ ಪ್ರಕಾಶಗೊಳಿಸಿದ್ದಕ್ಕಾಗಿ
ಶ್ರೀಮನ್ ಮಹಾರಾಜರವರಲ್ಲಿ ಸಾಹಿತ್ಯ ಸಮಿತಿಯವರು
ರಾಜಭಕ್ತಿಯುತ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

# ಮುನ್ನುಡಿ

ಈಗಿರುವ ಕರ್ನಾಟಕದ ರಾಜಕೀಯ ವಿಭಾಗಗಳು ಕನ್ನಡ ವಾಙ್ಮಯದ ಮೇಲೆ ಪರಿಣಾಮವನ್ನು ಮಾಡದೆ ಬಿಟ್ಟಿಲ್ಲ. ಇಲ್ಲಿಯವರೆಗೆ ಕನ್ನಡ ವಾಙ್ಮಯದ ಗ್ರಂಥಗಳನ್ನು ಬರೆದವರು ಮುಖ್ಯವಾಗಿ ಜೈನರು, ಲಿಂಗಾಯತರು ಮತ್ತು ಬ್ರಾಹ್ಮಣರು. ಜೈನರು ಸ್ವತಂತ್ರ ಧರ್ಮದವರು. ಲಿಂಗಾಯತರು ಮತ್ತು ಬ್ರಾಹ್ಮಣರು ಒಂದೇ ಧರ್ಮದವರಾದರೂ ಬೇರೆ ಬೇರೆ ಮತದವರು. ಕನ್ನಡ ವಾಙ್ಮಯದ ಅನೇಕ ಗ್ರಂಥಗಳು ಈ ಧರ್ಮಗಳ ಮತ್ತು ಮತಗಳ ವಿಷಯ ವಾಗಿಯೂ ಇವುಗಳ ಪುರಸ್ಕರ್ತರ ವಿಷಯವಾಗಿಯೂ ಇರುವುದರಿಂದ ಒಂದು ಧರ್ಮದ ಅಥವಾ ಮತದ ಗ್ರಂಥಗಳ ಬಗ್ಗೆ ಇತರ ಧರ್ಮದ ಮತ್ತು ಮತದ ಜನರ ಆದರವು ಸಹಜವಾಗಿ ಕಡಿಮೆ. ಇದಲ್ಲದೆ ಗ್ರಂಥಗಳು ಶುದ್ಧವಾಗಿಯೂ ಅಚ್ಚುಕಟ್ಟಾಗಿಯೂ ಅಂದವಾಗಿಯೂ ಮುದ್ರಿಸಲ್ಪಡದೆ ಇರುವುದರಿಂದ ಸಾಮಾನ್ಯ ಜನರ ಲಕ್ಷವು ಇವುಗಳ ಕಡೆಗೆ ಹೋಗುವುದಿಲ್ಲ.

ಕರ್ನಾಟಕದ ಏಕೀಕರಣದ ಪ್ರಯತ್ನಗಳು ಮೊಟ್ಟಮೊದಲು ಮುಂದವಾಗಿದ್ದರೂ ಇತ್ತೀಚೆಗೆ ಹೆಚ್ಚು ಜೋರಿನಿಂದ ಒಂದೇ ಸವನೆ ನಡೆದಿರುವುವು. ಈ ಏಕೀಕರಣದ ಭಾವನೆಯೇ ಒಂದು ಧರ್ಮದ ಮತ್ತು ಮತದ ಜನರು ಬರೆದ ಗ್ರಂಥಗಳ ಬಗ್ಗೆ ಇತರ ಧರ್ಮದ ಮತ್ತು ಮತದ ಜನರ ಅನಾದರಣೆಯನ್ನು ಕಡಿಮೆ ಮಾಡಬಹುದೆಂಬ ಆಶೆಯಿದೆ. ಕಳೆದ ಕೆಲವು ವರ್ಷಗಳಿಂದ ವಿಶ್ವವಿದ್ಯಾಲಯಗಳಲ್ಲಿಯೂ ವಿದ್ಯಾಸಂಸ್ಥೆಗಳಲ್ಲಿಯೂ ಪ್ರಾಂತೀಯ ಭಾಷೆಗಳು ಹೆಚ್ಚು ಹೆಚ್ಚು ಪ್ರವೇಶವಾಗಹತ್ತಿ ಅವುಗಳಲ್ಲಿ ಗಣಿತ, ಇತಿಹಾಸ, ಭೂಗೋಲ, ವಿಜ್ಞಾನ ಮುಂತಾದ ವಿಷಯಗಳ ಮೇಲೆ ಸಹ ಗ್ರಂಥಗಳು ಹುಟ್ಟಹತ್ತಿರುವುವು. ಇದರಿಂದಲೂ ವಾಚಕರಲ್ಲಿ ಸಹಕಾರತ್ವವು ಬೆಳೆಯಲಿಕ್ಕೆ ಆಸ್ಪದವಾಗಿರುವುದು. ಈಗ ಹುಟ್ಟುತ್ತಿರುವ ಗ್ರಂಥಗಳಿಗೆ ಭಾಷೆಯ ಮಟ್ಟಿಗೆ ಪುರಾತನ ಗ್ರಂಥಗಳು ಆಧಾರವಾಗಿರುವುವು. ಇದಕ್ಕೆ ಅನುಕೂಲವಾಗಿಯೇ ಬೇರೆ ಬೇರೆ

ವ್ಯಕ್ತಿಗಳೂ ಸಂಘದವರೂ ಗ್ರಂಥಗಳನ್ನು ಶುದ್ಧವಾಗಿಯೂ ಅಚ್ಚುಕಟ್ಟಾಗಿಯೂ ಅಂದವಾಗಿಯೂ ಮುದ್ರಿಸಿ ಪ್ರಕಟಿಸಹತ್ತಿರುವರು. ಈ ಕಾರ್ಯವನ್ನೇ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯವರು ಕೈಕೊಂಡು ಕೈಲಾದ ಮಟ್ಟಿಗೆ ನೆರವೇರಿಸುತ್ತಿರುವರು.

ವಿರೂಪಾಕ್ಷಪಂಡಿತಕೃತ ಚೆನ್ನಬಸವ ಪುರಾಣವನ್ನು ಇವರು ಈ ಮೊದಲೇ ಪ್ರಸಿದ್ಧಿಸಿರುವರು. ಈಗ್ಗೆ ಚಾಮರಸನ ಪ್ರಭುಲಿಂಗಲೀಲೆಯನ್ನು ಹೊರಗೆಡಹುವ ಸುಯೋಗವು ಒದಗಿರುವುದು.

ಈ ಗ್ರಂಥದಲ್ಲಿ ಕೆಲವು ಚಿತ್ರಗಳನ್ನೂ ನಕ್ಷೆ(ಫೋಟೋ)ಗಳನ್ನೂ ಸೇರಿಸಿದೆ. ಇವುಗಳಲ್ಲಿ (೧) "ಪ್ರಭು ಮಾಯೆಗೆ ಸಿಕ್ಕದೆ ಹೋದದ್ದು" ಮತ್ತು (೨) "ಸೊನ್ನಲಾಪುರದಲ್ಲಿ ಪ್ರಭುದೇವರು ಸಿದ್ಧರಾಮನಿಗೆ ದರ್ಶನ ಕೊಟ್ಟ ಸ್ಥಲ" ಈ ಚಿತ್ರಗಳನ್ನು ಶ್ರೀಮಾನ್ ಮುರಿಗೆಪ್ಪನವರು ಚೆಟ್ಟಿ, ಜಿ. ಡಿ. ಆರ್ಟ (ಮುಂಬಯಿ), ಸೊಲ್ಲಾಪೂರ, ಇವರು ಬರೆದು ಕೊಟ್ಟಿರುವರು (೧) ಬನವಾಸಿಯ ಮಧುಕೇಶ್ವರ ದೇವಾಲಯ (೨) ಬಳ್ಳಿಗಾವಿಯ ಪ್ರಭುದೇವರ ದೇವಾಲಯ (೩) ಬಳ್ಳಿಗಾವಿಯಿಂದ ಒಂದು ಮೈಲು ಉತ್ತರದಲ್ಲಿರುವ ಅನಿಮಿಷ ದೇವಾಲಯದ ಒಳಭಾಗ (೪) ಮುಂದೆ ಅಡವಿಯಲ್ಲಿ ದೇವಾಲಯದಲ್ಲಿರುವ ಬಂದಳಿಕೆಯ ವಿಗ್ರಹ ಇವುಗಳ ನಕ್ಷೆಗಳನ್ನು ಶ್ರೀಮಾನ್ ದಾನಪ್ಪನವರು ಹಾಲಬಾವಿ, ಎ. ಎಮ್., ಜಿ. ಡಿ. ಆರ್ಟ (ಮುಂಬಯಿ), ಅಧ್ಯಾಪಕ, ಕಲಾಮಂದಿರ, ಧಾರವಾಡ, ಇವರು ಆ ಆ ಸ್ಥಳಗಳಿಗೆ ಹೋಗಿ ತೆಗೆದುಕೊಂಡು ಬಂದು ಪೂರೈಸಿರುವರಲ್ಲದೆ "ಗೋರಕ್ಷನು ಪ್ರಭುದೇವರನ್ನು ಕತ್ತಿಯಿಂದ ಇರಿದದ್ದು" ಈ ಚಿತ್ರವನ್ನೂ ಬರೆದು ಕೊಟ್ಟಿರುವರು. ಈ ಉಭಯತರಿಗೆ ವಾಙ್ಮಯ ಶಾಖೆಯವರು ತುಂಬಾ ಕೃತಜ್ಞರಾಗಿರುತ್ತಾರೆ.

ಶ್ರೀಮಾನ್ ಶಿವಲಿಂಗಪ್ಪನವರು ಬಸವನಾಳ, ಎಮ್. ಎ, ಪ್ರೊಫೆಸರ, ಲಿಂಗರಾಜ ಕಾಲೇಜ, ಬೆಳಗಾವಿ, ಇವರು ತಮ್ಮ ಕಾರ್ಯಬಾಹುಲ್ಯದಲ್ಲಿಯಾದರೂ ಅನುಕೂಲತೆಯನ್ನು ಉಂಟುಮಾಡಿಕೊಂಡು ಈ ಗ್ರಂಥದ ಪ್ರಸ್ತಾವನೆಯನ್ನು ಬರೆದು ಕೊಟ್ಟದ್ದಕ್ಕಾಗಿ ಈ ಸಂಸ್ಥೆಯವರು ಅವರ ಉಪಕಾರವನ್ನು ಎಂದಿಗೂ ಮರೆಯಲಾರರು. ಈ ಗ್ರಂಥವನ್ನು ಅಚ್ಚಿಗೆ ಯೋಗ್ಯವಾಗುವಂತೆ ಬರೆದು ಕೊಟ್ಟ ಶ್ರೀಮಾನ್ ಕೊಟ್ರಯ್ಯನವರು ಪಾಟೀಲ, ಅಧ್ಯಾಪಕ,

ಪ್ರ್ಯಾಕ್ಟಿಸಿಂಗ ಸ್ಕೂಲ, ಧಾರವಾಡ, ಇವರಿಗೂ ಇದರ ಪ್ರತಿಯನ್ನು ಮತ್ತು ಕೋಶವನ್ನು ಶುದ್ಧ ಗೊಳಿಸುವದರಲ್ಲಿ ಅನೇಕ ಸಲಹೆಗಳನ್ನು ಕೊಟ್ಟ ಶ್ರೀಮಾನ್ ವೀರಭದ್ರಪ್ಪನವರು ಕೊಪ್ಪಳ, ಎಮ್. ಎ., ಬಿ. ಟಿ., ಅಧ್ಯಾಪಕ, ಸರದಾರ ರಾಜಾ ಲಖಮಗೌಡಾ ಸರದೇಸಾಯಿ ಹಾಯಸ್ಕೂಲ, ಧಾರವಾಡ, ಶ್ರೀಮಾನ್ ಸಂಗಪ್ಪನವರು ಮಾಳವಾಡ, ಎಮ್. ಎ., ಕನ್ನಡ ಪ್ರೊಫೆಸರ, ಕರ್ನಾಟಕ ಕಾಲೇಜ, ಧಾರವಾಡ, ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣಿಕ, ಧಾರವಾಡ, ಮತ್ತು ಶ್ರೀಮಾನ್ ಶಂಕರನಾರಾಯಣ ಕೇಪು, ಅಸಿಸ್ಟಂಟ ಲಾಯಬ್ರೇರಿಯನ್, ಲಿಂಗರಾಜ ಕಾಲೇಜ, ಬೆಳಗಾವಿ, ಇವರಿಗೂ ಈ ಗ್ರಂಥವನ್ನು ಮುದ್ರಿಸಿಕೊಟ್ಟ ಶ್ರೀಮಾನ್ ಮಧುಲಿಂಗಪ್ಪನವರು ಹರ್ಡೆಕರ, ಇವರಿಗೂ (ವಾಙ್ಮಯ ಶಾಖೆ)ಯವರು ತಮ್ಮ ವಂದನೆಗಳನ್ನು ಸಮರ್ಪಿಸುತ್ತಾರೆ.

ಚೆನ್ನಬಸವ ಪುರಾಣದ ಕ್ರಯವು ಹೆಚ್ಚಿದ್ದರೂ ಜನರು ಅದಕ್ಕೆ ತಕ್ಕಮಟ್ಟಿಗೆ ಆಶ್ರಯ ಕೊಟ್ಟಿರುತ್ತಾರೆ. ಈ ಗ್ರಂಥಕ್ಕೂ ಇನ್ನು ಮುಂದೆ ಹೊರಡತಕ್ಕ ಗ್ರಂಥಗಳಿಗೂ ಅವರಿಂದ ಹೆಚ್ಚಾಗಿ ಆಶ್ರಯ ದೊರೆತು ಈ ಸಂಸ್ಥೆಯ ಕಾರ್ಯವು ಬೆಳೆಯುತ್ತ ಹೋಗುವಂತೆ ಶ್ರೀ ಪ್ರಭುದೇವರು ಅನುಗ್ರಹಿಸಲೆಂದು ಹಾರೈಸುತ್ತೇವೆ.

ಧಾರವಾಡ, ೨ ಮೇ ೧೯೩೮
[ಅಕ್ಷಯತ್ರಿತಿಯೇ (ಬಸವ ಜಯಂತಿ)
ವೈ॥ ಶು॥ ೩]

ವೀರಭದ್ರಪ್ಪಾ ಹಾಲಭಾವಿ

# ಈ ಗ್ರಂಥವನ್ನು ಸಿದ್ಧಪಡಿಸಲಿಕ್ಕೆ ಉಪಯೋಗಿಸಿದ ಮಾತೃಕೆಗಳು

ಅ— ಈ ಪ್ರತಿಯನ್ನು ಮಾಡಿದ ಕಾಲವನ್ನು ಪ್ರತಿಯಲ್ಲಿ ಬರೆದಿಲ್ಲ.

ಇ— ಈ ಪ್ರತಿಯು ದುರ್ಮುಖಿ ಸಂವತ್ಸರದ ಭಾದ್ರಪದಮಾಸ ಕೃಷ್ಣಪಕ್ಷ ರವಿವಾರ ಪೂರ್ವಾಷಾಢ ನಕ್ಷತ್ರ ಅಮೃತ ಯೋಗದಲ್ಲಿ ಸಮಾಪ್ತವಾಯಿತೆಂದು ಪ್ರತಿಯ ಅಂತ್ಯದಲ್ಲಿರುವುದು. ಇದಕ್ಕೆ ಸರಿಯಾದ ವರ್ಷವು ಗೊತ್ತಾಗಲೊಲ್ಲದು.

ಉ— ಈ ಪ್ರತಿಯನ್ನು ಮಾಡಿದ ಕಾಲವು ಪ್ರತಿಯಲ್ಲಿಲ್ಲ.

ಎ— ಅಪೂರ್ಣ.

ಒ— ಈ ಪ್ರತಿಯು ಬಹುಧಾನ್ಯ ಸಂವತ್ಸರ ನಿಜ ಶ್ರಾವಣ ಬಹುಳ ೧ಳ ದಿವಸ ಮುಗಿದುದು ಎಂದು ಪ್ರತಿಯ ಅಂತ್ಯದಲ್ಲಿರುವುದು. ಇದಕ್ಕೆ ಸರಿಯಾದ ತಾರೀಖು ೧೬೩೮ ನೆಯ ಇಸ್ವಿಯ ಆಗಸ್ಟ ೨೮ ಆಗುವದು.

ಕ— ಈ ಪ್ರತಿಯು ಪರಿಧಾವಿ ಸಂವತ್ಸರದ ಚೈತ್ರ ಬಹುಳ ೧೩ ಗುರುವಾರ ದಿವಸ ಸಮಾಪ್ತವಾಯಿತೆಂದು ಪ್ರತಿಯ ಅಂತ್ಯದಲ್ಲಿರುವುದು. ಇದಕ್ಕೆ ಸರಿಯಾದ ತಾರೀಖು ೧೭೩೨ ನೆಯ ಇಸ್ವಿಯ ಎಪ್ರಿಲ್ ೧೯ ಆಗುವುದು.

ಈ ಮೇಲಿನ ಪ್ರತಿಗಳೆಲ್ಲ ತಾಳೆವೋಲೆಯ ಮೇಲಿದ್ದು ಶ್ರೀ ಶಿವಯೋಗ ಮಂದಿರದಿಂದ ದೊರೆತಿರುವುವು.

ಖ— ಈ ಪ್ರತಿಯನ್ನು ಮಾಡಿದ ಕಾಲವು ದೊರೆಯುವುದಿಲ್ಲ. ಇದು ಶ್ರೀಮಾನ್ ವೀರಪ್ಪನವರು ಬಿಳೇಅಂಗಡಿ, ಬಿ. ಎ., ಎಲ್‌ಎಲ್. ಬಿ. ವಕೀಲ, ಹುಬ್ಬಳ್ಳಿ, ಇವರ ಕಡೆಯಿಂದ ದೊರೆತಿರುವುದು. ಇದು ಸಹ ತಾಳೆವೋಲೆಯ ಮೇಲಿರುವದು.

ಗ— ಈ ಪ್ರತಿಯು ಖರನಾಮಸಂವತ್ಸರದ ಮಾರ್ಗಶಿರ ಮಾಸದ ತಿಥಿ ತ್ರಯೋದಶಿ ಕುಜವಾರದ ನಕ್ಷತ್ರ ರೋಹಿಣಿಯೋಳ್

ಸಾಧ್ಯನಾಮಯೋಗದ ಕರಣ ಕೌಲವಾಕರಣದಲ್ಲು ಮುಗಿ ಯಿತು ಎಂದು ಪ್ರತಿಯ ಅಂತ್ಯದಲ್ಲಿರುವುದು. ಇದಕ್ಕೆ ಸರಿ ಯಾದ ಶಾಲಿವಾಹನ ಶಕ ವರ್ಷವು ೧೬೩೩, ಕ್ರಿ. ಶ. ವರ್ಷ ೧೭೧೧ ಆಗುವುದು. ಈ ಪ್ರತಿಯು ಕೋರೀ ಕಾಗದದ ಮೇಲಿದ್ದು ಶ್ರೀಮಾನ್ ಬುದ್ಧಯ್ಯ ಸ್ವಾಮಿ ಪುರಾಣಿಕ, ಧಾರ ವಾಡ, ಇವರ ಕಡೆಯಿಂದ ದೊರೆತಿರುವುದು.

**ಚ—** ಈ ಪ್ರತಿಯ ಆರಂಭದಲ್ಲಿ . ಶಾಲಿವಾಹನಶಕ ೧೭೬೬ ವಿಶ್ವಾ ವಸು ಸಂವತ್ಸರದ ಕಾರ್ತಿಕ ಬಹುಳ ೧೨ ಬುಧವಾರ ದಿವಸ ಲಿಖಿಸುವದಕ್ಕೆ ಶುಭಮಸ್ತು ಎಂದಿರುವುದು. ಇದರ ಕ್ರಿ. ಶ. ವರುಷವು ೧೮೪೪. ಈ ಪ್ರತಿಯು ಸಹ ಕೋರೀ ಕಾಗದದ ಮೇಲಿದ್ದು ಶ್ರೀಮಾನ್ ವೀರಪ್ಪನವರು ಬಿಳೇಅಂಗಡಿಯವರ ಕಡೆಯಿಂದ ದೊರೆತಿರುವುದು.

**ಜ—** ಈ ಪ್ರತಿಯು ವ್ಯಯನಾಮ ಸಂವತ್ಸರದ ಆಶ್ವಿಜ ಮಾಸದ ಗುರುವಾರ ಭರಣೀ ನಕ್ಷತ್ರದಲ್ಲಿ ಮುಗಿಯಿತು ಎಂದು ಪ್ರತಿಯ ಅಂತ್ಯದಲ್ಲಿರುವುದು. ಇದಕ್ಕೆ ಸರಿಯಾದ ತಾರೀಖು ೧೮೨೬ ನೆಯ ಇಸ್ವಿಯ ಅಕ್ಟೋಬರ ೧೭ ಆಗುವುದು. ಇದು ಸಹ ಕೋರಿ ಕಾಗದ ಮೇಲಿದ್ದು ಶ್ರೀಮಾನ್ ವೀರಭದ್ರಪ್ಪನವರು ಹಾಲಬಾವಿ, ನಿವೃತ್ತ ೧ನೆಯ ವರ್ಗ ಸಬ್‌ಜಜ್ಜ ಧಾರವಾಡ ಇವರ ಕಡೆಯಿಂದ ದೊರೆತಿರುವುದು.

**ಟ—** ಈ ಪ್ರತಿಯನ್ನು ಬರೆದ ಕಾಲವು ಬರೆದಿರುವದಿಲ್ಲ. ಇದು ವಾಙ್ಮಯ ಶಾಖೆಯ ಸಂಗ್ರಹದಲ್ಲಿರುವ ತಾಳೆವೋಲೆಯ ಪ್ರತಿಯು.

**ಮು—** ಚೆನ್ನಪುರಿ ರಾಜಧಾನಿಯಲ್ಲಿ ಕ್ರಿ. ಶ. ೧೮೮೩ ನೆಯ ಇಸ್ವಿ ಯಲ್ಲಿ ಅಚ್ಚಾದದ್ದು.

**'ಗ'** ಮಾದರಿಯ ಪುಟವೊಂದನ್ನು ಈ ಮುನ್ನುಡಿಯ ಅಂತ್ಯದಲ್ಲಿ ಜೋಡಿಸಿದೆ. ಈ ಪ್ರತಿಯನ್ನು ಮಾಡಿದ ಕಾಲವು ಸನ್ ೧೭೧೧ ಇಸ್ವಿಯಾ

ದರೂ ಬರಹಗಾರರು ಬಹಳ ಹಿಂದಿನ ಕಾಲದ ಬರಹದ ಪದ್ಧತಿಯನ್ನು ಅನುಸರಿಸಿದಂತೆ ಕಾಣುತ್ತದೆ. ಆ ಕಾಲದಲ್ಲಿ ಈ ಪದ್ಧತಿಯು ಎಷ್ಟರಮಟ್ಟಿಗೆ ಪ್ರಚಾರದಲ್ಲಿತ್ತೆಂಬುದನ್ನು ಸಂಶೋಧಕರು ವಿಚಾರ ಮಾಡತಕ್ಕ ಸಂಗತಿಯಾಗಿದೆ

ಈ ಎಲ್ಲ ಪ್ರತಿಗಳಲ್ಲಿ ಪ್ರತಿಯೊಂದು ಗತಿಯ ಆರಂಭದಲ್ಲಿ ಅವತರಿಸಿದ ವಚನಗಳು ಒಂದೇಸವನಾಗಿಲ್ಲ. ಖ ಪ್ರತಿಯಲ್ಲಂತೂ ಈ ವಚನಗಳ ಸಂಖ್ಯೆ ೩೬೦ ರ ವರೆಗೆ ಹೋಗಿರುವುದಲ್ಲದೆ, ಅದರಲ್ಲಿ ಒಟ್ಟು ಕಂದಗಳು ೧೯, ವೃತ್ತಗಳು ೪ ಮತ್ತು ವಾಚ್ಯಗಳು ೨೦ ಇರುವುವು. ಇವೆಲ್ಲ ವಚನಗಳಲ್ಲಿ ಯೋಗ್ಯ ಕಂಡವುಗಳನ್ನು ಮಾತ್ರ ಆರಿಸಿ ಆ ಆ ಗತಿಗಳ ಆರಂಭದಲ್ಲಿ ಕೊಟ್ಟಿದೆ.

ಟ ಮತ್ತು ಮ ಪ್ರತಿಗಳ ಹೊರತಾಗಿ ಉಳಿದ ಪ್ರತಿಗಳನ್ನು ಒದಗಿಸಿ ಕೊಟ್ಟ ಮಹನೀಯರಿಂದ ಸಾಹಿತ್ಯ ಸಮಿತಿಯವರು ತುಂಬಾ ಉಪಕೃತರಾಗಿದ್ದಾರೆ.

---

# ಪ್ರಸ್ತಾವನೆ

## ೧ ಗ್ರಂಥಕರ್ತ

ಪ್ರಭುಲಿಂಗಲೀಲೆಯಲ್ಲಿ ಕನ್ನಡ ಕವಿಗಳ ವಾಡಿಕೆಯಂತೆ ಮೊದಲು ಇರಬೇಕಾದ ಕವಿಯ ಹೆಸರು, ವಂಶ, ಗುರುಪರಂಪರೆ ಮುಂತಾದ ಸಂಗತಿಗಳು ಕಂಡು ಬರುವುದಿಲ್ಲ; ಆದರೆ ಈ ಕಾವ್ಯವನ್ನು ಚಾಮರಸನೆಂಬ ವೀರಶೈವ ಕವಿಯು ರಚಿಸಿದನೆಂದು ಪ್ರತೀತಿಯಿರುವುದು. ಕೆಲವು ಕೈಬರೆಹದ ಪ್ರತಿಗಳಲ್ಲಿ ಕಾವ್ಯಾರಂಭಕ್ಕೆ ಮುಂಚೆ ಐದು ಪದ್ಯಗಳು[೧] ದೊರೆಕೊಳ್ಳುತ್ತವೆ.

---

೧ ಶ್ರೀ ಗುರು ಗುಹೇಶಶರಣಂ । ರಾಗದ್ವೇಷಾದಿವಿರಹಿತಾಂತಃಕರಣಂ ॥
ಯೋಗಸಮುತಾಚರಣಂ ನಿಖಿ । ಳಾಗಮನಿಪುಣಂ ಸನಾಮಸೀಮಂ ಚಾಮಂ ॥
ಶ್ರೀ ಗುರು ಗುಹೇಶ್ವರನ ದಿ । ವ್ಯಾಗಮಲೀಲೆಯಲಿ ಸಂದ ಗತಿಗಳ ಮೊದಲೊಳ್॥
ಕೈಗೆಯ್ದು ಸೂಚಿತಾರ್ಥದ । ಭಾಗೆಯ ನಾನೊರೆವೆನಿಳೆಗೆ ವಸ್ತುಕದಿಂದಂ ॥
ವಿನುತ ಶ್ರೀ ಪ್ರಭುಲಿಂಗಲೀಲೆಯೆನಲುಂ ಮೇಣ್ ಲಿಂಗಲೀಲಾಬ್ಧಿಯೆಂ।
ದೆನಲುಂ ಭಾವಿಸುವಂದು ಲೀಲೆಯೆನಲುಂ ಬಲ್ಲರ್ಗೆ ತತ್ತ್ರೈವಿಧ ॥
ಸ್ವನಮೇಕಾರ್ಥತೆಯೆಂದು ಲಾಲಿಸಿ ಮಹೋತ್ಸಾಹಂಗಳಂ ತಾಳ್ದು ಸ ।
ಜ್ಜನಮೆಲ್ಲಂ ಸುಖಿಸುತ್ತುಮಿರ್ಕೆ ಮೆಚ್ಚಿವಾಚಂದ್ರಾರ್ಕತಾರಂಬರಂ ॥
ಪ್ರಭುಲಿಂಗಲೀಲೆಗೊಪ್ಪಂ । ಶುಭವಿಪ್ಪತ್ತೈದುಗತಿಗಳಂತಾ ಗತಿಯೊಳ್ ॥
ಪ್ರಭುಲಿಂಗಲೀಲೆ ಗಗನ । ಪ್ರಭೆ ಕಿಱುಗನ್ನಡಿಯೊಳೆಸೆವ ತೆಱದಿಂದೆಸೆಗುಂ ॥
ಮೊದಲ ಗತಿಯೊಳ್ ಪುರಾತರ । ಪದಪದ್ಮಸ್ತುತಿ ಸಮಸ್ತಶಕ್ತ್ಯಾದಿಶಾ ॥
ಸ್ಪದದೇವತಭಾಷಾವಳಿ । ಮುಪದಿಂ ಪ್ರಭುಲಿಂಗಲೀಲೆಯೊಳ್ ಪ್ರಕಟಿಸುಗುಂ ॥

ಈ ಪದ್ಯಗಳು ಹಲವು ಪ್ರತಿಗಳಲ್ಲಿ ದೊರೆಯುತ್ತವೆ. ಕೆಳಗಿನ ಪದ್ಯವು 'ಅ' 'ವ' ಚಿಃ ಪ್ರತಿಗಳಲ್ಲಿ ಮೊದಲಿನ ೫ ಪದ್ಯಗಳು ಮುಗಿದ ಮೇಲೆ ಹೆಚ್ಚಾಗಿ ದೊರೆಯುತ್ತದೆ :

ಬಗೆಯಲ್ ಭಕ್ತಿಯನೆಯ್ದುವರ್ಗೆ ಭವಬಂಧಭ್ರಾಂತಿಯಂ ಬಿಟ್ಟು ನೆ ।
ಟ್ಟಗೆ ನಿಶ್ಚಿಂತೆಯೊಳಿಪ್ಪವರ್ಗೆ ಸತತೋತ್ಸಾಹಂಗಳಂ ಮಾಡುವ ।
ರ್ಗೆ ಗುರುಸ್ವಾಮಿಯ ಸುಪ್ರಸಾದದಿನಿದಂ ಸಂಸೇವಿಪರ್ಗಾದುದೀ ।
ಜಗದೊಳ್ ಶ್ರೀ ಪ್ರಭುಲಿಂಗಲೀಲೆ ಮೆರೆಗುಂ ಚಂದ್ರಾರ್ಕತಾರಂಬರಂ ॥

ಅವುಗಳಲ್ಲಿ 'ಚಾಮ' ಎಂಬ ಹೆಸರೂ 'ಮಾನೊರೆವೆಸೆಳೆಗೆ ವಸ್ತುಕದಿಂದಂ' ಎಂಬ ಮಾತೂ ಕವಿಯ ಹೆಸರನ್ನು ಸ್ಪಷ್ಟವಾಗಿ ತಿಳಿಸುತ್ತವೆಯೆಂದು ಹೇಳಬಹುದು. ಆದರೆ ಈ ಪದ್ಯಗಳು ಎಲ್ಲಾ ಮಾತೃಕೆಗಳಲ್ಲಿಯೂ ಕಂಡು ಬಾರದಿರುವುದರಿಂದ ಇವನ್ನು ಕವಿಯೇ ಬರೆದಿರುವನೆಂಬುದಕ್ಕೆ ಸಂದೇಹ ವುಂಟಾಗುತ್ತದೆ.

ಚಾಮರಸನೇ ಈ ಕಾವ್ಯದ ಕರ್ತೃವೆನ್ನುವುದಕ್ಕೆ ಪ್ರಬಲವಾದ ಗ್ರಂಥಸ್ಥ ಆಧಾರಗಳು ಸಿಕ್ಕದೇ ಇದ್ದರೂ ಬಾಹ್ಯಪ್ರಮಾಣಗಳು ಸಾಕಷ್ಟು ಉಪಲಬ್ಧ ವಾಗಿರುವುವು. ಪ್ರೌಢರಾಯನ ಕಾವ್ಯವನ್ನೊರೆದ ಅದೃಶ್ಯಕವಿ[೧], 'ಗುರು ರಾಜಚಾರಿತ್ರ-ರಾಘವಾಂಕಚಾರಿತ್ರ' ಎಂಬ ಗ್ರಂಥಗಳನ್ನು ರಚಿಸಿದ ಸಿದ್ಧ ನಂಜೇಶ[೨], ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರವನ್ನು ಬರೆದ ಶಾಂತಲಿಂಗದೇಶಿಕ[೩], ಚೋರಬಸವಚರಿತ್ರೆಯ ಕರ್ತನಾದ ಶಂಕರಕವಿ[೪], ಇವರೆಲ್ಲರೂ ಚಾಮರಸನೇ ಪ್ರಭುಲಿಂಗಲೀಲೆಯನ್ನು ಬರೆದನೆಂದು ಹೇಳಿದ್ದಾರೆ. ಪ್ರಭುಲಿಂಗಲೀಲೆಯನ್ನು ತೆಲುಗಿನಲ್ಲಿ ಭಾಷಾಂತರಿಸಿದ ಕವಿಗಳಾದ ಪಿಡುಪರ್ತಿ ಸೋಮನಾಥ[೫] ಮತ್ತು ಪಿಡುಪರ್ತಿ ಬಸವ ಕವಿ[೬] ಇವರೂ, ಮರಾಠಿಯಲ್ಲಿ ಅನುವಾದ ಮಾಡಿದ ಬ್ರಹ್ಮದಾಸನೂ[೭] ಚಾಮರಸನು ರಚಿಸಿದ ಕಾವ್ಯವನ್ನೇ ಅನುವಾದಿಸಿರುವೆವೆಂದು ಹೇಳಿದ್ದಾರೆ.

---

೧ ಕ್ರಿ. ಶ. ೧೫೮೦ (ಸುಮಾರು): ಕ। ಕ। ಚರಿತೆ, ಭಾಗ ೨, ಪುಟ ೩೦೫-೬; ಈ ಕವಿಯ ಪ್ರೌಢ ದೇವರ ಕಾವ್ಯದ ಸಂಧಿ ೨೧, ಪದ್ಯ ೩೦-೩೧. ೨ ಕ್ರಿ. ಶ. ೧೬೫೦ (ಸುಮಾರು): ಕ। ಕ। ಚರಿತೆ, ಭಾಗ ೨, ಪುಟ ೩೭೯-೮೧; ಈತನ ರಾಘವಾಂಕಚಾರಿತ್ರದ ಸಂಧಿ ೧೪, ಪದ್ಯ ೨, ಮತ್ತು ಗುರುರಾಜ ಚಾರಿತ್ರದ ಸಂಧಿ ೧೩, ಪದ್ಯ ೩೩. ೩ ಕ್ರಿ. ಶ. ೧೬೭೨: ಕ। ಕ। ಚರಿತೆ, ಭಾಗ ೨, ಪುಟ ೪೫೪-೫; ಹಾಗೂ ಅದೇ ಭಾಗದ ಪುಟ ೫೭-೬೦. ೪ ಕ್ರಿ. ಶ. ೧೭೬೩: ಕ। ಕ। ಚರಿತೆ, ಭಾಗ ೩, ಪುಟ ೧೧೫; ಈತನ ಚೋರಬಸವ ಚಾರಿತ್ರೆಯ ೧ ನೆಯ ಮತ್ತು ೧೩ ನೆಯ ಸಂಧಿಗಳು. ೫ ಕ್ರಿ. ಶ. ೧೫೨೦ : Telugu Literature by P. Chenchiah and Raja M. Bhujanga Rao, P. 52 & 77. ೬ ಕ್ರಿ. ಶ. ೧೫೧೦ (ಸುಮಾರು) : Telugu Literature by P. M. Bhujanga Rao, P. 77. ೭ ಇದನ್ನು ಪ್ರತಿ ಮಾಡಿದ ಕಾಲವು ಕ್ರಿ. ಶ. ೧೭೨೨ ಎಂಬುದು ಒಂದು ಪ್ರತಿಯಿಂದ ಗೊತ್ತಾಗುತ್ತದೆ. ಆದುದರಿಂದ ಬ್ರಹ್ಮದಾಸನು ಇದಕ್ಕೂ ಮೊದಲು ಇದ್ದಿರಬೇಕು.

ಚೆನ್ನಬಸವಪುರಾಣವನ್ನು ಬರೆದ ವಿರೂಪಾಕ್ಷ ಪಂಡಿತನೂ೧, ಪ್ರಭುದೇವರ ಪುರಾಣವನ್ನು ರಚಿಸಿದ ಹರೀಶ್ವರನೂ೨, ಚತುರಾಚಾರ್ಯ ಪುರಾಣವನ್ನು ಬರೆದ ಸಂಪಾದನೆಯ ಪರ್ವತೇಶ್ವರನೂ೩ ದ್ವಿಪದಕಲಿಯಾರ ಕಾವ್ಯವನ್ನು ರಚಿಸಿದ ಚೆನ್ನಮಲ್ಲೇಶನೂ೪ ಚಾಮರಸನನ್ನು ಪೂರ್ವಕವಿಮಾಲಿಕೆಯಲ್ಲಿ ಸೇರಿಸಿ ಹೊಗಳಿದ್ದಾರೆ. ಈ ಎಲ್ಲ ಆಧಾರಗಳನ್ನು ಅವಲೋಕಿಸಿದರೆ ಪ್ರಭುಲಿಂಗಲೀಲೆಯ ಕರ್ತನು ಚಾಮರಸನೆಂದೇ ನಿರ್ಧರಿಸಬೇಕಾಗುತ್ತದೆ.

## ೨ ಚಾಮರಸನ ಚರಿತ್ರೆ

ಚಾಮರಸನ ಜೀವಿತದ ವಿಷಯವಾಗಿ ಮೇಲೆ ಕಾಣಿಸಿದ ಕವಿಗಳ ಗ್ರಂಥಗಳಲ್ಲಿ ದೊರೆಯುವ ವಿಷಯಗಳನ್ನೇ ಸಂಗ್ರಹಿಸಿ ಇಲ್ಲಿ ಹೇಳುವೆವು. ಸಂದೇಹಕ್ಕಾಸ್ಪದವಾದ ಸಂಗತಿಗಳನ್ನು ಬಿಟ್ಟು ನಂಬಲಿಕ್ಕೆ ತಕ್ಕುವಾದ, ಆ ಆ ಗ್ರಂಥಗಳಲ್ಲಿ ಬಹುಮತವಿದ್ದ ವಿಷಯಗಳನ್ನೆ ಇಲ್ಲಿ ಬರೆಯಲಾಗಿದೆ.

ಚಾಮರಸನ ತಾಯಿತಂದೆಗಳ ಹೆಸರು ಗೊತ್ತಾಗುವಂತಿಲ್ಲ. ಇವನು ನಾಗಣಾಪುರದವನಾಗಲಿ೫ ಗದುಗಿನವನಾಗಲಿ೬ ಆಗಿರಬೇಕು. ಬಹು ದಿವಸ ಗದುಗಿನಲ್ಲಿ ವಾಸವಾಗಿದ್ದನೆನ್ನಲು ಸಂದೇಹವಿಲ್ಲ. ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಈ ಕವಿಯು ಜೀವಿಸಿದ್ದನೆಂದೂ ಆ ರಾಯನ ಆಸ್ಥಾನದಲ್ಲಿದ್ದನೆಂದೂ ತಿಳಿಯುತ್ತದೆ೭. ವಿಜಯನಗರದ ನೂರೊಂದು ವಿರಕ್ತರ ಕೂಡ ಈತನ ಹೆಸರು ಅಲ್ಲಲ್ಲಿ ಉಕ್ತನಾಗುವುದರಿಂದ ಇವನೂ ವಿರಕ್ತ

---

(೧) ಕ್ರಿ.ಶ. ೧೫೮೪.೫ : ಈತನ ಚೆನ್ನಬಸವಪುರಾಣದ ಸಂಧಿ ೧. ಪದ್ಯ ೨೯. (೨) ಕ್ರಿ.ಶ. ೧೬೦೬ : ಕ। ಕ। ಚರಿತೆ ಭಾಗ ೨, ಪುಟ ೩೫೧-೨. (೩) ಕ್ರಿ. ಶ. ೧೬೯೮.
(೪) ಕ್ರಿ. ಶ. ೧೭೦೦.

೫ ಪ್ರಭುದೇವರ ಸಾಂಗತ್ಯ (ವೇ॥ ಬುದ್ಧಯ್ಯಸ್ವಾಮಿ ಪುರಾಣಿಕಗವರು ಪ್ರಕಟಿಸಿದ ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆ: ಪುಷ್ಪ ೫, ಪದ್ಯ ೧೨.)

ಮೂಗಳ ಕಣ್ಣನೀಶ್ವರನಿಂದ ಪಡೆದರೂ । ಬಾಗಿಲ ಹರನ ಕಾಯಿಸಿದ ॥
ನಾಗಣಾಪುರದ ಚಾಮರಸ ಮಯೂರನ । ಬೇಗದಿ ನಾ ಬಲಗೊಂಬೆ ॥

ಮರಾಠಿ ಭಾಷಾಂತರದಲ್ಲಿಯೂ ಚಾಮರಸನು ನಾಗಣಾಪುರದವನೆಂದು ಹೇಳಿದೆ.
೬ ಚೋರಬಸವ ಚರಿತ್ರೆ : ಸಂಧಿ ೧, ಪದ್ಯ ೩೧, "ಗುರುವೇನಾಂ ಪುಟ್ಟಿದೆಡೆ ಗದಗು" ಇತ್ಯಾದಿ. ೭ ಪ್ರೌಢರಾಯನ ಕಾವ್ಯ; ಭೈರವೇಶ್ವರ ಕಾವ್ಯಕಥಾಸೂತ್ರ ರತ್ನಾಕರ.

ನಾಗಿರಬಹುದು. ಗ್ರಂಥದಲ್ಲಿ ತನ್ನ ಬಗ್ಗೆ ಏನನ್ನೂ ಹೇಳಿಕೊಳ್ಳದಿರುವುದಕ್ಕೆ ಇದೂ ಒಂದು ಕಾರಣವಾಗಿರಬಹುದು. ಗ್ರಂಥದಲ್ಲಿ ತನ್ನ ಬಗ್ಗೆ ಏನನ್ನೂ ಹೇಳಿಕೊಳ್ಳದಿರುವುದಕ್ಕೆ ಇದೂ ಒಂದು ಕಾರಣವಾಗಿರಬಹುದು. ಗದುಗಿನ ಭಾರತವನ್ನು ರಚಿಸಿದ ಸುಪ್ರಸಿದ್ಧ ಬ್ರಾಹ್ಮಣ ಕವಿಯಾದ ಕುಮಾರವ್ಯಾಸನು ಚಾಮರಸನ ತಂಗಿಯ ಗಂಡನೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ೧. ಈ ಕುಮಾರವ್ಯಾಸನನ್ನೂ ಮುಕುಂದಪೆದ್ದಿಯೆಂಬ ಇನ್ನೊಬ್ಬ ಬ್ರಾಹ್ಮಣ ಪಂಡಿತನನ್ನೂ ಚಾಮರಸನು ವೀರಶೈವ ಮತದ ಶ್ರೇಷ್ಠತೆಯ ವಾದದಲ್ಲಿ ಗೆದ್ದನೆಂದು ಕೆಲವರು ಊಹಿಸುತ್ತಾರೆ೨. ಈ ಊಹೆಗೆ ಚಾಮರಸನ "ವೀರಶೈವ ಮತಸಾರೋದ್ಧಾರ" ಹಾಗೂ "ಅನ್ಯಮತ ಕೋಳಾಹಳ" ಎಂಬ ಬಿರುದುಗಳೂ, ಆತನು ಪ್ರಭುಲಿಂಗಲೀಲೆಯನ್ನು ಬರೆಯಲಿಕ್ಕೆ ಕೆಲ ಗ್ರಂಥಗಳಲ್ಲಿ ಹೇಳಿದ೩ ಕಾರಣಗಳೂ ಆಧಾರವಾಗಿರಬಹುದು. ಚಾಮರಸನು ಪ್ರಭುಲಿಂಗಲೀಲೆಯನ್ನು ರಚಿಸಲಿಕ್ಕೆ ಕಾರಣವಾದ ಪ್ರಸಂಗವು ಈ ರೀತಿಯಾಗಿ ಗ್ರಂಥಗಳಲ್ಲಿ ಹೇಳಲಾಗಿದೆ; "ವಿಜಯನಗರದ ಅರಸನಾದ ಪ್ರೌಢದೇವರಾಯನು ಭಾರತವನ್ನು ಕನ್ನಡದಲ್ಲಿ ಬರೆಯಲಿಕ್ಕೆ ಚಾಮರಸನಿಗೂ ಕುಮಾರವ್ಯಾಸನಿಗೂ ಹೇಳಿದನು. ಅದರಂತೆ ಇವರಿಬ್ಬರೂ ಬರೆದ ಕೃತಿಗಳನ್ನು

---

(೧) ಚೋರಬಸವ ಚರಿತ್ರ: ಸಂಧಿ ೧, ಪದ್ಯ ೩೧. (೨) Indian Antiquary Vol. LVII P. 79; E. P. Rice's History of Kanarese Literature : P. 68, '.Chemarasa was a valiant champion of the Veera-shaivas and held disputation with Vaishnavas in the presence of the King". (೩) ಪ್ರೌಢರಾಯನ ಕಾವ್ಯ : ಸಂಧಿ ೧, ಪದ್ಯ ೩೯ರಿಂದ ಕೊನೆವರೆಗೆ; ಚೋರಬಸವ ಚರಿತ್ರೆ, ಸಂಧಿ ೧; ಭೈರವೇಶ್ವರ ಕಥಾಸೂತ್ರ ರತ್ನಾಕರ ಗುರುರಾಜಚಾರಿತ್ರದೊಳಗಣ:

ಭಾರತವನೊರೆದಾ ಕುಮಾರವ್ಯಾಸಂಗೊಸೆದು ।
ಭೂರಮಣನೊಲಿದು ಕನಕ ಸ್ನಾನಮಂ ಮಾಚಿಪ್ಪೊ
ಡಾರಂಭಿಸಲ್ಕೆ ಸತ್ತವರ ಕಥೆಗುಂಟೆ ಕನಕಸ್ನಾನ ತೆಗೆಯೆಂನ್ನಲು ॥
ಧಾರಿಣಿಯೊಳುಳ್ಳ ಕಥೆಯಲ್ಲ ಸತ್ತವರ ಕಥೆ ।
ತೋಱು ಬದುಕಿದರ ಕಥೆಯೊಳನೆ ಎನಲೊಳನೆಂಮು ॥
ಚಾರುಪ್ರಭುಲಿಂಗಲೀಲೆಯನೊರೆದು ಮೆಱೆಸಿದಂ ಲೀಲೆಯಾ ಚಾಮರಸನು ॥

ವಿದ್ವಾಂಸರು ಪರೀಕ್ಷಿಸಿ ಚಾಮರಸನ ಕೃತಿಯು ಹೆಚ್ಚು ರಸವತ್ತಾದುದೆಂದು ಅಭಿಪ್ರಾಯಪಡಲು ಕುಮಾರವ್ಯಾಸನು ಖಿನ್ನನಾಗಿ ತನ್ನ ಹೆಂಡತಿಯ ಕೈಯಿಂದ ಚಾಮರಸನ ಕೃತಿಯನ್ನು ಸುಡಿಸಿದನು. ತನ್ನ ಕಾವ್ಯವು ನಾಶವಾದುದಕ್ಕಾಗಿ ಚಾಮರಸನು ಚಿಂತೆಯಲ್ಲಿದ್ದಾಗ ಆತನ ಕನಸಿನಲ್ಲಿ ಈಶ್ವರನು ಬಂದು ಅನ್ಯದೈವವನ್ನು ಕೀರ್ತಿಸಿದ ಫಲವಾಯಿತೆಂದು ಹೇಳಿದುದರಿಂದ ಚಾಮರಸನು ಎಚ್ಚೆತ್ತು ದೀಕ್ಷೆಗೊಂಡು ಹಂಪೆಯಲ್ಲಿ ವಾಸಿಸತೊಡಗಿದನು. ಇತ್ತ ಕುಮಾರವ್ಯಾಸನ ಕೃತಿಗೆ ರಾಜಮನ್ನಣೆ ದೊರೆತು ಆತನಿಗೆ ಕನಕಸ್ನಾನವನ್ನು ಮಾಡಿಸುವ ವ್ಯವಸ್ಥೆ ನಡೆದಾಗ ನೂರೊಂದು ವಿರಕ್ತರಲ್ಲಿ ಮುಖ್ಯರಾದ ಜಕ್ಕಣಾರ್ಯ ಮೊದಲಾದವರು ಸತ್ತವರ ಕಥೆಗೆ ಈ ಮನ್ನಣೆಯು ಸಲ್ಲದೆಂದು ತಡೆದರು. ಆಗ ಅವರಿಗೂ ಮುಕುಂದಪೆದ್ದಿ ಮೊದಲಾದವರಿಗೂ ವಾಗ್ವಾದವಾಗಿ ಸತ್ತವರಲ್ಲದವರ ಕಥೆಯನ್ನು ತರಿಸುವೆನೆಂದು ಹೇಳಿ ಜಕ್ಕಣಾದಿಗಳು ಚಾಮರಸನಿಂದ ದಿನವೊಂದಕ್ಕೆ ೧೦೧ ಪದ್ಯಗಳಂತೆ ೧೧ ದಿವಸಗಳಲ್ಲಿ ೧೧೧೧ ಪದ್ಯಗಳುಳ್ಳ ಪ್ರಭುಲಿಂಗಲೀಲೆಯನ್ನು ಬರೆಸಿ ಅದನ್ನು ಪ್ರೌಢರಾಯನ ಸಭೆಯಲ್ಲಿ ಓದಿಸಿ ಅದಕ್ಕೆ ಉಚಿತ ಮನ್ನಣೆಗಳನ್ನು ಗಳಿಸಿದರು. ಪ್ರೌಢರಾಯನು ವೀರಶೈವ ದೀಕ್ಷೆಯನ್ನು ಸ್ವೀಕರಿಸಿದನು. ಜಕ್ಕಣಾರ್ಯನು ಮಂತ್ರಿಪದದಿಂದ ನಿವೃತ್ತನಾಗಿ ಅದನ್ನು ಚಾಮರಸನಿಗೆ ಕೊಡಿಸಿದನು[೧]".

## ೩ ಚಾಮರಸನ ಕಾಲ

ಚಾಮರಸನು ವಿಜಯನಗರದ ಪ್ರೌಢದೇವನ ಕಾಲದಲ್ಲಿ ಆತನ ಸಭೆಯಲ್ಲಿದ್ದನೆಂದೂ ನೂರೊಂದು ವಿರಕ್ತರೊಡನೆ ವಾಸಿಸುತ್ತಿದ್ದನೆಂದೂ ಗ್ರಂಥಗಳಿಂದ ಗೊತ್ತಾಗುವುದರಿಂದಲೂ ಪ್ರೌಢದೇವನು ಕ್ರಿ. ಶ ೧೪೧೯ ರಿಂದ ೧೪೪೬ರ ವರೆಗೆ ಆಳಿದನೆಂದು ಇತಿಹಾಸದಿಂದ ತಿಳಿಯುವುದರಿಂದಲೂ ಚಾಮರಸನು ೧೪೩೦ರ ಸುಮಾರಕ್ಕೆ ಇದ್ದನೆಂದು ಕವಿಚರಿತೆಕಾರರು ಗ್ರಹಿಸಿದ್ದಾರೆ[೨]. ಇ. ಪಿ. ರೈಸ್ ಇವರು ಇದೇ ಕಾಲವನ್ನು ಒಪ್ಪಿದ್ದಾರೆ[೩]. ಇದು ಸೂಕ್ತವೆಂದೇ

---

೧. ಪ್ರೌಢರಾಯನ ಕಾವ್ಯ : ಸಂಧಿ ೨೦, ಪದ್ಯ ೩೪; Indian Antiquary: Vol. LVIII, P. 79.

೨. ಕರ್ನಾಟಕ ಕವಿ ಚರಿತೆ : ಭಾಗ ೨, ಪುಟ ೫೭-೬೦ ಮತ್ತು ೬೪-೬೬.

೩. History of Kanarese Literature, P. 68.

ತೋರುತ್ತದೆ. ಚಾಮರಸನಿಗೆ ಬೇರೆ ಕಾಲವನ್ನು ಹೇಳುವ ಇತರ[೧] ಪಂಡಿತರಿರುವರಾದರೂ ಅವರ ಆಧಾರಗಳು ಅಷ್ಟು ಬಲವಂತವಾದುವಲ್ಲ.

## ೪ ಪ್ರಭುಲಿಂಗಲೀಲೆಯ ಕಥೆ

ಪ್ರಭುಲಿಂಗಲೀಲೆಗೆ, ವೀರಶೈವರಲ್ಲಿ ಕೇವಲ ವೈರಾಗ್ಯಮೂರ್ತಿಯೆಂದು ಅತ್ಯಂತ ವಿಖ್ಯಾತಿಯನ್ನು ಹೊಂದಿದ, ಬಸವಣ್ಣನಿಂದ ಸ್ಥಾಪಿತವಾದ ಶೂನ್ಯ ಸಿಂಹಾಸನದ ಆದ್ಯಗುರುವಾದ ಶ್ರೀಮದಲ್ಲಮಪ್ರಭುವಿನ ಚರಿತ್ರೆಯು ವಿಷಯವಾಗಿದೆ. ಈ ಕಾವ್ಯದಲ್ಲಿ ಬಂದಂತೆ ಅದನ್ನು ಸಂಗ್ರಹಿಸಿ ಕೆಳಗೆ ಕೊಟ್ಟಿರುವೆವು:

ಕೈಲಾಸದಲ್ಲಿ ಶಿವನ ಒಡ್ಡೋಲಗದಲ್ಲಿ ಒಂದು ದಿನ ಶಿವನನ್ನು ಕುರಿತು ಪಾರ್ವತಿಯು–ದೇವಾ, ನಿನ್ನ ಒಡ್ಡೋಲಗದಲ್ಲಿದ್ದ ಘನಮಹಿಮರೆಲ್ಲರು ಭವಕೆ ಬಾರದೆ ನಿತ್ಯಸುಖದಿಂದಿರುವರೋ ಇಲ್ಲವೇ ಇವರಿಗೆ ನೆಲೆಯೇ ಇಲ್ಲವೋ ? ಎಂದು ಕೇಳಲು, ಶಂಕರನು–ನಾಮರೂಪಕ್ರಿಯೆಗಳನ್ನು ಗೆಲಬಲ್ಲವರ ಹೊರತು ಉಳಿದವರಾರಿಗೂ ನಿತ್ಯಸುಖವು ದೊರೆಯಲಾರದು. ಅದು ಕಾರಣ ಭೂಮಿಯಲ್ಲಿ ಮಾನವ ಶರೀರದಿಂದ ಜನಿಸಿ ಸಾಧನಮಾಡಿ ನಿಜವನರಿಯ ಬೇಕಾಗುವುದು—ಎಂದು ಹೇಳಿದನು. ಪಾರ್ವತಿಯು ಭೂಲೋಕದಲ್ಲಿ ನಿಜವನ್ನು ಬೋಧಿಸುವ ಗುರು ಯಾರು ? ಎಂದು ಕೇಳಲು, ಸುಜ್ಞಾನಿ ನಿರಹಂಕಾರರೆಂಬವರಿಗೆ ಮಗನಾದ ನನ್ನ ನಿಜಸ್ವರೂಪನಾದ ಅಲ್ಲಮನು, ಎಂದು ಶಂಕರನು ಆತನ ಮಹಾತ್ಮ್ಯವನ್ನು ಬಣ್ಣಿಸುವನು. ಪಾರ್ವತಿಯು, ಅಲ್ಲಮನು ತನಗೆ ಗೊತ್ತಿದ್ದವನೆ ಆದುದರಿಂದ ಆವನನ್ನು ಸುಲಭನಾಗಿ ಒಲಿಸಿ

---

೧ ಡಾ॥ ವೆಂಕಟಸುಬ್ಬಯ್ಯ : ಕೆಲವು ಕರ್ನಾಟಕ ಕವಿಗಳ ಜೀವನ ಕಾಲ ವಿಚಾರ : ಪುಟ ೧೬೭; ಮೈಸೂರ ಯುನಿವ್ಹರ್ಸಿಟಿಯ ಕುಮಾರವ್ಯಾಸ ಭಾರತ : ಸಂಪುಟ ೬, ಪುಟ xxi-xxvi. ಇತ್ಯಾದಿ.

ಕೊಂಡು ನಿಜವನ್ನು ತಿಳಿಯುವೆನೆಂದು ಪ್ರತಿಜ್ಞೆಮಾಡಿ ತನ್ನ ತಾಮಸಕಳೆಯ ಮೂರುತಿಯಾದ ಮಾಯೆಯನ್ನು ಆ ಕಾರ್ಯಕ್ಕೆ ತೊಡಗಿಸುವಳು೧.

ಮಾಯೆಯು ಬನವಸೆಯ ಅರಸನಾದ ಮಮಕಾರ ಭೂಪಾಲನಿಗೆ ಮತ್ತು ಆತನ ಹೆಂಡತಿಯಾದ ಮೋಹಿನೀದೇವಿಗೆ ಮಗಳಾಗಿ ಹುಟ್ಟುವಳು. ಕೂಡಲೆ ಜಪ ತಪಸ್ಸಮಾಧಿಗಳಲ್ಲಿದ್ದ ತಪಸ್ವಿಗಳ ಚಿತ್ತವು ಕಾಮವಿಹ್ವಲವಾಗುವಸಿತು ಮಾಯಾಮೋಹವು ಸುತ್ತಲೂ ಆವರಿಸಿಕೊಳ್ಳುವುದು. ದಿನಗಳು ಕಳೆದಂತೆ ಮಾಯೆಯು ಅಭಿವೃದ್ಧಿ ಹೊಂದುತ್ತ ರೂಪಯೌವನ ಸಂಪನ್ನಳಾಗಿ ಹರಯಕ್ಕೆ ಬರುವಳು. ಅವಳಿಗೆ ತಕ್ಕ ವರನ ವಿಚಾರವಾಗಿ ಮಮಕಾರನು ಆಲೋಚಿಸುತ್ತಿದ್ದಾಗ ಅವನ ಕುಲಗುರುವಾದ ಅಹಂಕಾರನೆಂಬ ಆಚಾರ್ಯನು ಬಂದು ಅವಳಿಗೆ ಶಿವನೇ ಯೋಗ್ಯನಾದ ಪತಿಯೆಂದು ಹೇಳಿ, ಶಿವನನ್ನು ಒಲಿಸಿಕೊಳ್ಳುವ ಮಂತ್ರವನ್ನು ಆಕೆಗೆ ಹೇಳಿಕೊಡುವನು. ಮಾಯೆಯು ಬನವಸೆಯಲ್ಲಿಯ ಮಧುಕೇಶ್ವರನ ದೇವಾಲಯಕ್ಕೆ ಪ್ರತಿನಿತ್ಯವು ಹೋಗಿ ಮಧುಕೇಶ್ವರನನ್ನು ಪೂಜಿಸುತ್ತಿರುವಳು. ಒಂದು ದಿನ ಪೂಜಾಸಮಯದಲ್ಲಿ ಮಾಯಾದೇವಿಯು ದೇವರಿಗೆ ಲಾಸ್ಯ (ಕುಣಿತ) ಸೇವೆಯನ್ನು ಸಲ್ಲಿಸಿ ಪ್ರಸಾದವನ್ನು ತೆಗೆದುಕೊಂಡು ಕುಳಿತಿರುವಾಗ, ಅಲ್ಲಮನು ಮದ್ದಳೆಕಾರನಾಗಿ ಅಲ್ಲಿಗೆ ಬಂದು ಗುಡಿಯ ಹೊರಗಡೆ ಮದ್ದಳೆಯನ್ನು ಎಲ್ಲರಿಗೂ ಆಶ್ಚರ್ಯವಾಗುವಂತೆ ಬಾರಿಸತೊಡಗಿದನು. ಆ ದನಿಗೆ ಮನಸೋತವಳಾಗಿ ಮಾಯಾದೇವಿಯು ಅಲ್ಲಮನನ್ನು ಗುಡಿಯ ಒಳಿಯಕ್ಕೆ ಕರಿಸುವಳು. ಆತನನ್ನು ನೋಡಿದ ಕೂಡಲೆ ಅವಳು ಮೋಹಪರವಶಳಾದುದನ್ನು ಕಂಡು ಆಕೆಯ ಸಖಿಯರು ಅಲ್ಲಮನ ಪರಿಚಯವನ್ನು ಮಾಡಿಕೊಳ್ಳಲೆಳಿಸುವರು. ಆತನ ಹೆಸರನ್ನೂ ಆತನಿಗೆ ಮನೆಮಾರು ಇಲ್ಲವೆಂಬುದನ್ನೂ ಅರಿತು ಮಾಯಾದೇವಿಯೂ ಆಕೆಯ ಸಖಿಯರೂ ಅಲ್ಲಮನನ್ನು ಅರಮನೆಗೆ ಕರೆದುಕೊಂಡು ಬಂದು ಅರಸನ ಅಪ್ಪಣೆಯನ್ನು ಪಡೆದು ಅವನನ್ನು ಮಾಯಾದೇವಿಯ ನಾಟ್ಯಾಚಾರ್ಯ

೧ ಮೂಲಕಥೆಯನ್ನು ಆರಂಭಿಸುವ ಮೊದಲು ಇಂತಹ ಪೀಠಿಕಾ ಪ್ರಕರಣಗಳನ್ನು ಬರೆಯುವುದು ವೀರಶೈವ ಪುರಾಣಕರ್ತರ ಸಂಪ್ರದಾಯವೆಂದು ಭಾವಿಸಬಹುದು. ಇವು ಆ ಆ ಕವಿಗಳಿಂದ ಕಲ್ಪಿತವಾದವುಗಳಾದುದರಿಂದ ಅದೇ ವಿಷಯವನ್ನು ಬರೆದ ಬೇರೆ ಬೇರೆ ಕವಿಗಳ ಗ್ರಂಥಗಳ ಪೀಠಿಕೆಗಳಲ್ಲಿಯ ಸಂಗತಿಗಳು ಭಿನ್ನವಾಗುವುದು ಸಹಜವಿದೆ

ನಾಗಿ ನೇಮಿಸಿಕೊಂಡು, ಅವಳ ಅಂತಃಪುರದಲ್ಲಿಯೆ ಒಂದೆಡೆ ಆತನಿಗೆ ಬಿಡಾರ ಮಾಡಿಸುವರು. ಅಲ್ಲಮನಲ್ಲಿ ಅತೀವ ಮೋಹವುಳ್ಳವಳಾಗಿ ಮಾಯಾ ದೇವಿಯು ಕ್ರಮೇಣ ವಿರಹದಿಂದ ಕೊರಗುತ್ತಿರುವುದನ್ನು ಸಖಿಯರು ಕಂಡು ಅವಳ ಇಂಗಿತವನ್ನು ಅರಿತು ಅವಳನ್ನು ಅಲ್ಲಮನೊಡನೆ ಕೂಡಿಸುವ ಯತ್ನ ವನ್ನು ಮಾಡುವರು. ಆದರೆ ಮಾಯಾಕೋಲಾಹಲನಾದ ಅಲ್ಲಮಪ್ರಭು ವಿದೇಹಿಯಾಗಿದ್ದುದರಿಂದ ಅವಳ ಕೈಗೆ ದೊರೆಯುವದಿಲ್ಲ. ಇರುಳು ಅಲ್ಲಮ ನಲ್ಲಿಗೆ ಮಾಯಾದೇವಿಯು ಹೋದ ವಿಷಯವು ಅವಳ ತಾಯಿಗೆ ತಿಳಿದು ಜಾಗರೂಕರಾಗಿರಲು ಆಕೆಗೂ ಸಖಿಯರಿಗೂ ಮೋಹಿನೀದೇವಿಯು ಹೇಳು ವಳು. ಅಲ್ಲಮನನ್ನು ಸಖಿಯರು ಬೇರೆ ಕಡೆಗೆ ಕಳಿಸುವರು. ಮಾಯೆಯು ಈ ರೀತಿ ವಿರಹವ್ಯಥೆಯಿಂದ ಸೊರಗುತ್ತಿರಲು, ಕೈಲಾಸದಲ್ಲಿ ಪಾರ್ವತಿಯು ತನ್ನ ಕಾರ್ಯವನ್ನು ಮಾಡಲಿಕ್ಕೆ ಮಾಯೆಯು ತಡಮಾಡಿದಳೆಂದು ಬಗೆದು ಅವಳನ್ನು ಎಚ್ಚರಿಸುವುದಕ್ಕಾಗಿ ವಿಮಳೆಯೆಂಬವಳನ್ನು ಅವಳಲ್ಲಿಗೆ ಕಳಿಸುವಳು.

ವಿಮಳೆಯು ಭೂಮಿಗೆ ಅವತರಿಸಿ, ಮಾಯಾದೇವಿಗೆ ಕಾಣಿಸಿಕೊಂಡು ಹಿಂದಣ ವೃತ್ತಾಂತವನ್ನುಸಿರಿ ಅಲ್ಲಮನ ನಿಜಸ್ವರೂಪವನ್ನು ಅರುಹುವಳು. ಮಾಯೆಯು ಇವನೇನು ಆ ಪರಬ್ರಹ್ಮನಾದ ಅಲ್ಲಮನೆ, ಮದ್ದಳೆಯಲ್ಲಮನು ನೀನು ಹೇಳುವುದೆಲ್ಲ ಸಟೆ—ಎಂದು ನುಡಿದುದಕ್ಕೆ, ವಿಷಯವಿಕಳತೆಯನ್ನು ಬಿಟ್ಟು ಸಾತ್ವಿಕ ಬುದ್ಧಿಯಿಂದ ನೋಡಿದರೆ ಗೊತ್ತಾಗುವುದೆಂದು ತಿಳಿಹೇಳು ವಳು. ಅಲ್ಲಮನ ರಹಸ್ಯವನ್ನು ತಿಳಿದುಕೊಳ್ಳುವುದಕ್ಕೆಂದು ಇಬ್ಬರೂ ಕೂಡಿ ಮಧುಕನಾಥನ ದೇವಾಲಯಕ್ಕೆ ಬರುವರು. ಅಲ್ಲಿ ಮದ್ದಳೆಯನ್ನು ಬಾರಿಸು ತ್ತಿದ್ದ ಅಲ್ಲಮನನ್ನು ತನ್ನಲ್ಲಿ ಒಲಿಸಿಕೊಳ್ಳಲೆತ್ನಿಸಿದ ಮಾಯೆಯನ್ನು ನೋಡಿ ಅಲ್ಲಮನು ಅವಳ ಉದ್ದೇಶವನ್ನು ಅರಿತವನಾಗಿ ಮದ್ದಳೆಯನ್ನು ಬಿಸುಟು ಅಲ್ಲಿಂದ ಹೊರಡುವನು. ಮಾಯಾದೇವಿಯು ವಿಮಳೆಯ ಸಂಗಡ ಅಲ್ಲಮ ನನ್ನು ಅರಸುತ್ತ ಹಿಂದೆಯೆ ಹೋಗುವಳು; ಸಖಿಯನೇಕರು ಅವಳನ್ನು ಹಿಂಬಾಲಿಸುವರು.ಅರಣ್ಯದಲ್ಲಿ ಕಲ್ಲುಮುಳ್ಳುಗಳಿಡಿದ ದಾರಿಯಲ್ಲಿ ನಡೆದು ಬಳ ಲುತ್ತಿದ್ದ ಮಾಯೆಯನ್ನು ನೋಡಿ ಕನಿಕರದಿಂದ ಅಲ್ಲಮನು ಅವಳಿಗೆ ಕಾಣಿಸಿ ಕೊಳ್ಳುವನು.ಮಾಯಾದೇವಿಯ ಸಖಿಯರು ಅಲ್ಲಮನನ್ನು ಕುರಿತು"ಮಾಯಾ ದೇವಿಯನ್ನು ನಿನ್ನಲ್ಲಿ ಅನುರಕ್ತಳಾಗುವಂತೆ ಮಾಡಿ ಅವಳನ್ನು ಈ ರೀತಿ

ವಂಚಿಸುವುದು ಸರಿಯೇ"ಎಂದು ಕೇಳುವರು. ಅದಕ್ಕೆ ಆಕೆಗೆ"ನನ್ನನ್ನು ಬಯಸೆ ಹೇಳುವರಾರು ? ಎಲ್ಲವೂ ಅವಳದೇ ತಪ್ಪು"–ಎನ್ನುವನು. ಆಗ ಮಾಯೆಯು ಶೋಕ, ಕೋಪ, ದರ್ಪ ಇವುಗಳ ಭರದಲ್ಲಿ–"ನಾನು ಮಾಯೆ, ಹರಿಹರ ಬ್ರಹ್ಮಾದಿಗಳನ್ನು ಗೆಲಿದವಳು, ತಪಸ್ವಿಗಳನ್ನು ವ್ಯಥೆಗೊಳಿಸಿದವಳು"–ಎಂದು ಮುಂತಾಗಿ ಬಡಾಯಿ ಕೊಚ್ಚುವಳು. ಅಲ್ಲಮನು "ನಿನ್ನನ್ನು ಈ ರೀತಿಯಾಗಿ ಆಡಿಸಿದವರಾರು ಬಲ್ಲೆಯಾ? ಇದನ್ನು ವಿಚಾರಿಸದೆ ಗರ್ವದಿಂದ ನುಡಿವರೇ ?" ಎನ್ನುವನು. "ಅದೆಲ್ಲ ಇರಲಿ ಕೃಪೆಮಾಡು"–ಎಂದು ಮಾಯೆ ಬೇಡಿಕೊಳ್ಳು ವಳು. ಅಲ್ಲಮನು ನಿರಾಕರಿಸುವನು, ವಿಮಳೆ ಹೇಳಿ ನೋಡುವಳು, ಅದೂ ವ್ಯರ್ಥವಾಗುವುದು. ಕೊನೆಗೆ ಅಲ್ಲಮನು "ಮಾಯೆಗೆ ಪರಮತತ್ತ್ವಜ್ಞಾನವಿಲ್ಲ" ಎಂದು ಹೇಳಿ ಅಂತರ್ಧಾನನಾಗುವನು. ಮಾಯೆಯ ತಾಯಿತಂದೆಗಳು ಆಗ ಅಲ್ಲಿಗೆ ಬರುವರು. ವಿಮಳೆ ಮಾಯೆಯ ವೃತ್ತಾಂತವನ್ನು ಅವರಿಗೆ ತಿಳಿಸಿ ಮಾಯೆಯ ಕೆಲಸವು ಭೂಲೋಕದಲ್ಲಿಲ್ಲವೆಂದು ಅವಳನ್ನು ಕೈಲಾಸಕ್ಕೆ ಕರೆದು ಕೊಂಡು ಹೋಗುವಳು.

ತನ್ನ ಮಾತು ವ್ಯರ್ಥವಾದುದಕ್ಕೆ ಪಾರ್ವತಿಯು ಚಿಂತಿಸುತ್ತಿರಲು, ಶಿವನು–"ಪರಿಣಾಮವನ್ನು ನಾನು ಮೊದಲೆ ಹೇಳಿದ್ದೆನು; ಆಗಲಿ, ನಿನ್ನ ಸಾತ್ವಿಕಾಂಶವನ್ನು ಭೂಮಿಗೆ ಕಳುಹು; ಅಲ್ಲಮನ ಅನುಗ್ರಹವುಂಟಾಗಿ ಶಿವತತ್ವದ ತಿಳಿವಳಿಕೆಯಾಗುವುದು"–ಎನ್ನುವನು. ಆ ಮೇರೆಗೆ ಪಾರ್ವತಿಯ ಸಾತ್ವಿಕಾಂಶವೆ ಉಡುತಡೆ[೧]ಯಲ್ಲಿ ಸುಮತಿ ನಿರ್ಮಳರೆಂಬವರಿಗೆ ಮಗುವಾಗಿ ಮಹದೇವಿಯಕ್ಕನೆಂಬ ಹೆಸರನ್ನು ಧರಿಸುವಳು. ಶಿವನ ಆಜ್ಞಾನುಸಾರವಾಗಿ ಪರಮಶಿವತತ್ತ್ವವನ್ನು ಅಲ್ಲಮನಿಂದ ಅರಿತುಕೊಳ್ಳಲು ಬಸವಾದಿ ಪ್ರಮಥರೂ ಧರೆಯಲ್ಲಿ ಅವತರಿಸುವರು.

೧ ಹೈದರಾಬಾದ್ ಕರ್ನಾಟಕ ಪ್ರದೇಶದ ಕಲ್ಬುರ್ಗಿ ಜಿಲ್ಲೆಯಲ್ಲಿ ಈಗಿನ ಮಹಾಗಾವ್ ಎಂಬ ಗ್ರಾಮವೇ ಮೊದಲು ಉಡುತಡೆಯಾಗಿತ್ತೆಂದೂ, ಅಲ್ಲಿ ಕೌಶಿಕನ ಅರಮನೆಯ ಅವಶೇಷಗಳೂ, ಮಹದೇವಿಯಕ್ಕನ ಮೂರ್ತಿಯೂ ಇರುವುದೆಂದೂ, ಅಲ್ಲಿಯೆ ಮಹದೇವಿಯಕ್ಕನ ಜಾತ್ರೆಯು ಆಗುವುದೆಂದೂ ಹೇಳುತ್ತಾರೆ. ಇದು ವಿಚಾರ ಮಾಡತಕ್ಕ ವಿಷಯವಾಗಿದೆ. ಇದುವರೆಗೆ ಈ ಊರು ನಗರದ ಸೀಮೆಯಲ್ಲಿ (ಈಗಿನ ಶಿವಮೊಗ್ಗಾ ಜಿಲ್ಲೆ) ಬಳ್ಳಿಗಾವಿಯ ನೆರೆಯಲ್ಲಿರುವ ಈಗಿನ 'ಉಡುಗಣೆ' ಎಂಬುದೇ ಆಗಿತ್ತೆಂದು ತಿಳಿವಳಿಕೆ ಇದೆ.

ಮಹದೇವಿಯಕ್ಕನು ಶಿವಭಕ್ತಿಯೇ ರೂಪುಗೊಂಡಂತೆ ಬೆಳೆಯುತ್ತ ಯೌವನವತಿಯಾಗುವಳು. ಒಮ್ಮೆ ಆ ಊರ ಅರಸನಾದ ಕೌಶಿಕನೆಂಬುವನು ವೈಹಾಳಿಯಿಂದ ತಿರುಗಿ ಬರುತ್ತಿದ್ದಾಗ ಮಹದೇವಿಯಕ್ಕನನ್ನು ಅವಳ ಮನೆಯ ಬಾಗಿಲಲ್ಲಿ ಕಂಡು ಅವಳ ರೂಪಾತಿಶಯಕ್ಕೆ ಮರುಳಾಗುವನು. ಅವಳನ್ನು ಬಲಾತ್ಕಾರದಿಂದ ಅರಮನೆಗೆ ತರಿಸುವುದು ಅನುಚಿತವೆಂದು ಬಗೆದು ಕೌಶಿಕನು ಅವಳ ತಾಯಿತಂದೆಗಳ ಬಳಿಗೆ ಹೆಗ್ಗಡತಿಯರನ್ನು ಕಳಿಸುವನು. ಅವರು ತಮ್ಮ ಮಗಳನ್ನು ರಾಜಕುಲದವರಿಗೆ ಕೊಡಲಾರೆವೆನ್ನಲು, ಅವಳನ್ನು ಬೇಡಬಂದವರು–"ಅರಸನ ಕೂಡ ಸರಸವಾಡುವುದು ಅನುಚಿತ; ಆತನಿಗೆ ನೀವು ಇದಿರಲ್ಲ; ಸುಮ್ಮನೆ ಒಪ್ಪಿಕೊಳ್ಳಿ"ಎನ್ನುವರು. ಅವರು–"ಮಹದೇವಿಯಕ್ಕನನ್ನೆ ಕೇಳಿ"ರೆನ್ನುವರು. ಆಗ ಅವಳು ಅರಸನನ್ನೆ ತನ್ನಲ್ಲಿಗೆ ಬರಮಾಡುವಳು. ಕೌಶಿಕನು ಅವಳ ಬಯಕೆಗಳನ್ನು ಸಲ್ಲಿಸುವೆನೆಂದು ಪ್ರಮಾಣ ಮಾಡುವನು. ಅವನು ಶಿವಭಕ್ತನಾದರೆ ಅವನನ್ನು ವರಿಸುವುದಾಗಿ ಒಪ್ಪಿಕೊಂಡು ಮಹದೇವಿಯಕ್ಕನು ಆತನ ಅರಮನೆಗೆ ಹೋಗುವಳು. ಅರಸನು ಪ್ರಣಯಾಲಾಪಗಳಿಗೆ ಮೊದಲು ಮಾಡಲು ಆಕೆಯು–ನೀನು ಒಪ್ಪಿಕೊಂಡಂತೆ ಮೊದಲು ಶಿವಭಕ್ತನಾಗೆಂದು ಕೇಳುವಳು. ಇನ್ನವಳು ತಪ್ಪಿಸಿಕೊಂಡು ಹೋಗಲಾರಳೆಂಬ ಭರವಸೆಯಿಂದ ಕೌಶಿಕನು–"ನಮಗೆ ಶಿವಭಕ್ತಿ ಮಾಡುವ ಸಮಯವಳವಡ"ದೆಂದು ನಿರ್ಧಾರವಾಗಿ ಹೇಳುವನು. ಮಹದೇವಿಯಕ್ಕನು ಒಡನೆ–ಹಾಗಾದರೆ ನಿಮಗೆ ನಮ್ಮ ಸಂಗವಳವಡದೆಂದು ಹೇಳಿ ಆತನು ಕೊಟ್ಟ ವಸ್ತ್ರಭೂಷಣಾದಿಗಳನ್ನು ಅಲ್ಲಿಯೆ ತೆಗೆದಿಟ್ಟು ದಿಗಂಬರಳಾಗಿ ಘನವಿರಕ್ತಿಯನ್ನು ಕೈಕೊಂಡು ಹೊರಡುವಳು ಮಾರ್ಗದಲ್ಲಿ ತಾಯ್ತಂದೆಗಳು ತಡೆದರೂ ಕೇಳದೆ, ಇದು ಶಿವನಿಗರ್ಪಿತವಾದ ಕಾಯ, ನನ್ನ ಹಂಬಲವನ್ನು ಬಿಡಿರೆಂದು ಹೇಳಿ ಗುರುವನ್ನು ಅರಸುತ್ತ ಪೊರಮಡುವಳು[೧].

೧ ಮಹದೇವಿಯಕ್ಕನವರ ಮದುವೆಯಾಗಿತ್ತೇ ? ಆಗಿದ್ದರೆ ಅವರು ಕೌಶಿಕನೊಡನೆ ಸಂಸಾರ ಮಾಡಿಕೊಂಡಿದ್ದರೆ ? ಇಲ್ಲವೇ ? ಎಂಬುದರ ಬಗ್ಗೆ ಇತ್ತೀಚಿಗೆ ವೃತ್ತ-ಮಾಸ ಪತ್ರಿಕೆಗಳಲ್ಲಿ ಚರ್ಚೆ ನಡೆದಿದೆ. ಪ್ರಭುಲಿಂಗಲೀಲೆಯ ಸಂಗ್ರಹದಲ್ಲಿ ಈ ವಿಷಯವನ್ನು ಕುರಿತು ಶ್ರೀ. ಮ. ರಾ. ಶ್ರೀನಿವಾಸಮೂರ್ತಿಯವರು ಪುಟ lxxii-lxiv ಇವುಗಳಲ್ಲಿ ವಿವೇಚಿಸಿ ಎರಡೂ ಅಭಿಪ್ರಾಯಗಳಿಗೆ ಆಧಾರಗಳನ್ನು ಕೊಟ್ಟಿದ್ದಾರೆ. ಯಾವ ಅಭಿಪ್ರಾಯವನ್ನು ಇಟ್ಟುಕೊಂಡರೂ ಮಹದೇವಿಯಕ್ಕನವರ ವಿರಕ್ತಿಗೆ ಚ್ಯುತಿ ಬರುವುದಿಲ್ಲೆಂಬ ಮಾತನ್ನು ನೆನಪಿನಲ್ಲಿಡತಕ್ಕದ್ದು.

ಇನಿತರೊಳು ಲಿಂಗತತ್ತ್ವವನ್ನು ತಿಳಿದುಕೊಳ್ಳಲು ತವಕಿಸುತ್ತಿದ್ದ ಭಕ್ತರನ್ನು ಉದ್ಧರಿಸಲೋಸುಗ ಕಾರಣ ಶರೀರವನ್ನು ತಾಳಿ ಹೊರಟು ಬರುತ್ತಿದ್ದ ಅಲ್ಲಮಪ್ರಭು ದಾರಿಯಲ್ಲಿ ಒಂದು ತೋಟವನ್ನು ಕಾಣುವನು. ಅದರ ಒಡೆಯನಾದ ಗೊಗ್ಗಯ್ಯನನ್ನು ನೋಡಿ ಆತನಕೂಡ ವಾದಿಸಿ ಅವನಿಗೆ ಪ್ರಾಣಲಿಂಗಾನುಸಂಧಾನವನ್ನು ಬೋಧಿಸುವನು. ಅಲ್ಲಿಯೆ ಸಮಾಧಿಸ್ಥನಾಗಿದ್ದ ಅನಿಮಿಷನೆಂಬ ಶಿವಯೋಗಿಯನ್ನು ಗೊಗ್ಗಯ್ಯನಿಗೆ ತೋರಿಸುವನು. ಆ ಶಿವಯೋಗಿಯ ಲಿಂಗವೂ ಜೀವಕಳೆಯೂ ಅಲ್ಲಮನನ್ನು ಸೇರುವುವು. ಇದನ್ನೆಲ್ಲ ಕಣ್ಣಾರೆ ಕಂಡ ಗೊಗ್ಗಯ್ಯನು ಅಲ್ಲಮನ ಮಹಾತ್ಮ್ಯವನ್ನು ಕೊಂಡಾಡಿ ಆತನಿಂದ ಉಪದೇಶ ಪಡೆದುಕೊಳ್ಳುವನು.

ಮುಂದೆ ಅಲ್ಲಮಪ್ರಭು ಮುಕ್ತಾಯಕ್ಕನೆಂಬ ಶಿವಶರಣೆಯನ್ನು ದರ್ಶಿಸಿ, ಆಕೆಯು ತನ್ನ ಸಹೋದರನಾದ ಅಜಗಣ್ಣನು ಲಿಂಗೈಕ್ಯನಾದುದಕ್ಕೆ ದುಃಖಿಸುತ್ತಿದ್ದುದನ್ನು ನೋಡಿ, ಅಜಗಣ್ಣನು ಶಿವಭಕ್ತನಾದುದರಿಂದ ಆತನು ಸಾಯಲಿಲ್ಲ, ಲಿಂಗೈಕ್ಯನಾಗಿರುವನು, ನಿತ್ಯನು, ಎಂದು ತಿಳಿಸಿ ಸಂತಯ್ಸಿ ಅವಳಿಗೆ ಉಪದೇಶವನ್ನಿತ್ತು ಪಾವನಳಾಗಿ ಮಾಡುವನು.

ಪ್ರಭುವು ಅಲ್ಲಿಂದ ಮುಂದಕ್ಕೆ ಬಿಜಯಂಗೈದು ಸೊನ್ನಲಾಪುರಕ್ಕೆ ಬರುವನು. ಅಲ್ಲಿ ಯೋಗೀಶ್ವರನಾದ ಸಿದ್ಧರಾಮನು ನಡೆಸಿದ್ದ ಕೆರೆ ದೇವಾಲಯಗಳ ಕಟ್ಟುವ ಕೆಲಸವನ್ನು ಕಂಡು, ನಿಷ್ಕಾಮಕರ್ಮದ ಹೊಲಬನರಿಯದ ಸಿದ್ಧರಾಮನಿಗೆ ಉಪದೇಶ ಮಾಡಬೇಕೆಂದು ಬಗೆದು, ಕೆಲಸ ಮಾಡುತ್ತಿದ್ದ ಒಡ್ಡರನ್ನು ಮಾತಾಡಿಸಿ ಸಿದ್ಧರಾಮನನ್ನು ನಿಂದಿಸುವನು. ಅವರು ಸಿಟ್ಟಿಗೆದ್ದು ಅವನನ್ನು ಕಲ್ಲು-ಗುಂಡುಗಳಿಂದ ಹೊಡೆಯುವರು; ಅವು ಅವನನ್ನು ತಾಗದೆ ಹೋದುದರಿಂದ ನಿರುಪಾಯರಾಗಿ ಇದನ್ನೆಲ್ಲ ಸಿದ್ಧರಾಮನಿಗೆ ಹೇಳುವರು. ಕೋಪೋದ್ದೀಪಿತನಾಗಿ ಸಿದ್ಧರಾಮನು ಅಲ್ಲಿಗೆ ಬರುವನು. ಯತಿಯಾದುದರಿಂದ ಸಿಟ್ಟು ಅವನಿಗೆ ತಕ್ಕುದಲ್ಲವೆಂದು ಅಲ್ಲಮನು ನಗುತ್ತಲೇ ಹೇಳುವನು. ಮಾತಿಗೆ ಮಾತು ಮಥಿಸಿ ಸಿದ್ಧರಾಮನು ತಡೆಯಲಾರದ ಸಿಟ್ಟಿನಿಂದ ಪ್ರಭುವನ್ನು ಭಸ್ಮಮಾಡಲೆಳಸಿ ನೊಸಲ ಕಣ್ಣನ್ನು ತೆರೆಯುವನು. ಆ ಬೇಗೆಯಿಂದ ಊರಿಗೆ ಊರೇ ಬೆಂದು ಹೋಗಲಾರಂಭಿಸಿದರೂ ಅಲ್ಲಮನಿಗೆ ಆವ ಬಾಧೆಯೂ ಆಗುವದಿಲ್ಲ. ಸುಮ್ಮನೆ ಬಿಟ್ಟರೆ ಸರ್ವನಾಶವಾಗುವುದೆಂದು

ಬಗೆದು ಅಲ್ಲಮಪ್ರಭುವು ಆ ಜ್ವಾಲೆಯನ್ನು ತನ್ನ ಅಡಿಗಳಿಂದ ತೊಡೆಯುವನು. ಆಗ ಎಚ್ಚರವಾಗುವುದು ಸಿದ್ಧರಾಮನಿಗೆ. ತನ್ನನ್ನೇ ಉದ್ಧಾರ ಮಾಡಲು ಬಂದ ಗುರುವೆಂದು ತಿಳಿದು ಸಿದ್ಧರಾಮನು ಆತ್ನನಿಗೆ ಆನತನಾಗುವನು. ಬಡ ಜಂಗಮನ ವೇಷದಲ್ಲಿ ಬಂದುದಕ್ಕೆ ತಾನು ಮೋಸಹೋದೆನೆಂದು ಒಪ್ಪಿ ಕೊಂಡ ಸಿದ್ಧರಾಮನಿಗೆ, ಹಿರಿಕಿರಿಯರೆಂಬ ಭೇದಭಾವವನ್ನು ನೀಗಿ ಸಮತಾ ಭಾವವನ್ನು ತಾಳಬೇಕೆಂದು ಬೋಧಿಸಿ, ಜೀವಪರಮರನ್ನೊಂದು ಮಾಡುವ ಶಕ್ತಿಭಕ್ತಿಗಳ ಹೊಂದಿಕೆಯನ್ನು ಅರಿಕೆ ಮಾಡಿಕೊಡುವನು.

ಪ್ರಭುರಾಯನು ಆ ಬಳಿಕ ಸಿದ್ಧರಾಮನನ್ನು ಒಡಗೊಂಡು ಕಲ್ಯಾಣ ನಗರಕ್ಕೆ ಬರುವನು. ಇಬ್ಬರೂ ಬಸವರಸನ ಬಾಗಿಲಲ್ಲಿ ಬಂದು ನಿಂದಿರಲು ಆ ಸುದ್ದಿಯನ್ನು ಬಸವಣ್ಣನಿಗೆ ಹಡದಪ್ಪಣನು ತಿಳಿಸುವನು. ಶಿವಪೂಜಾ ನಿರತನಾಗಿದ್ದ ಬಸವಣ್ಣನು ಅವರನ್ನು ಒಳಗೆ ಕರೆದುಕೊಂಡು ಬರಹೇಳುವನು. ರಾಜಪುರುಷರ ಮನೆಯ ಒಳಗೆ ನಾವು ಬರುವುದಿಲ್ಲೆಂದು ಪ್ರಭು ಹಡಪದಪ್ಪ ಣ್ಣನಿಗೆ ಹೇಳುತ್ತಿರುವನಿತರಲ್ಲಿ ಮಡಿವಾಳ ಮಾಚರಸನೂ ಚೆನ್ನಬಸವಣ್ಣನೂ ಹೊರಗೆ ಬಂದವನು ಅಲ್ಲಮಪ್ರಭುವೆಂದು ಬಸವರಾಜನಿಗೆ ಹೇಳುವರು. ಬಸವ ರಸನು ಪಶ್ಚಾತ್ತಾಪದಿಂದ ನೊಂದವನಾಗಿ ತಟ್ಟನೆ ಹೊರಗೆ ಬಂದು ಪ್ರಭು ವಿನ ಚರಣತಳದಲ್ಲಿ ಬೀಳುವನು. ತನ್ನ ತಪ್ಪನ್ನು ಕ್ಷಮಿಸಬೇಕೆಂದು ಅಂಗ ಲಾಚಿ ಬೇಡುವನು. ಚೆನ್ನಬಸವಣ್ಣನೂ ಮಾಚಿದೇವನೂ ಕರುಣಿಸೆಂದು ಪ್ರಭುದೇವರನ್ನು ಪ್ರಾರ್ಥಿಸುವರು. ಭಕ್ತವತ್ಸಲನಾದ ಪ್ರಭುವು ಕೊನೆಗೆ ಕರುಣಿಸಿ ಸಿದ್ಧರಾಮನನೊಡಗೂಡಿ ಒಳಗೆ ದಯಮಾಡಿಸುವನು. ಅಲ್ಲಿ ಹನ್ನೆರಡು ವರುಷ ಗುಪ್ತ ಶಿವಭಕ್ತಿಯನ್ನಾಚರಿಸುತ್ತಿದ್ದ ಮರುಳಶಂಕರದೇವ ನನ್ನು ಬಸವೇಶ್ವರನಿಗೆ ತೋರಿಸಿ, ಆತನಿಗೆ ಐಕ್ಯಪದವಿಯನ್ನು ಈಯುವನು.

ಪ್ರಭುದೇವನು ಬಸವಣ್ಣನ ಅರಮನೆಯಲ್ಲಿ ಅನುಭವ ಮಂಟಪದಲ್ಲಿ ಬಸವಾದಿಗಳಿಗೆ ಇಷ್ಟಲಿಂಗದ ಗುಟ್ಟನ್ನು ಬೋಧಿಸಿ, ಅದು ಪ್ರಾಣಲಿಂಗದ ನೆಲೆಯನರಿಯುವ ದಾರಿಯೆಂದು ತಿಳಿಸುತ್ತಿರುವನು. ಆ ಸಮಯಕ್ಕೆ ಮಹ ದೇವಿಯಕ್ಕನು ಅಲ್ಲಿಗೈತಂದು ಪ್ರಭುವಿಗೆ ನಮಸ್ಕರಿಸುವಳು. ಚಿಕ್ಕಹರಯ ದಲ್ಲಿಯೆ ಆಕೆಗೆ ಬಂದ ಪರಮವಿರಕ್ತಿಯನ್ನು ನೋಡಿ ಬಸವ ಮೊದಲಾದವರು ಅವಳನ್ನು ಮನವಾರೆ ಕೊಂಡಾಡುವರು. ಅಲ್ಲಮಪ್ರಭುವಾದರೊ ಮಾರ್ಮಿಕ

ವಾದ ಪ್ರಶ್ನೆಗಳಿಂದ ಅವಳನ್ನು ಪರಿಕಿಸಿ, ಅವಳು ದೇಹಾಭಿಮಾನವನ್ನು ನಿಜವಾಗಿ ನೀಗಿರುವಳೆಂದು ಅರಿತು, ತಕ್ಕ ಉಪದೇಶವನ್ನು ಮಾಡಿ ಆಕೆಗೆ ಶ್ರೀಗಿರಿಯ ಕದಳೀಬನಕ್ಕೆ ಹೋಗಲು ಅನುಜ್ಞೆ ಕೊಡುವನು. ಮಹದೇವಿಯಕ್ಕನು ಎಲ್ಲ ಶಿವಶರಣರನ್ನು ಬೀಳ್ಕೊಂಡು ಶ್ರೀಗಿರಿಗೆ ತೆರಳುವಳು.

ಇತ್ತ ಬಸವಾದಿಗಳಿಗೆ ಪ್ರಾಣಲಿಂಗದ ಪರಿಯನ್ನು ತಿಳಿಸಿ ತಾನು ಮರಳಿ ಬರುವವರೆಗೆ ಅದನ್ನು ಸಾಧಿಸಬೇಕೆಂದು ಹೇಳಿ ದೇಶದೊಳಗಿನ ಭಕ್ತರನ್ನು ಉದ್ಧರಿಸುತ್ತ ಪ್ರಭುದೇವನು ಶ್ರೀಗಿರಿಗೆ ಬರುವನು. ಅಲ್ಲಿ ತನ್ನ ವಿದ್ಯೆಯಿಂದ ಗೋರಕ್ಷನೆಂಬವನು ತನ್ನ ಕಾಯವನ್ನು ವಜ್ರಕಾಯವಾಗ ಮಾಡಿಕೊಂಡಿರುವನು. ಆತನನ್ನು ನೋಡಿ ಇದು ಮುಕ್ತಿಯ ಮಾರ್ಗವಲ್ಲವೆಂದು ಪ್ರಭು ಹೇಳುವನು. ಗೋರಕ್ಷನು– ಈ ಖಡ್ಗದಿಂದ ನನ್ನನ್ನು ಹೊಡೆದು ನೋಡು ನಾನು ಸಿದ್ಧನಹುದೆಂಬುದನ್ನು ಎನ್ನಲು, ಪ್ರಭು ಹಾಗೆ ಮಾಡಲು ಖಡ್ಗದ ಹೊಡೆತದಿಂದ ಗೋರಕ್ಷನ ಶರೀರಕ್ಕೆ ಏನೂ ಆಗದೆ ಖಣ್ ಖಣಿಲ್ ಎಂಬ ಶಬ್ದವು ಮಾತ್ರ ಹುಟ್ಟುವುದು. ಆಗ ಅಲ್ಲಮದೇವನು—ಅದೇ ಖಡ್ಗದಿಂದ ತನ್ನನ್ನು ಹೊಡೆದು ನೋಡೆಂದು ಗೋರಕ್ಷನಿಗೆ ಹೇಳುವನು. ಗೋರಕ್ಷನು ಅಂತೆಗೆಯ್ಯಲು ಬಯಲಲ್ಲಿ ಬೀಸಿದಂತೆ ಆ ಕತ್ತಿಯ ಹೊಡೆತಕ್ಕೆ ಶಬ್ದ ಸಹ ಹೊರಡದಾಗುವುದು. ಗೋರಕ್ಷನು ಆಶ್ಚರ್ಯಪಟ್ಟು, ಹೀಗೆ ನಿರ್ದೇಹಿಯಾಗುವ ಮಾರ್ಗವನ್ನು ತನಗೆ ಬೋಧಿಸಬೇಕೆಂದು ಬೇಡಿಕೊಳ್ಳುವನು. ಅಲ್ಲಮಪ್ರಭು ಆತನಿಗೆ ಮೋಕ್ಷಮಾರ್ಗವನ್ನು ಬೋಧಿಸುವನು[೧].

---

೧ ಗೋರಕ್ಷನು ನಾಥಪಂಥದ ಗುರುಪರಂಪರೆಗೆ ಸೇರಿದವನು :

“ಆದಿನಾಥಂಚ ಮಚ್ಛೇಂದ್ರಂ ಗೋರಕ್ಷಂ ಗಹಿನೀ ತಥಾ ।
ನಿವೃತ್ತಿಯಂ ಜ್ಞಾನನಾಥಂಚ ಭೂಯೋ ನಮಾಮ್ಯಹಂ ॥”

ಎಂಬ ಶ್ಲೋಕದಲ್ಲಿ ಜ್ಞಾನನಾಥನ ಹಿಂದಿನ ಗುರುಗಳನ್ನು ಹೇಳಿದೆ. ಆದಿನಾಥನೆಂದರೆ ಶ್ರೀ. ಶಂಕರನೇ ಯೆಂದೂ ಮಚ್ಛೇಂದ್ರನೇ ಈ ಪಂಥದ ಪ್ರಥಮಗುರುವೆಂದೂ ಆತನು ಸುಮಾರು ಕ್ರಿ. ಶ. ೧೧೬೦ ರಲ್ಲಿ ಇದ್ದನೆಂದು ಹೇಳುತ್ತಾರೆ. ಇವನ ತರುವಾಯ ಗೋರಕ್ಷ, ಆನಂತರ ಗಹಿನೀನಾಥ, ತದನಂತರ ಜ್ಞಾನನಾಥನ ಅಣ್ಣನಾದ ನಿವೃತ್ತಿನಾಥ, ಆ ಮೇಲೆ ಜ್ಞಾನನಾಥ ಹೀಗೆ ಪರಂಪರೆ ಇವೆ. ಅದುದರಿಂದ ಅಲ್ಲಮಪ್ರಭು ಗೋರಕ್ಷನನ್ನು ಸಂಧಿಸಿ, ಆತನಿಗೆ ನಿಜವಾದ ಮಾರ್ಗದ ಬೋಧೆಯನ್ನು ಮಾಡಿದನೆಂಬುದಕ್ಕೆ

ಮುಂದೆ ಪ್ರಭು ಅರಣ್ಯದಲ್ಲಿ ಪಯಣ ಬೆಳೆಸುತ್ತ ಬೇಂಟೆಯಾಡುತ್ತಿದ್ದ ಒಬ್ಬ ಕಿರಾತನನ್ನು ಕಂಡು ಪ್ರಾಣಹಿಂಸೆಯು ಪಾಪನೆಂದು ಆತನಿಗೆ ಬೋಧಿಸುವನು. ಅಲ್ಲಿ ತಪಸ್ಸಿನ ಸಾಮಗ್ರಿಗಳನ್ನು ಶೇಖರಿಸುತ್ತಿದ್ದ ಮುನಿಗಳನ್ನು ನೋಡಿ ಅವರಿಗೂ ಸಂಸಾರಬಾಧೆಯು ಬಿಟ್ಟಿಲ್ಲನೆಂದರಿದು ಅವರಿಗೆಲ್ಲ ನಿಜ ಮಾರ್ಗವನ್ನು ಅರುಹುವನು.

---

ಯಾವ ಬಾಧೆಯೂ ಬರುವುದಿಲ್ಲ. ಆದರೆ ಪ್ರಭು ಮತ್ಸ್ಯೇಂದ್ರ ಪಂಥಕ್ಕೆ ಮೊದಲು ಸೇರಿದ್ದು ಮುಂದೆ ವೀರಶೈವರಲ್ಲಿ ಕೂಡಿರಬಹುದೆಂಬ ಅಭಿಪ್ರಾಯವನ್ನು ಶ್ರೀ. ದ. ರಾ. ಬೇಂದ್ರೆ, ಎಂ. ಎ., ಇವರು ('ಅಭಿನವಪಂಪ' ಎಂಬ ವಿಮರ್ಶಕ ಗ್ರಂಥ, ಪುಟ ೯-೧೦ ರಲ್ಲಿ) ಪ್ರದರ್ಶಿಸಿದ್ದಾರೆ. ಇದಕ್ಕೆ ಆಧಾರವೆಂದು ಅಭಿನವಪಂಪನ ರಾಮಚಂದ್ರ ಚರಿತ ಪುರಾಣದೊಳಗಿನ (ಆ೭, ಪ ೧೬೬) ಕೆಳಗಿನ ಪದ್ಯವನ್ನು ಕೊಟ್ಟಿದ್ದಾರೆ:

ಓವದೆ ಮೀನ-ಮೇಷ-ವೃಷಭಾದಿಗಳಂ ಕ್ರಮದಿಂ ದಿನಾಧಿಪಂ ।
ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಂ ॥
ನ್ನಾವುದು ಕಜ್ಜಮೆಂದು ತೊಲೆಯುಂ ಜನರಂಜನೆಗೇಱಿ ತೇಜಮಂ ।
ಭೂವಲಯಕ್ಕೆ ಬೀಱಿದನಿವೇಂ ಪ್ರಭು ಮಾಡಿದ ಮಾಯೆ ಸಲ್ಲದೇ ॥

ಇದರಲ್ಲಿ ಮೀನ, ಮೇಷ, ವೃಷಭ, ಕನ್ನೆ, ಪ್ರಭು, ಮಾಯೆ ಎಂಬ ಪದಗಳಿಗೆ ಕ್ರಮವಾಗಿ ಮತ್ಸ್ಯೇಂದ್ರ, ಗೋರಕ್ಷ (?), ಬಸವ, ಅಕ್ಕಮಹಾದೇವಿ, ಅಲ್ಲಮಪ್ರಭು, ಮಾಯಾದೇವಿ ಎಂಬ ಹೆಸರುಗಳ ಪರ್ಯಾಯ ಶಬ್ದಗಳೆಂದು ಕಲ್ಪಿಸಿ ಒಂದು ಕಂಥೆಯನ್ನೇ ನೆಯ್ದಿದ್ದಾರೆ. ಆದರೆ ಮೇಲೆ ಅವತರಿಸಿದ ನಾಥಪಂಥದ ಗುರುಪರಂಪರೆಯಲ್ಲಿ ಅಲ್ಲಮಪ್ರಭುವಿನ ಹೆಸರು ಇಲ್ಲದೆ ಇರುವುದರಿಂದ ಇವರ ಕಲ್ಪನೆಗೆ ಬುಡವೇ ಇಲ್ಲದಂತಾಗುತ್ತದೆ. ಇನ್ನು ಯೋಗಪರಂಪರೆಯ ದೃಷ್ಟಿಯಿಂದ ಶಿವಯೋಗವನ್ನು ಪ್ರತಿಪಾದಿಸುತ್ತಿದ್ದ ಅಲ್ಲಮಪ್ರಭುವಿನ ಉಲ್ಲೇಖವು ಯೋಗ ಗ್ರಂಥಗಳಲ್ಲಿ ಬರುವ ಸಂಭವವಿದೆ ಅದರಿಂದ ಪ್ರಭು ಆ ಆ ಪಂಥಗಳಿಗೆ ಸೇರಿದ್ದನೆಂದು ಬಗೆಯುವುದು ತಪ್ಪಾಗುತ್ತದೆ. ಆದುದರಿಂದ ಹಠಯೋಗ ಪ್ರದೀಪಿಕೆಯಲ್ಲಿ ಬರುವ:

ಅಲ್ಲಾಮಃ ಪ್ರಭುದೇವಶ್ಚ ಘೋಡಾಚೋಲೀ ಚ ಟಿಂಟಿಣೀ ।
ಭಾನುಕೀ ನಾದದೇವಶ್ಚ ಖಂಡಃ ಕಪಾಲಕಸ್ತಥಾ ॥

ಎಂಬ ಶ್ಲೋಕದಿಂದ ಅಲ್ಲಮಪ್ರಭು ಯೋಗದಲ್ಲಿ ನಿಷ್ಣಾತನೆಂದು ಅರ್ಥಮಾಡಬೇಕಲ್ಲದೆ ಆತನು ನಾಥಪಂಥಕ್ಕೆ ಸೇರಿದವನಾಗಿದ್ದನೆಂದು ತರ್ಕಿಸುವುದು ಸರಿಯಾಗಲಾರದು.

ಇತ್ತ ಬಸವಣ್ಣನು ಕಲ್ಯಾಣನಗರದಲ್ಲಿ ಶೂನ್ಯಸಿಂಹಾಸನವನ್ನು ರಚಿಸಿ ಅಲ್ಲಮಪ್ರಭುವಿನ ಮಾರ್ಗನಿರೀಕ್ಷಣೆಯಲ್ಲಿರಲು, ಆತನನ್ನು ಪರೀಕ್ಷಿಸಲೋಸುಗ ಪ್ರಭುದೇವರು ಕೀವು ರಕ್ತಗಳನ್ನು ಸ್ರವಿಸುತ್ತಿದ್ದ ಹುಣ್ಣುಗಳುಳ್ಳ ದೇಹವನ್ನು ಧರಿಸಿ ಬರುವನು. ಬಸವಣ್ಣನು ಆತನನ್ನು ಗುರುತಿಸಿ ಭಕ್ತಿಯಿಂದ ತನ್ನರ ಮನೆಗೆ ಕರೆದುಕೊಂಡು ಬಂದು ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸುವನು. ಭಕ್ತ ಗಣವೆಲ್ಲ ಸ್ತೋತ್ರ ಮಾಡುವುದು. ಅನಿತರಲ್ಲಿ ಆರೋಗಣೆಗೆಂದು ಬಂದ ಜಂಗಮರನ್ನು ಬಸವಣ್ಣನು ಭಕ್ತಿಪರವಶನಾಗಿ ಮರೆಯಲು, ಅವರೆಲ್ಲರು ಖತಿಗೊಂಡು ಹೊರಟುಹೋಗುವರು. ಇದನ್ನರಿತು ಬಸವಣ್ಣನು ಚಿಂತಾಕ್ರಾಂತನಾಗಲು, ಪ್ರಭುದೇವನು ತನ್ನ ಆರೋಗಣೆ ಮಾಡಿಸಿ ತೃಪ್ತಿಪಡಿಸಿದರೆ ಎಲ್ಲ ಜಂಗಮರೂ ತೃಪ್ತರಾಗುವರೆಂದು ಹೇಳುವನು. ಬಸವೇಶನು ಸಂತೋಷದಿಂದ ಪ್ರಭುವಿನ ಕೋರಿಕೆಯನ್ನು ಸಲ್ಲಿಸಲು ಒಪ್ಪಿಕೊಂಡು ಆರೋಗಣೆಗೆ ಎಡೆಮಾಡಿಸಲು ಅನುವಾಗುವನು. ತುರಿತದಲ್ಲಿಯೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗಾಗಿ ಮಾಡಿದ ಅಡಿಗೆಯನ್ನೂ ಉಗ್ರಾಣದಲ್ಲಿಯ ಸಾಮಗ್ರಿಗಳನ್ನೂ ಪ್ರಭುರಾಯನು ಭಕ್ಷಿಸುವನು. ಇನ್ನೂ ಆತನ ಹಸಿವೆ ಅಡಗದೆ ಇದ್ದುದರಿಂದ ಬಸವಣ್ಣನು ವಿನೀತನಾಗಿ ತನ್ನನ್ನೇ ಪ್ರಭುದೇವರಿಗೆ ಅರ್ಪಿಸುವನು. ಪ್ರಭುವು ಸಂಪ್ರೀತನಾಗಿ–ನಿನ್ನ ದಾಸೋಹತ್ವದ ನಿಜವನ್ನು ಪರೀಕ್ಷಿಸಲು ಹೀಗೆ ಮಾಡಿದೆನು; ನಿನ್ನಲ್ಲಿ, ನಾನು ಮಾಡಿಸುವೆನು ನಾನು ಉಣ್ಣಿಸುವೆನೆಂಬ ಅಹಂಕಾರವಿಲ್ಲದಿದ್ದರೆ ನನಗೆ ಊಟವೇತಕ್ಕೆ? ಎಂದು ಹೇಳಿ, ಜಂಗಮರನ್ನು ಊಟಕ್ಕೆ ಕರೆಯೆಂದು ಆಜ್ಞಾಪಿಸುವನು. ಆಗ ಪ್ರಭುವಿನ ಆರೋಗಣೆಯಲ್ಲಿಯೆ ಅವರೆಲ್ಲರೂ ತೃಪ್ತರಾಗಿರುವರೆಂಬುದನ್ನು ಕಂಡು ಬಸವಣ್ಣನಿಗೆ ಆನಂದಾಶ್ಚರ್ಯವಾಗುವುದು. ಪ್ರಭುದೇವನು ಬಸವಾದಿಗಳಿಗೆಲ್ಲ ಜ್ಞಾನೋಪದೇಶವನ್ನು ಮಾಡಿ, ಬಸವಣ್ಣನ ಕತದಿಂದ ಲೋಕದ ಉದ್ಧಾರವಾಯಿತೆಂದು ಆತನನ್ನು ಹೊಗಳಿ ಅವರಿಗೆಲ್ಲ ನಿತ್ಯಪದವಿಯನ್ನು ಕೊಟ್ಟು ಅಲ್ಲಿಂದ ದಯಮಾಡಿಸುವನು.

ಇದನ್ನೆಲ್ಲ ಪರಶಿವನು ಪಾರ್ವತಿಗೆ ತಿಳಿಹೇಳಲು, ಆವಳು ಶಿವನ ಕರುಣೆಯಿಂದ ನಿತ್ಯನಾದ ಅಲ್ಲಮಪ್ರಭುವಿನ ನಿಜವನ್ನರಿತೆನೆಂದು ಸಂತಸಪಡುವಳು.

ಅಲ್ಲಮನು ನಿಜಭಕ್ತರಿಗೆ ಚಿಂತಿತಾರ್ಥವನ್ನೀಯುತ್ತ ಎಲ್ಲರ ಹೃತ್ಕಮಲದಲ್ಲಿರುವನು.

### ೫ ಪ್ರಭುಲಿಂಗಲೀಲೆಯ ವಿಮರ್ಶೆ

ಈ ಕಾವ್ಯವು, ಬಸವಾದಿಪ್ರಮಥರಿಗೆ ಜ್ಞಾನೋಪದೇಶಕನಾದ ಬಸವೇಶ್ವರನಿಂದ ನಿರ್ಮಿತವಾದ ಶೂನ್ಯಸಿಂಹಾಸನದ ಪ್ರಥಮಾಧಿಕಾರಿಯಾದವ ಶ್ರೀಮದಲ್ಲಮನ[೧] ಚರಿತ್ರೆಯಾಗಿರುವುದರಿಂದ, ಚರಿತ್ರನಾಯಕನಾದ ಈ ಅಲ್ಲಪ್ರಭುವಿನ ಸ್ವರೂಪ ಗ್ರಹಣವನ್ನು ಚಾಮರಸನು ಹೇಗೆ ಮಾಡಿರುವನೆಂಬುದನ್ನು ನಾವು ಪರಾಮರ್ಶಿಸಬೇಕು. ಕವಿಯು ಪ್ರಭುವನ್ನು ಒಬ್ಬ ಮನುಷ್ಯಮಾತ್ರನೆಂದೂ ಬಹುಪ್ರಯಾಸಬಟ್ಟು ವೈರಾಗ್ಯವನ್ನು ಸಾಧಿಸಿದ ಮಹಾಪುರುಷನೆಂದೂ ಭಾವಿಸಿಲ್ಲ. ಶಿವನ ಸಾನಿಧ್ಯದಲ್ಲಿ ಮೊದಲು ಇದ್ದುಕೊಂಡು ಶಾಪಗ್ರಸ್ತನಾಗಿಯೋ ನಿಜತತ್ತ್ವವನ್ನರಿಯಲೆಂದು ಶಿವನಿಂದ ಪ್ರೇರಿತನಾಗಿಯೋ

---

(೧) ಅಲ್ಲಮಪ್ರಭುವಿನ ಜೀವನ ಸಂಬಂಧವಾಗಿ, ಹರಿಹರದೇವನ ಪ್ರಭುದೇವರ ರಗಳೆಯೇ ನಮಗೆ ದೊರೆತ ಗ್ರಂಥಗಳಲ್ಲಿ ಮೊದಲನೆಯದೆಂದು ತೋರುತ್ತದೆ; ಅದರಲ್ಲಿ ಆತನ ತಾಯಿ ತಂದೆಗಳ ಹೆಸರು ಉಕ್ತವಾಗಿಲ್ಲ.

ಬಳ್ಳಿಗಾವಿಯೆನಿಪ್ಪ ಪುರವರಂ ರಂಜಿಪುದು ।
ಪಲ್ಲವಿಪ ಶರಣಸಂಕುಳದಿಂದಂ ವಿರಾಜಿಪುದು ॥
ಅಲ್ಲಿರ್ಪ ನಾಗವಾಸಕ್ಕೆ ಯಧಿಪತಿಯಪ್ಪ ।
ಸಲ್ಲಲಿತ ನಾಯಕನ ಸತಿಯು ಬಸುಱೊಳು ಬಪ್ಪ ।
ನೆವದಿಂದ ನಿರ್ಮಾಯನಿರ್ದನಾ ಬಸುಱೊಳಗೆ ॥

ಎಂದು ಮಾತ್ರ ಹೇಳಿರುತ್ತದೆ. ಹರೀಶ್ವರನ ಪ್ರಭುದೇವರ ಪುರಾಣ, ಮರಿರಾಜನಟ್ಟೇಶನ ಪ್ರಭುದೇವರ ನಟನತಾರಾವಳಿ ಇವುಗಳಲ್ಲಿ ಇವರು ರಾಜರಿದ್ದರೆಂಬಂಶವು ಹೇಳಲಾಗಿದೆ. ಪ್ರಭುದೇವರಿಗೆ ವೈರಾಗ್ಯವುಂಟಾಗುವ ಮೊದಲು ಆತನು ಕಾಮಲತೆಯೆಂಬವಳನ್ನು ಪ್ರೀತಿಸಿ ಅವಳನ್ನು ಕೂಡಿದ್ದನೆಂಬಂಶವನ್ನು ಪ್ರಭುದೇವರ ರಗಳೆಯಲ್ಲಿ ಹೇಳಿದೆ. ಅವಳ ಆಕಸ್ಮಿಕ ಮರಣದಿಂದ ಅಲ್ಲಮನಿಗೆ ವೈರಾಗ್ಯವುಂಟಾಯಿತೆಂದೂ ಹೇಳಿದೆ. ತರುವಾಯ ಬರೆದ ಕೆಲವು ಗ್ರಂಥಗಳಲ್ಲಿ ಈ ಕಥೆಯಿಲ್ಲ. ಪ್ರಭುದೇವರ ವಚನದ ಮುದ್ರಣ ಪ್ರತಿಯಲ್ಲಿ (ರಾವಸಾಹೇಬ ಹಳಕಟ್ಟಿಯವರು ಮುದ್ರಿಸಿದುದು) 'ಪ್ರಭುದೇವರ ಪಿಂಡ ಸಂಭವವಾದ ಗದ್ಯ' (ಪುಟ ೨-೩) ದಲ್ಲಿ ಈ ಕಥೆಯು ಸಂಕ್ಷೇಪವಾಗಿ ಉಕ್ತವಾಗಿದೆ. ಈ ಗದ್ಯವು ಪ್ರಭುದೇವರ ವಚನದ ಕೆಲ ಕೈ ಬರೆಹದ ಪ್ರತಿಗಳಲ್ಲಿ ಇಲ್ಲ.

ಮನುಜಕಾಯವನ್ನು ಹೊದ್ದಿ ಉಚಿತಕರ್ಮ-ಭಕ್ತಿ ಮೊದಲಾದವುಗಳಿಂದ ಆತ್ಮೋದ್ಧಾರ ಮಾಡಿಕೊಂಡ ಶಿವಶರಣನೆಂದಾಗಲಿ ಆತನನ್ನು ಗ್ರಹಿಸಿಲ್ಲ. ಇಲ್ಲವೆ ಯುಗಯುಗದಲ್ಲಿ ಬೇರೆಬೇರೆ ರೂಪಗಳಿಂದ ಅವತಾರ ಮಾಡಿ ಭವದಲ್ಲಿ ಬಂದ ವಿಷ್ಣು ಮುಂತಾದವರಂತೆ ಅಮರವರ್ಗಕ್ಕೆ ಸೇರಿದವನೆಂದಾಗಲಿ ಅಲ್ಲಮನನ್ನು ಕವಿಯು ತಿಳಿದಿಲ್ಲ. ಭಕ್ತಜನಹಿತಾರ್ಥಕ್ಕಾಗಿ ಶಿವನು ತಾನೇ ಉರುಲಿಂಗವೇ ಕೊನೆಯಾದ ಇಪ್ಪತ್ತೈದು ಲೀಲೆಗಳನ್ನು ನಟಿಸಿದಂತೆ, ಆತನ ನಿಜ-ಸ್ವರೂಪನಾದ ಅಲ್ಲಮನು ಪ್ರಭುಲಿಂಗಲೀಲೆಯನ್ನು ನಟಿಸಿ, ಬಸವಾದಿಪ್ರಮಥರನ್ನು ಉದ್ಧಾರ ಮಾಡಿರುವನೆಂದು ಚಾಮರಸನು ಭಾವಿಸಿದ್ದಾನೆ. ಈ ಉದಾತ್ತಭಾವನೆಗೆ ಅನುಸರಿಸಿಯೆ ಪ್ರಭುದೇವರನ್ನು ನಿರ್ದೇಹಿಯೆಂದೂ ಕೇವಲ ಭಕ್ತರ ಒಡತಣಕ್ಕಾಗಿ "ತನ್ನ ಕಟಾಕ್ಷಕಾಂತಿಯಲಿ ಹಿಂಗಿಸುವೆನೆಲ್ಲರ ಮನೋಮಯುದಂಗದೊಳಹೊಱಗಿಡದ ತನುದ ತರಂಗಗಳನೆಂದೆನುತ"— ಕಾರಣ ಶರೀರವನ್ನು ಮಾತ್ರ ಧರಿಸಿದನೆಂದೂ ಚಾಮರಸನು ಬಣ್ಣಿಸಿದ್ದಾನೆ. ಭವಿತನದ ಮೂಲ ಕಾರಣಳಾದ ಮಾಯೆಯ ಜನನ-ಬಾಲ್ಯಗಳನ್ನೂ ಬೆಡಗು-ಬಿನ್ನಾಣಗಳನ್ನೂ ಕವಿಯು ವಿಸ್ತಾರವಾಗಿ ವರ್ಣಿಸಿರುವ ಪರಿಯೇ ಬೇರೆ; ನಿರಂಜನಮೂರ್ತಿಯಾದ ನಿರ್ದೇಹಿಯಾದ ಅಲ್ಲಮಪ್ರಭುವಿನ ಜನನ-ಬಾಲ್ಯಗಳನ್ನು ಸಂಕ್ಷೇಪವಾಗಿ ವಿವರಿಸಿರುವ ರೀತಿಯೇ ಬೇರೆ. ಪ್ರಭುವಿನ ಜನನೀಜನಕರು ಸುಜ್ಞಾನಿ ನಿರಹಂಕಾರರು. ಅಲ್ಲಮನು ಅವರಿಗೆ ಶಿಶುವಾಗಿ ಗೋಚರನಾಗುವುದು ಅವರು ಯೋಗಸಮಾಧಿಯಲ್ಲಿದ್ದಾಗ. ಆತನು ಬಾಲ

---

ಶೂನ್ಯ ಸಂಪಾದನೆಯಲ್ಲಿ (ರಾವಸಾಹೇಬ ಹಳಕಟ್ಟಿಯವರು ಮುದ್ರಿಸಿದ ಪ್ರತಿ) ಪುಟ ೨-೩ ರಲ್ಲಿ ಪ್ರಭುದೇವರೆ ಮೊದಲಾದವರು ಶಾಪದಿಂದ ಮರ್ತ್ಯಕ್ಕೆ ಬಂದರೆಂದರೆ ನುಡಿವರಿಗೆ 'ಸಾಯುಕ ನರಕ' ತಪ್ಪದು ಎಂದು ಹೇಳಲಾಗಿದೆ. ವೀರಶೈವದಲ್ಲಿ ಅಲ್ಲಮಪ್ರಭು ಪ್ರಸಿದ್ಧನಾಗಲು ಆತನ ವೈರಾಗ್ಯವೇ ಮುಖ್ಯ ಕಾರಣವೆನ್ನಬಹುದು. ಆತನಲ್ಲಿ ವಿರಕ್ತಿ ವುಂಟಾಗಲು ಯಾವುದೇ ಕಾರಣವಾಗಲಿ ಅದು ಅಷ್ಟು ಮುಖ್ಯವಲ್ಲ, ಆದುದರಿಂದ ಆತನ ವಿರಕ್ತಿಗೆ ಹೆಚ್ಚು ಪ್ರಶಸ್ತಿ ದೊರೆಯುವಂತೆ ಮುಂದಣ ಗ್ರಂಥಕಾರರು ಕಾಮಲತೆ ಸಂಬಂಧವಾದ ಆಖ್ಯಾಯಿಕೆಯನ್ನು ಬಿಟ್ಟಿರಬಹುದು. ಈ ಆಖ್ಯಾಯಿಕೆಯು ನಿಜ ವಿಪ್ರರೂ ಪ್ರಭುದೇವರ ವಿರಕ್ತಿಯ -ಬಗ್ಗೆ ಯಾವ ಬಾಧೆಯೂ ಉಂಟಾಗುವ ಕಾರಣ ವಿಲ್ಲವೆಂಬುದನ್ನು ಮರೆಯಬಾರದು.

ಲೀಲೆಯನ್ನು ಮೆರೆದುದು 'ಗಳಿಗೆಸಂಖ್ಯೆ'ಯ ಲೆಕ್ಕದಲ್ಲಿ. 'ಅತಿಸೋಜವೆ ವೇದಶಾಸ್ತ್ರ ಸಮೇತವಾತನ ನಾಲಗೆಯ ತುದಿಗಾತು ಬೆಸನಸು ಚೇತೋಹಿತನಾತನ ಪದಾಬ್ಜದಲಿ' ಎಂದು ಮುಂತಾಗಿ ಪ್ರಭುವಿನ ಅಗಾಧಸ್ವರೂಪವನ್ನು ಕವಿಯು ಚೆನ್ನಾಗಿ ಪ್ರಕಟಿಸಿದ್ದಾನೆ. ಪ್ರಭುವು ಈ ಕಾವ್ಯದಲ್ಲಿ ಮೊದಲು ನಮಗೆ ಗೋಚರನಾಗುವಾಗಲೆ ವಿರಾಗವಿಭೂಷನಾಗಿರುವನು. ಮಾಯಾವಿಡಂಬನೆಯನ್ನು ಕೈಕೊಳ್ಳುವ ಉದ್ದೇಶದಿಂದಲೇ ಮದ್ದಳೆಯವನಾಗಿ ಲೋಗರ ಮುಂದೆ ಸುಳಿಯುವನು. ಲಾಸ್ಯಸೇವೆಯು ಪಂಚಮುಖನೂ ಪಾರ್ವತಿಯೂ ಆದ ಶಿವನನ್ನು ಮೆಚ್ಚಿಸಲಾರದೆಂಬುದನ್ನು ಪ್ರಕಟಿಸುವಂತೆ, 'ಹೂಡಿ ಹಣ್ಣಿದ ಜಗದ ಜಂತ್ರವನಾಡಿಸುವ ಮಾಯಾಂಗನೆಯ ತಾನಾಡಿಸುವೆನೆಂಬುವನು ಪ್ರತ್ಯಕ್ಷದಲಿ ತೋರ್ಪಂತೆ', ಪ್ರಭುವು ಮದ್ದಳೆಕಾರನಾಗಿ ಮಾಯೆಯನ್ನೆ ಮರುಳುಗೊಳಿಸಿ ಅವಳ ವಿಡಂಬನೆಯನ್ನು ಸರ್ವಥಾ ಮಾಡುವನು.

ಆದರೆ ಭಕ್ತವತ್ಸಲನೂ ಕರುಣಾಳುವೂ ಆದ ಪ್ರಭುದೇವನು ಇನ್ನೂ ಸಾಧಕರಾಗಿದ್ದ ಭಕ್ತರನ್ನು ಅವರಿದ್ದಲ್ಲಿಗೆ ಹೋಗಿ ಸಂದರ್ಶಿಸಿ, ಅವರ ಗುಣಗಳನ್ನು ಒಡನೆಯೆ ಗ್ರಹಿಸಿದಂತೆ ಅವರ ಕುಂದುಗಳನ್ನೂ ಕಂಡುಹಿಡಿದು ಅವುಗಳನ್ನೆಲ್ಲ ಅವರಿಗೆ ತೋರಿಸಿಕೊಟ್ಟು, ಅವರಿಂದ ಪ್ರಾರ್ಥಿತನಾಗಿ ಅವರವರ ಸಾಮರ್ಥ್ಯಕ್ಕನುಗುಣವಾದ ಮುಂದಿನ ಮೆಟ್ಟಲುಗಳನ್ನು ತಿಳಿಸಿಕೊಟ್ಟು ಅವರ ಉದ್ಧಾರವನ್ನು ಮಾಡುತ್ತ ಸಂಚರಿಸುತ್ತಾನೆ. ಮಹಾತ್ಮನಾದ ಅಜಗಣ್ಣನ ಆಕಸ್ಮಿಕ ಮರಣದಿಂದ ಸಂಕಟಕ್ಕೊಳಗಾದ ಮುಕ್ತಾಯಕ್ಕಗೆ ಆಪತ್ಕಾಲದಲ್ಲಿ ಒದಗಿ ಅವಳ ಸಂದೇಹಗಳನ್ನು ನಿವಾರಿಸಿ ಮರಣದ ಯಥಾರ್ಥ ಕಲ್ಪನೆಯನ್ನು ಅವಳಿಗೆ ಮಾಡಿಕೊಟ್ಟು, ಜ್ಞಾನಿಗಳಾದ ಶಿವಶರಣರು ಮರಣಬಾಧೆಗೆ ಈಡಾಗುವುದಿಲ್ಲವೆಂದು ತಿಳಿಹೇಳುವನು. ಮಹಾನುಭಾವಿಯಾದ ಬಸವಣ್ಣನ ದಾಸೋಹಂಭಾವದ ಮರೆಯಲ್ಲಿದ್ದ ಅಹಂಭಾವವನ್ನು ಬೈಲಿಗೆಳೆದು ಆತ್ಮಾರ್ಪಣೆಯೇ ನಿಜವಾದ ಮಾರ್ಗವೆಂದು ಪ್ರಭುದೇವನು ತನ್ನ ಆರೋಗಣೆಯ ನೆವದಲ್ಲಿ "ನಿನ್ನ ಮನದೊಳು ಮಾಟಕೂಟದ ಬುದ್ಧಿ ಮನುಕರಿಸೆ ನನ್ನ ಹಸು ಹುರಿದುಂಡುದಲ್ಲದೆ, ನಿನ್ನ ಮನದಲಿ ಮಾಟವಿಲ್ಲದೊಡೆನ್ನ ತನುವಿಗೆ ಊಟವಿಲ್ಲೆ"ಯೆಂದು ಬಸವಣ್ಣನಿಗೆ ತೋರಿಸಿಕೊಡುವನು. ಶಿವಸ್ವರೂಪನೆಂದು ಪ್ರಖ್ಯಾತಿಹೊಂದಿದ ಯೋಗಿವರ್ಯನಾದ ಸಿದ್ಧರಾಮೇಶನು

ಸೊನ್ನಲಪುರದಲ್ಲಿ ಕೆರೆ ದೇಗುಲಗಳನ್ನು ಕಟ್ಟಿಸುವುದರಲ್ಲಿ ತೊಡಗಿದುದರಿಂದ, 'ಚಿಕ್ಕ ಸಂಸಾರವನು ಸಡಿಲಿಸಿ ಹೊಕ್ಕನಲ್ಲಾ ಹಿರಿಯ ಸಂಸಾರಕ್ಕೆಕಟ ವಿಖ್ಯಾತಿ ಪೂಜಾಲಾಭದಿಚ್ಛೆಯಲಿ' ಎಂದು ನೆನೆದು, ಆತನಲ್ಲಿ ಹುದುಗಿದ್ದ ಯೋಗಿಗಳಿಗನುಚಿತವಾದ ನೊಸಲಕಣ್ಣಿ ದರ್ಪವನ್ನು ಕಿಡಿಸಿ ನಿಜವಿರಕ್ತಿಯನ್ನು ಬೋಧಿಸುವನು. ಕಾಯವನ್ನು ಬಲಿದು ವಜ್ರಶರೀರವನ್ನು ಮಾಡಿಕೊಂಡಿಹೆ ನೆಂಬ ಗರ್ವದಿಂದ ಮೆರೆಯುತ್ತಿದ್ದ ಗೋರಕ್ಷನಿಗೆ 'ಕಾಯ ಬಲಿದೊಡೆ ಮಾಯೆ ಬಲಿವುದು, ಮಾಯೆ ಬಲಿದೊಡೆ ಛಾಯೆ ಬಲಿವುದು, ಕಾಯ ಮಾಯಾ ಛಾಯೆ ಬಲಿದೊಡೆ ಸಿದ್ಧನವನಲ್ಲ'ವೆಂಬುದನ್ನು ತನ್ನ ಲೀಲಾಮಾತ್ರದಿಂದ ಉಚಿತ ರೀತಿಯಲ್ಲಿ ಆತನಿಗೆ ಮನವರಿಕೆ ಮಾಡಿ ಮುಕ್ತಿ ಮಾರ್ಗವನ್ನು ತೋರಿಸಿ ಕೊಡುತ್ತಾನೆ. ಚಿಕ್ಕಂದಿನಲ್ಲಿಯೆ ವಿರಕ್ತಿಯ ತುತ್ತತುದಿಯನ್ನೇರಿದ ಮಹ ದೇವಿಯಕ್ಕನು ತನ್ನನ್ನೆ ಅರಸುತ್ತ ಬಸವೇಶ್ವರನ ಅನುಭವಮಂಟಪಕ್ಕೆ ಬರಲು ಪ್ರಭುದೇವನು ಅವಳ ವಿರಕ್ತಿಯು ಅಲ್ಲಿದ್ದ ಪ್ರಮಥಸಂದೋಹಕ್ಕೆಲ್ಲ ಪ್ರಕಟ ವಾಗುವಂತೆ ಅವಳನ್ನು ಕಟುತರವಾದ ಪ್ರಶ್ನೆಗಳಿಂದ ಪರೀಕ್ಷಿಸಿ, ಕೂಡಲೆ ಅವ ಳಿಗೆ ಕೊನೆಯ ಮಾರ್ಗವನ್ನು ಕರುಣಿಸುತ್ತಾನೆ.

ಈ ರೀತಿಯಾಗಿ ಮಾಯಾಕೋಲಾಹಲನಾದ, ವೈರಾಗ್ಯಸಂಪನ್ನನಾದ, ಜ್ಞಾನಮೂರ್ತಿಯಾದ, ಭಕ್ತವತ್ಸಲನಾದ. ಸಗುಣನಿರ್ಗುಣನಾದ ಅಲ್ಲಮ ಪ್ರಭುವಿನ ಸ್ವರೂಪಗ್ರಹಣವನ್ನು ಉಚಿತರೀತಿಯಲ್ಲಿ ಮಾಡಿರುವುದರಿಂದಲೆ ಚಾಮರಸನು ಶ್ರೇಷ್ಠ ಕವಿಯೆನಿಸಿಕೊಂಡಿರುವನು. ವಿವೇಕಪ್ರಧಾನವಾದ ಈಗಿನ ಯುಗದಲ್ಲಿ ಪ್ರಭುವಿನ ದೇವತ್ವವನ್ನು ಓದುಗರು ಒಪ್ಪಲಿ ಒಪ್ಪದೇ ಹೋಗಲಿ, ಚಾಮರಸನ ಚರಿತ್ರನಿರೂಪಣೆಯ ಪದ್ಧತಿಯನ್ನವರು ಒಪ್ಪಲೇ ಬೇಕು– ಅಷ್ಟೇಯೇಕೆ ಅದಕ್ಕೆ ತಲೆದೂಗಬೇಕು. ಉಜ್ವಲವ್ಯಕ್ತಿಗಳ ಚರಿತ್ರೆ ಯನ್ನು ಅವರ ವ್ಯಕ್ತಿತ್ವಕ್ಕೆ ಕುಂದು ಬಾರದ ರೀತಿಯಲ್ಲಿ ಬರೆಯಬೇಕೆನ್ನುವವ ರಿಗೆ ಚಾಮರಸನ ಮಾರ್ಗವು ಆದರ್ಶವಾಗಿದೆ. ಪಾಶ್ಚಾತ್ಯದೇಶಗಳಲ್ಲಿ ಹಿಂದಣ ಚರಿತ್ರಕಾರರು ತಾವು ಬರೆಯುವುದಕ್ಕೆಂದು ಆರಿಸಿಕೊಂಡ ವ್ಯಕ್ತಿಯ ಜೀವನ ದೊಳಗಿನ ಸಣ್ಣ ದೊಡ್ಡ ಸಂಗತಿಗಳನ್ನೆಲ್ಲ ಕಲೆಹಾಕಿ ಅವುಗಳಿಗೆ ದೊರೆಯ ಬಹುದಾದ ಎಲ್ಲ ಆಧಾರಗಳನ್ನಿತ್ತು ಅದನ್ನು ಒಂದು ಕೋಶಗ್ರಂಥವನ್ನಾಗಿ ಮಾಡುತ್ತಿದ್ದರು. ಅದು ಪಂಡಿತರಿಗೆ ಜಿಜ್ಞಾಸುಗಳಿಗೆ ಯೋಗ್ಯವಾದ ಪದ್ಧತಿ

ಯಾಗಿದ್ದಿತಲ್ಲದೆ ನಿಜವಾದ ಚರಿತ್ರೆಗೆ ಅನುರೂಪವಾದ ರೀತಿಯಾಗಿರಲಿಲ್ಲ ಆದುದರಿಂದ ಇತ್ತೀಚಿನ ಚರಿತ್ರಕಾರರು(೧) ಚರಿತ್ರನಾಯಕನ ವ್ಯಕ್ತಿತ್ವ-ವೈಶಿಷ್ಟ್ಯ, ಅವುಗಳಿಗೆ ಪೋಷಕವಾಗುವಂತಹ ಸನ್ನಿವೇಶ–ಭಾವ, ಆತನ ಕಾರ್ಯ, ಅದರ ಫಲ–ಇಂತಹ ಮಹತ್ತ್ವದ ಸಂಗತಿಗಳನ್ನೆ ಆಯ್ದು ಮನೋರಂಜಕವಾದ ರೀತಿಯಲ್ಲಿ ನೆಯ್ದು ಚರಿತ್ರೆಯನ್ನು ರಚಿಸತೊಡಗಿದ್ದಾರೆ. ಚಾಮರಸನ ಪದ್ಧತಿಯು ಇದೇ ಮಾದರಿಗೆ ಸೇರಿದುದು; ಅಲ್ಲದೆ ಪದ್ಯರೂಪದಲ್ಲಿದ್ದುದೊಂದು ಇದರಲ್ಲಿಯ ವಿಶೇಷ.

**೬ ಚಾಮರಸನ ಚರಿತ್ರನಿರೂಪಣೆ–ಭಾಷೆ-ಶೈಲಿ ಮುಂತಾದುವು**

ಪ್ರಭುಚರಿತೆಗೆ ಮುಖ್ಯವಾದುವು ಆತನ ಸ್ವೈಜವೈರಾಗ್ಯ, ಮಾಯಾತಿರಸ್ಕಾರ, ಬಸವಾದಿ ಪ್ರಮಥರ ಉದ್ಧಾರ, ಆಧ್ಯಾತ್ಮಿಕ ತತ್ತ್ವಗಳ ತಿಳಿಯಾದ ಸೂಕ್ಷ್ಮವಾದ ವಿಚಾರ ಇವುಗಳನ್ನೆಲ್ಲ ಚಾಮರಸನು ರಸವತ್ತಾಗಿ ವಿವರಿಸಿದ್ದಾನೆ. ಬಸವಪುರಾಣದಲ್ಲಿದ್ದಂತೆ ತ್ರಿಷಷ್ಟಿ ಪುರಾತನರ ಕಥೆಗಳನ್ನಾಗಲಿ, ಚೆನ್ನಬಸವಪುರಾಣದಲ್ಲಿದ್ದಂತೆ ಈಶ್ವರನ ಪಂಚವಿಂಶತಿ ಲೀಲೆಗಳನ್ನಾಗಲಿ, ಹರೀಶ್ವರನ ಪ್ರಭುದೇವರ ಪುರಾಣದಲ್ಲಿದ್ದಂತೆ ಬಸವೇಶ್ವರನ ಎಂಬತ್ತೆಂಟು ಪವಾಡಗಳನ್ನಾಗಲಿ ವಿಸ್ತಾರವಾಗಿ ಬಣ್ಣಿಸಿ ಮೂಲ ಚರಿತ್ರೆಯನ್ನು ಚಾಮರಸನು ಹಸಗೆಡಿಸ ಹೋಗಿಲ್ಲ; ಇದು ಆತನ ಔಚಿತ್ಯಜ್ಞಾನಕ್ಕೆ ಸಾಕ್ಷಿಯಾಗಿದೆ. ಪ್ರಭುವಿನೊಡನೆ ಪ್ರತ್ಯಕ್ಷವಾಗಿ ಸಂಬಂಧವಾಗುವ ಬಸವೇಶ್ವರ, ಅಕ್ಕಮಹದೇವಿ, ಸಿದ್ಧರಾಮ ಮೊದಲಾದ ಮಹಾನುಭಾವಿಗಳ ಮೂರ್ತಿ–ಚಿತ್ರವನ್ನು ಅವರವರ ವ್ಯಕ್ತಿತ್ವವು ಸ್ಫುಟವಾಗುವಂತೆಯೂ ಪ್ರಭುದೇವನ ಹೆಚ್ಚಳವು ಒಡೆದುಕಾಣುವಂತೆಯೂ ಹೃದಯಂಗಮವಾಗಿ ಚಿತ್ರಿಸಿದ್ದಾನೆ.

ಚಾಮರಸನು ಈ ಚರಿತ್ರೆಯನ್ನು 'ಮಹಾಕಾವ್ಯ'ವಾಗಿ ಮಾಡಬೇಕೆಂಬಾಸೆಯಿಂದಾಗಲಿ, 'ವಸ್ತುಕವಾಗಿದ್ದುದನ್ನು ವರ್ಣಕವಾಗಿ' ಮಾಡಬೇಕೆಂಬಾಕಾಂಕ್ಷೆಯಿಂದಾಗಲಿ'ಕವಿಜನವಿಶೇಷೈರ್ಗುರುಕೃತ'ವಾದ ಹದಿನೆಂಟು ವರ್ಣನೆಗಳನ್ನು ತಂದೊಡ್ಡಿ ಕಥಾಪ್ರವಾಹವನ್ನು ತಡೆಯದಿರುವುದು ಆತನ

---

(೧) Lytton Strachey; Andre Maurois; Emil Ludwig ಮುಂತಾದವರು

ಕಲಾಭಿಜ್ಞತೆಯ ಕುರುಹಾಗಿವೆ ಕಥಾಸರಣಿಗನುರೂಪವಾದಂತಹ ಅಲ್ಪ ವರ್ಣನೆಗಳು ಸಮಯೋಚಿತವಾಗಿ ಮಿತವಾಗಿ ಅಲ್ಲಲ್ಲಿ ಬಂದಿವೆ. ಮಾಯಾ ದೇವಿಯ ಪ್ರಸಂಗದಲ್ಲಿ ವರ್ಣನಾಂಶಗಳು ಸ್ವಲ್ಪ ಹೆಚ್ಚಾಗಿ ಬರುವುವಾದರೂ ಮಾಯೆಯ ಸಹಜಮೋಹಕತ್ವವನ್ನು ಪ್ರಕಟಿಸುವುದಕ್ಕೂ ಅಂತಹ ಮಾಯೆಯ ತಿರಸ್ಕಾರ ಮಾಡಿದ ಪ್ರಭುವಿನ ಘನತೆಯನ್ನು ಪ್ರದರ್ಶಿಸುವುದಕ್ಕೂ ಅನುಕೂಲ ವಾಗಿವೆ. ಇಲ್ಲಿ ಗೋಚರವಾಗುವ ಶೃಂಗಾರವಾದರೂ ಗಂಭೀರವಾದ ರೀತಿ ಯಲ್ಲಿ, ಕಥಾಸಂವಿಧಾನಕ್ಕೆ ಉಚಿತವಾದ ರೀತಿಯಲ್ಲಿ, ಕವಿಯ ಮೂಲೋ ದ್ದೇಶಕ್ಕೆ ಪೋಷಕವಾಗುವ ರೀತಿಯಲ್ಲಿ ಬಂದಿರುವುದು ಪ್ರಶಂಸನೀಯವಾಗಿದೆ. ಇದಲ್ಲದೆ, ಲಲಿತಮಧುರವಾದ ಸಂಭಾಷಣದ್ವಾರಾ ಪಾತ್ರಗಳ ವ್ಯಕ್ತಿತ್ವವು ಪರಿಸ್ಫುಟವಾಗುವಂತೆ ಜೀವಕಳೆಯನ್ನು ತುಂಬಿದ ಚಾಮರಸನ ಚಾತುರ್ಯವು ಷಟ್ಪದಿಕಾವ್ಯಗಳ ಆದ್ಯ ಕವಿಯಾದ ರಾಘವಾಂಕನ ಪದ್ಧತಿಯನ್ನು ಹೋಲು ತ್ತದೆ.

ಈ ಗ್ರಂಥದಲ್ಲಿ ಉಪಯೋಗಿಸಿದ ಶೈಲಿಯಲ್ಲಿ ಕಂಡುಬರುವ ಮುಖ್ಯ ಗುಣಗಳೆಂದರೆ ಸರಳತೆ ಮತ್ತು ಶ್ರಾವ್ಯತೆ. ನಿರರ್ಥಕವಾದ ಕೂದಲುಸೀಳಿ ಕೆಯ ಅರ್ಥಾಲಂಕಾರಗಳನ್ನು ಕವಿಯು ಬಳಸಿಲ್ಲ. ಆದರೆ ಅರ್ಥವ್ಯಕ್ತಿಗೆ ಅನು ಕೂಲವಾಗುವಂತಹ, ಅನಾಯಾಸವಾಗಿಯೂ ನಿರಾಯಾಸವಾಗಿಯೂ ಸಾಧಿ ಸಿದರೆ ಕಾವ್ಯಕ್ಕೆ ಶೋಭೆ ನೀಡುವಂತಹ, ಉಪಮೆ–ರೂಪಕ ಮೊದಲಾದ ಸುಲಭಾಲಂಕಾರಗಳ ಉಪಯೋಗವನ್ನು ಚೆನ್ನಾಗಿ ಮಾಡಿಕೊಂಡಿದ್ದಾನೆ[೧].

---

೧ ಪರುಷಪಂಗಕೆ ಸುವರ್ಣಾಭರಣ ಬೇಕೆಂದೇನು ವಿಧಿಯೇ;
ಕರಕನಿಸ್ಮದ ಕಬ್ಬುನದ ತೊಡವಿಕ್ಕೆ ಹೊನ್ನಾಗೆ (೧–೧೫);
ಗಗನವನು ಮುಟ್ಟುವೊಡೆ ನೆಟ್ಟನೆ ನಿಗುರಿ ನಿಂದಿರಲೇನು ಕಾರಣ ? (೧–೧೬);
ಒಂದು ಬೀಜವ ಬಿತ್ತಿ ಮೇಲ್ ಮತ್ತೊಂದು ಫಲವನು ಬಯಸಿ
ಬಾತೊಡೆ ಬಂದುದಹುದೇ ? (೭–೭೭);
ನೂಲ ಸಂಕಲೆಗಡಿದು ಕನಕದ ಕೋಳವನು ಕಾಲಿಂಗೆ ಕೀಲಿಪ
ಕಾಳುಮತಿಯುವನಂತೆ (೧೩-೫);
ಬಸುರ ಹೆಂಡತಿಯೂಟ ಹೊಟ್ಟೆಯು ಶಿಶುವ ದಣಿಸುವಪೊಲವು (೨೩–೬೧)
ಇತ್ಯಾದಿ.

ಉದ್ಭಾವಕರೆಂಬ ಕನ್ನಡ ಕವಿಗಳ ಬಿಂದವಾಳವಾದ ಶ್ಲೇಷೆಯನ್ನು ಕವಿಯು ಬಳಸಿಲ್ಲವೆಂದೇ ಹೇಳಬೇಕು. ಅನುಪ್ರಾಸ–ಯಮಕ ಮುಂತಾದ ಶಬ್ದಾಲಂಕಾರಗಳು ಕಣ್ಣಿಗೆ ನಡುವಷ್ಟು ನಿಬಿಡವಾಗಿಲ್ಲ; ಸ್ವಾಭಾವಿಕವಾಗಿ ಓದುವವರ ಕಿವಿಗೆ ವ್ಯಂಜಕವಾಗುವಂತಹ ಕಥಾಪ್ರವಾಹಕ್ಕೆ ಅನುಕೂಲವಾಗುವಂತಹ ವ್ಯಂಜನಪ್ರಾಸವು (Consonance) ಮಾತ್ರ ಗ್ರಂಥದುದ್ದಕ್ಕೂ ಉಪಯೋಗವಾಗಿರುವುದು[1] ಚಾಮರಸನು ಶ್ರಾವ್ಯಕಾವ್ಯಗಳ ಗುಟ್ಟನ್ನು ಬಲ್ಲ ನಿಪುಣನಾದ ಗಮಕಿಯೆಂಬುದರ ದ್ಯೋತಕವಾಗಿದೆ.

ಚಾಮರಸನ ಭಾಷೆಯು ಷಟ್ಪದಿ ಕಾವ್ಯಗಳಲ್ಲಿ ಸಾಮಾನ್ಯವಾಗಿ ಉಪಯೋಗವಾಗುವ—ಅದರಲ್ಲಿಯೂ ಭಾಮಿನಿ ಷಟ್ಪದಿಗೆ ಅಳವಟ್ಟ—ನಡುಗನ್ನಡವು. ಆ ಕಾಲಕ್ಕೆ ವ್ಯಾಕರಣದ ಕಟ್ಟುಗಳು ಸಡಿಲತೊಡಗಿದ್ದುವೆಂಬುದು ಚಾಮರಸನ ಭಾಷೆಯಲ್ಲಿಯೂ ಚೆನ್ನಾಗಿ ಕಂಡುಬರುತ್ತದೆ. ಹೊಸ ಶಬ್ದಗಳನ್ನು ಸಾಧಿಸುವ ಕ್ರಮವೂ[2] ಸಂಸ್ಕೃತ ಶಬ್ದಗಳನ್ನು ನಿಯತರೀತಿಯಲ್ಲಿ ತದ್ಭವ ಮಾಡಿಕೊಳ್ಳದೆ ತನಗೆ ಅನುಕೂಲವಾದಂತೆ 'ಅಪಭ್ರಂಶ' ಮಾಡಿಕೊಳ್ಳುವ ಸ್ವಾತಂತ್ರ್ಯವೂ[3] ಷಟ್ಪದಿಕಾರರೆಲ್ಲರಲ್ಲಿಯೂ ಗೋಚರವಾಗುವಂತೆ ಚಾಮರಸನಲ್ಲಿಯೂ—ಸ್ವಲ್ಪ ಹೆಚ್ಚಾಗಿಯೇ—ಗೋಚರವಾಗುತ್ತದೆ. ಎಷ್ಟೋ ಬಳಿಕೆ ತಪ್ಪಿದ ಹಳಗನ್ನಡ ರೂಪಗಳೂ, ಶಬ್ದಗಳೂ, ಈ ಕಾವ್ಯದಲ್ಲಿ ದೊರೆ

---

೧ ತಾಳವಲಿ ತರಹರಿಸಿ ಮೆಲ್ಲನೆ ಮೇಳವಿಸಿ ಮೃಗನಯನಿ ಕರಸಂಚಾಳವರಿ ಬಳಬಳಸಿ।
(೪-೨೬):
ಬಳಿಕ ನೊಯ್ಯನೆ ಬರಿಯ ಬೇಹಿನ। ಬಳಕೆ ಬಳಲಿತು ತನ್ನ ಸ್ನೇಹಿಯ।
ಸೆಳಲು ನೆಲಸಿತು ಮೇನ ಹೆಚ್ಚಿತು ಕಾಂಕ್ಷೆ ಕವಲಾಯ್ತು॥
ತಿಳಿವು ತಿರುಗಿತು ಲಾಸ್ಯಲೀಲೆಯು। ಕೆಳಕೆ ಜಾರಿಸಿ ಹಿಂಗಿ ಹೋಯಿತು।
ಹೊಳೆದುದಲ್ಲಮನೆಳಬಳವಜಾವಾಸೆ ಮಾಯೆಯಲಿ॥
(೭-೩೪) ಇತ್ಯಾದಿ.

೨-೩ ಮಾಗುಹೀನ, ಶಿಕ್ಷಾಚಾರ್ಯತನ, ಕನ್ಯಾಮಾತ, ಎಸಳು [illegible], ಸಕ್ಕಾಸುದಿದ, ಪಾಟಕ, ತಳಿರಮಾ, ಕುಂದಾರಿ: ಕ್ರೀ (ಕ್ರೀಡೆ ಎಂಬುದಕ್ಕೆ), ಧರಿದ (ಧರಿಸ ಎಂಬುದಕ್ಕೆ), ನಮಿಸರು (ನಮಿಸರು ಎಂಬುದಕ್ಕೆ), ಉದಾಸೀನ (ಉದಾಸೀನ ಎಂಬುದಕ್ಕೆ) ಇತ್ಯಾದಿ.

ಯುತ್ತವೆ. ಇವಕ್ಕೆಲ್ಲ ಆದಾಗಲೇ ವಿಸ್ತಾರವಾಗಿ ಪ್ರಚಾರವಾಗಿದ್ದ ವಚನ ಸಾಹಿತ್ಯವು ಕಾರಣವಾಗಿರಬಹುದು.

ಕುಮಾರವ್ಯಾಸನೂ ಚಾಮರಸನೂ ಸಮಕಾಲೀನರಾದುದರಿಂದಲೂ ಷಟ್ಪದಿ ಗ್ರಂಥಕರ್ತರಲ್ಲಿ ಕುಮಾರವ್ಯಾಸನ ಸ್ಥಾನವು ಉನ್ನತವಾಗಿರುವುದರಿಂದಲೂ ಇವರಿರ್ವರ ಶೈಲಿಗಳನ್ನು ಹೋಲಿಸಲೆಳಸುವುದು ವಿಮರ್ಶಕರಿಗೆ ಸಹಜವಾಗಿದೆ ಆದರೆ ಶೈಲಿಯು ವ್ಯಕ್ತಿಗತವಾದಂತೆ ವಿಷಯಗತವೂ ಆಗಿರುವುದೆಂಬುದನ್ನು ನಾವು ಮರೆಯಬಾರದು; ಎಂದರೆ— ಒಬ್ಬ ಕವಿಯ ಶೈಲಿಯು ಇನ್ನೊಬ್ಬನ ಶೈಲಿಯಿಂದ ಭಿನ್ನವಾಗಿರುವಂತೆ ಅದೇ ಕವಿಯ ಶೈಲಿಯು ವಿಷಯಕ್ಕನುಸಾರವಾಗಿಯೂ ಭಿನ್ನವಾಗುವುದೆಂಬ ಮಾತನ್ನು ನಾವು ಲಕ್ಷ್ಯದಲ್ಲಿಡಬೇಕು. ಉದಾಹರಣಾರ್ಥವಾಗಿ–ಶೃಂಗಾರಕ್ಕೆ ಒಪ್ಪತಕ್ಕ ಮೃದುಮಧುರವಾದ ಶೈಲಿಯು ವೀರರಸಕ್ಕೆ ಸೋಭಿಸಲರಿಯದೆಂಬುದು ಎಲ್ಲರಿಗೂ ಹೊಳೆಯತಕ್ಕ ಮಾತಾಗಿದೆ. ಭಾರತವು ಎಲ್ಲ ರಸಗಳಿಗೂ ಎಡೆಗೊಡುವಷ್ಟು ವಿಶಾಲವಾದ ಕಥಾವಸ್ತುವನ್ನೊಳಗೊಂಡಿದ್ದರೂ ವೀರರಸವನ್ನು ಪ್ರಕಟಿಸುವ ಯುದ್ಧ ಭಾಗವೇ ಎಲ್ಲಕ್ಕೂ ಹೆಚ್ಚು ರಸವತ್ತಾದ ಭಾಗವೆಂದು ಎಲ್ಲರೂ ಒಪ್ಪುತ್ತಾರೆ. ಇದಲ್ಲದೆ ಮೂಲಭಾರತವು ಸರ್ವಸಮ್ಮತವಾದ ಸಾಹಿತ್ಯವಾದುದರಿಂದ ಅದರ ಪ್ರಭಾವವು ಅನುವಾದಕನ ಕೃತಿಯ ಮೇಲೆಯಾಗುವುದೂ ಸಹಜವಾಗಿದೆ. ಈ ದೃಷ್ಟಿಯಿಂದ ವಿಮರ್ಶಿಸಿದರೆ ಕುಮಾರವ್ಯಾಸನ 'ಗಂಡು' ಶೈಲಿಯು ಭಾರತಕ್ಕೆ ಯೋಗ್ಯವಾದ ಶೈಲಿಯೆಂದೆ ಒಪ್ಪಲೇಬೇಕು. ಆದರೆ ಸ್ವಲ್ಪ ಸೂಕ್ಷ್ಮವಾಗಿ ಓದುವವರಿಗೆ ಆ ಶೈಲಿಯು ಭಾರತದ ಮೊದಲಿನ ಪರ್ವಗಳಲ್ಲಿ ಆಡಂಬರದ ಶೈಲಿಯಂತೆ ಕಾಣಿಸುವುದೆಂದೂ ವೀರರಸ ಪ್ರಧಾನವಾದ ಕೊನೆಯ ಪರ್ವಗಳಲ್ಲಿ ಹೃದಯಂಗಮವಾಗಿರುವುದೆಂದೂ ಸ್ಪಷ್ಟವಾಗಿ ಕಾಣುವಂತಿದೆ. ಚಾಮರಸನ ಶೈಲಿಯಾದರೂ ಶಾಂತಿರಸ ಪ್ರಧಾನವಾದ ಪ್ರಭುಚರಿತೆಗೆ ಅನುರೂಪವಾಗುವಂತೆ ಮೃದುಮಧುರವಾಗಿಯೂ ಸರಸ-ಗಂಭೀರವಾಗಿಯೂ ತುಂಬಿದ ಹೊನಲಂತೆ ಪ್ರಶಾಂತವಾಗಿಯೂ ಪ್ರವಹಿಸುತ್ತದೆ. ವಿಷಯ ಸಾಮ್ಯತೆಯಿದ್ದಲ್ಲಿ ಚಾಮರಸನ ಶೈಲಿಯು ಕುಮಾರವ್ಯಾಸನ ಉಚ್ಚತರಗತಿಯ ಶೈಲಿಗೆ ಯಾವ ಬಗೆಯಿಂದಲೂ

ಕಡಿಮೆಯಾಗಿಲ್ಲ. ಅನೇಕ ಪದ್ಯಗಳಲ್ಲಿ[೧] ಅವರಿಬ್ಬರಲ್ಲಿಯೂ ಒಂದೇ ವಿಧವಾದ ದಾಟಿಯನ್ನು ಕೂಡ ನಾವು ಕಾಣಬಹುದು. ಈ ಕಾವ್ಯದಲ್ಲಿ ಬರುವ ಆಧ್ಯಾತ್ಮಿಕ ವಿಷಯಗಳ ವಿವೇಚನೆಯನ್ನು ಬಹು ಸುಲಲಿತವಾಗಿಯೂ ಸರಳವಾಗಿಯೂ ಮಾಡಿರುವುದು ಚಾಮರಸನ ವೈಶಿಷ್ಟ್ಯವೆಂದೇ ಹೇಳಬಹುದು. ಸ್ವಭಾವತಃ ಕಠಿಣವೂ ನೀರಸವೂ ಆದ ತಾತ್ತ್ವಿಕ ವಿವೇಚನೆಯು ಸುಬೋಧವಾಗುವಂತೆ ಮಾಡಿದ ಶ್ರೇಯಸ್ಸು ಚಾಮರಸನಿಗೇ ಸಲ್ಲುವುದು ಕನ್ನಡ ಸಾಹಿತ್ಯದಲ್ಲೆಲ್ಲ ಈ ವಿಷಯದಲ್ಲಿ ಪ್ರಭುಲಿಂಗಲೀಲೆಯನ್ನು ಬಹುಮಟ್ಟಿಗೆ ಹೋಲುವ ಇನ್ನೊಂದು ಗ್ರಂಥವೆಂದರೆ ಮಹಲಿಂಗರಂಗ[೨]ನಿಂದ ರಚಿತವಾದ

---

೧ ಪ್ರಭುಲಿಂಗಲೀಲೆ : ಕುಮಾರವ್ಯಾಸ ಭಾರತ:

| | |
|---|---|
| ೬, ೧೨ | ಉದ್ಯೋಗಪರ್ವ, ಸಂಧಿ ೩, ೪೯ |
| ೧, ೨ | ,, ,, ೪, ೩೫ |
| ೭, ೩೪ | ಅರಣ್ಯಪರ್ವ ,, ೯ ೩೬ |
| ೪, ೨೫-೩೫ | ಆದಿಪರ್ವ ,, ೨೯, ೨೮-೩೪, ೪೦ |

ಇವುಗಳನ್ನು ಉದಾಹರಣೆಗೆಂದು ಹೋಲಿಸಬಹುದು.

೨ 'ಮಹಲಿಂಗರಂಗ' ಅಥವಾ 'ರಂಗನಾಥ' ಇವನು ಜೀವಿಸಿದ ಕಾಲವು ಕ್ರಿ. ಶ. ೧೬೭೫ (ಸುಮಾರು) ಎಂದು ಕವಿಚರಿತೆಕಾರರು (ಕ। ಕ। ಚರಿತೆ, ಭಾಗ ೨, ಪುಟ ೪೯೦-೧) ಹೇಳಿದ್ದಾರೆ. ಈತನು ತನ್ನ ಗ್ರಂಥದಲ್ಲಿ (ಅಧ್ಯಾಯ ೧, ಪದ್ಯ ೫) :

ಸುಲಿದ ಬಾಳೆಯ ಹಣ್ಣಿನಂದದಿ । ಕಳೆದ ಸಿಗುರಿನ ಕಬ್ಬಿನಂದದ ।
ಲಿಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ ॥
ಲಲಿತವಹ ಕನ್ನಡದ ನುಡಿಯಲಿ । ತಿಳಿದು ತನ್ನೊಳು ತನ್ನ ಮೋಕ್ಷವ ।
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ॥

ಎಂದು ಕನ್ನಡ ಭಾಷೆಯ ಸಹಜ ಸುಲಭತೆಯನ್ನು ಹೊಗಳಿದ್ದಾನೆ. ಈತನ ಶೈಲಿಯಾದರೂ ಸುಲಭವಾಗಿಯೂ ಲಲಿತವಾಗಿಯೂ ಇರುವುದು. ಈ ಶೈಲಿಯು ಅಡಿಗಡಿಗೆ ಪ್ರಭುಲಿಂಗಲೀಲೆಯ ಶೈಲಿಯನ್ನೇ ಹೋಲುವದೆನ್ನಲಿಕ್ಕೆ ಸಂದೇಹವಿಲ್ಲ. ಉದಾಹರಣೆಗೆಂದು ೧-೨ ಪದ್ಯಗಳನ್ನು ಮಾತ್ರ ಇಲ್ಲಿ ಕೊಡುವೆವು.

| ಪ್ರಭುಲಿಂಗಲೀಲೆ : | ಅನುಭವಾಮೃತ : |
|---|---|
| ೨೪, ೧೬ | ೩, ೯೫ |
| ೧೬, ೧೩ | ೦೦, ೧೧೬ |
| ೧೭, ೨೪ | ೧೦, ೧೧೭, ಇತ್ಯಾದಿ. |

ಅನುಭವಾಮೃತವೆಂಬುದು. ಆದರೆ ಶೈಲಿಯಲ್ಲಿ ಆ ಕೃತಿಯು ಚಾಮರಸನ ಸರಣಿಯನ್ನೇ ಅನುಸರಿಸುವುದು ಆದಕ್ಕೆ ಕಾರಣವಾಗಿದೆ.

## ೭ ಪ್ರಭುಲಿಂಗಲೀಲೆಯ ಭಾಷಾಂತರಗಳು

ಈ ರೀತಿಯಾಗಿ ಚರಿತ್ರನಿರೂಪಣಕಲೆಯ ದೃಷ್ಟಿಯಿಂದಲೂ ತಾತ್ತ್ವಿಕ ವಿಷಯಗಳ ಸುಲಭ ವಿವೇಚನೆಯ ದೃಷ್ಟಿಯಿಂದಲೂ ಪ್ರಭುಲಿಂಗಲೀಲೆಯು ಉತ್ತಮ ಗುಣಗಳನ್ನೊಳಗೊಂಡ ಗ್ರಂಥವಾದುದರಿಂದ ಕನ್ನಡ ಸಾಹಿತ್ಯ ದಲ್ಲಿಯ ಅನೇಕ ಉದ್ದಾಮ ಗ್ರಂಥಗಳಿಗೆ ದೊರಕದೆ ಇದ್ದ ಪ್ರಶಸ್ತಿಯು ಈ ಕಾವ್ಯಕ್ಕೆ ನೆರೆಹೊರೆಯ ಸಾಹಿತ್ಯಗಳಲ್ಲಿ ಭಾಷಾಂತರದ ದ್ವಾರಾ ದೊರೆ ತಿದೆ. ತೆಲುಗ, ತಮಿಳು, ಸಂಸ್ಕೃತ, ಮರಾಠಿ ಈ ನಾಲ್ಕು ಭಾಷೆಗಳಲ್ಲಿ ಈ ಗ್ರಂಥವು ಪರಿವರ್ತನವಾಗಿರುವುದು ಕನ್ನಡಿಗರಿಗೆಲ್ಲ ಅಭಿಮಾನದ ಸಂಗತಿ ಯಾಗಿರುವುದಲ್ಲದೆ ಪರಭಾಷಾ ಸಾಹಿತ್ಯಗಳಲ್ಲಿ ಈ ಗ್ರಂಥಕ್ಕಿರುವ ಗೌರವ ವನ್ನೂ ವ್ಯಕ್ತಪಡಿಸುತ್ತದೆ. ವಿಜಯನಗರದ ಪ್ರೌಢದೇವರಾಯನು ಈ ಕಾವ್ಯಕ್ಕೆ ಲುಬ್ಧನಾಗಿ ಇದನ್ನು ತೆಲುಗು ಮತ್ತು ತಮಿಳು ಭಾಷೆಗಳಲ್ಲಿ ಅನುವಾದ ಮಾಡಿಸಿದನೆಂದು ಜನಜನಿತವಾದ ಆಖ್ಯಾಯಿಕೆ ಇದೆ; ಇ. ಪಿ. ರೈಸರವರೂ ಅದನ್ನೇ ಹೇಳುತ್ತಾರೆ೧. ಆದರೆ ಆ ಕವಿಗಳೆಲ್ಲ ಪ್ರೌಢದೇವ ರಾಯನ ಕಾಲದ ತರುವಾಯ ಬಹುದಿನಗಳನಂತರ ಬಾಳಿದರೆಂದು ಗೊತ್ತಾ ಗುವುದರಿಂದ ಈ ಗ್ರಂಥದ ಕೀರ್ತಿಯು ಕೇವಲ ರಾಜಾಶ್ರಯವನ್ನು ಅವಲಂಬಿ ಸದೆ ಅದಕ್ಕೂ ಹೆಚ್ಚು ಪ್ರಶಸ್ತವಾದ ಜನಾದರಣೆಯನ್ನು ಅವಲಂಬಿ ಸಿತ್ತೆಂಬುದು ಸಿದ್ಧವಾಗುತ್ತದೆ.

೧ E. P. Rice : History of Kanarese, Literature P. 68 : "He (Chamarasa) read his work at the court of Praudha Deve Rara (1419-1446) who highly honoured him, and caused it to be translated into Telugu and Tamil".

ಈ ಕಾವ್ಯದ ಪರಿವರ್ತನವನ್ನು ತೆಲುಗಿನಲ್ಲಿ ಪಿಡುಪರ್ತಿ ಸೋಮನಾಥ ಕವಿಯು ದ್ವಿಪದಿಯಲ್ಲಿಯೂ, ಪಿಡುಪರ್ತಿ ಬಸವಕವಿಯು ಚಂಪೂರೂಪವಾಗಿಯೂ ಬೇರೆಬೇರೆಯಾಗಿ ಮಾಡಿದ್ದಾರೆ[೧]. ತಮಿಳಿನಲ್ಲಿ ತಿರುವಂಣಾಮಲೆಯ ಶಿವಪ್ರಕಾಶಸ್ವಾಮಿಯೆಂಬ ಕವಿವರ್ಯರು ಅನುವಾದಿಸಿದ್ದಾರೆ[೨]. ಸಂಸ್ಕೃತದ ಪರಿವರ್ತನದಲ್ಲಿ ಕವಿಯ ಹೆಸರು ಉಕ್ತವಾಗಿಲ್ಲ; ಭವಿಷತ್ ಪುರಾಣಾಂತರ್ಗತವಾಗಿರುವುದೆಂದು ಮಾತ್ರ ಹೇಳಿದೆ. ಇದನ್ನು ರಚಿಸಿದ ಕಾಲವೂ ಗೊತ್ತಾಗುವಂತಿಲ್ಲ. ಇದು ಚೆನ್ನಬಸವ ಪುರಾಣದ ಕರ್ತನಾದ ವಿರೂಪಾಕ್ಷ ಪಂಡಿತನಿಂದ ರಚಿತವಾಗಿರಬೇಕೆಂದು ಒಬ್ಬರ ಅಭಿಪ್ರಾಯ; ಕೆಲವು ಸಾಮ್ಯಗಳ ಮೇಲಿಂದ ತೆಲುಗಿನಲ್ಲಿ ಅನುವಾದಿಸಿದ ಪಿಡುಪರ್ತಿ ಸೋಮನಾಥನಿಂದ ರಚಿತವಾಗಿರಬಹುದೆಂದು ಬೇರೆಯವರ ಅನುಮಾನ[೩]. ಇವಾವುದಕ್ಕೂ ಬಲವಾದ ಆಧಾರಗಳಿಲ್ಲ. ಮರಾಠೀ ಭಾಷೆಯಲ್ಲಿ ಪ್ರಭುಲಿಂಗ ಲೀಲೆಯು "ಲೀಲಾವಿಶ್ವಂಭರ" ವೆಂಬ ಹೆಸರಿನಿಂದ ಬ್ರಹ್ಮದಾಸನೆಂಬ ಕವಿಯಿಂದ ಓವೀರೂಪವಾಗಿ ಅನುವಾದಿತವಾಗಿವೆ[೪]. ಸಂಸ್ಕೃತ ಅನುವಾದದಲ್ಲಿ ಹೇಳಿದಂತೆ ಪ್ರಭುಲಿಂಗಲೀಲೆಯು ಭವಿಷ್ಯತ್ಪುರಾಣಾಂತರ್ಗತವಾದುದೆಂದು ಇದರಲ್ಲಿಯೂ ಹೇಳಿದೆಯಾದರೂ ಚಾಮರಸನ ಹೆಸರೂ ಕನ್ನಡ ಗ್ರಂಥದ ಒಟ್ಟು ಪದ್ಯಗಳ ಸಂಖ್ಯೆಯೂ ಉಕ್ತವಾಗಿವೆ. ಇದರದೊಂದು ಪ್ರತಿಯಲ್ಲಿ ಅದನ್ನು ಬರೆದ ಕಾಲವು ಶಾ. ಶ ೧೬೪೪ ಎಂದು ಹೇಳಿರುವುದರಿಂದ ಮೂಲ

---

(೧) ಈ ಕವಿಗಳ ಕಾಲವು ಕ್ರಿ. ಶ. ೧೫೧೦ ಎಂದು ಹಿಂದೆ ಹೇಳಿದೆ. (೨) ಈ ಕವಿಯ ಕಾಲವು ಕ್ರಿ. ಶ. ೧೬೫೨ ಎಂದು ಗ್ರಂಥದಿಂದಲೆ ಗೊತ್ತಾಗುತ್ತದೆ. (೩) ಪ್ರಭುಲಿಂಗ ಲೀಲೆಯ ಸಂಗ್ರಹ: ಪುಟ lxii. (೪) ಪ್ರಭುಲಿಂಗಲೀಲೆಯ ಮರಾಠೀ ಭಾಷಾಂತರದ ಒಂದು ಪ್ರತಿಯು [ಶ್ರೀ ಜ್ಞಾನೇಶ್ವರ ಪಟ್ಟದದೇವರು, ನಣದೀಕರ, ನಣದೀಮಠ, ನಿಪ್ಪಾಣಿ, ಇವರ ಹೆಸರುಳ್ಳದ್ದು] ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಬಳಿಯಲ್ಲಿದೆ. ಇದು ಒಂದು ಕನ್ನಡಿಗರಿಗೆ ಅಭಿಮಾನದ ಸಂಗತಿಯಾಗಿರುವದರಿಂದ ಆ ಭಾಷಾಂತರ ಬಗ್ಗೆ ಕೆಲ ಸಂಗತಿಗಳನ್ನು ಇಲ್ಲಿ ಕೊಡಲಾಗಿದೆ: ಈ ಗ್ರಂಥದ ಹೆಸರು 'ಲೀಲಾವಿಶ್ವಂಭರ' ವೆಂದು ಇರುವುದು; ಓವೀರೂಪವಾಗಿದೆ; ಒಟ್ಟು ೭೮೫೭ ಓವಿಗಳು, ೨೫ ಅಧ್ಯಾಯಗಳು ಇರುವುವು. ಇದನ್ನು ಬರೆದ ಕವಿಯ ಹೆಸರು ಬ್ರಹ್ಮದಾಸನೆಂದು ಮುಂದಿನ ಅಡಿಟಿಪ್ಪಣಿ ಪದ್ಯಗಳಿಂದ ಗೊತ್ತಾಗುತ್ತದೆ :

ಗ್ರಂಥವು ಅದಕ್ಕೂ ಹಿಂದೆ ಅನುವಾದವಾಗಿರಬೇಕು. ಈ ಎಲ್ಲ ಕವಿಗಳು ಸ್ವಂತ ಪ್ರತಿಭೆಯಿಂದ ತಮಗೆ ಬೇಕಾದ ಮಾರ್ಪಾಡುಗಳನ್ನು ಮಾಡಿಕೊಂಡಿದ್ದರೂ ಕಥಾಸರಣಿಯಲ್ಲಿ ಚಾಮರಸನ ಮೂಲ ಗ್ರಂಥವನ್ನೇ ಅನುಸರಿಸಿರುವರು.

## ೮ ಕೊನೆಯ ಮಾತು

ಒಟ್ಟಿನಲ್ಲಿ ಪ್ರಭುಲಿಂಗಲೀಲೆಯು ಕರ್ಣಾಟಕ ಸಾಹಿತ್ಯದಲ್ಲಿ ನಿರಂತರವಾಗಿ ನೆಲೆಗೊಳ್ಳಲು ಯೋಗ್ಯವಾದ ಶ್ರೇಷ್ಠ ತರಗತಿಯ ಕಾವ್ಯವಾಗಿದೆ. ಷಟ್ಪದಿ ಕಾವ್ಯಕರ್ತೃಗಳಲ್ಲಿ ಅತ್ಯಂತ ಪ್ರಖ್ಯಾತರಾದ ರಾಘವಾಂಕ ಕುಮಾರವ್ಯಾಸರ ಹೆಸರುಗಳೊಡನೆ ಚಾಮರಸನ ಹೆಸರನ್ನೂ ಪ್ರತಿಯೊಬ್ಬ ಸಾಹಿತ್ಯಾಭಿಮಾನಿಯು ಸ್ಮರಿಸಲೇಬೇಕೆಂಬುದು ನಿರ್ವಿವಾದವಾಗಿದೆ. ಅನ್ಯಭಾಷಾ ಸಾಹಿತ್ಯಗಳಲ್ಲಿ ಈ ಕಾವ್ಯಕ್ಕೆ ದೊರೆತ ಮನ್ನಣೆಯು ಅಸದೃಶವಾಗಿದೆ. ವೀರಶೈವರಿಗೆಲ್ಲ ಪರಮಪೂಜ್ಯನಾದ ಶ್ರೀಮದಲ್ಲಮಪ್ರಭುವಿನ ಲೀಲೆಯನ್ನು ರಸೈಕದೃಷ್ಟಿಯಿಂದ ಮನಂಬುಗುವ ರೀತಿಯಲ್ಲಿ ಕಾವ್ಯರೂಪವಾಗಿ ರಚಿಸಿ ಚಾಮರಸನು ಕೃತಕಾರ್ಯನಾಗಿದ್ದಾನೆ; ಇನ್ನಿತರರಿಗೆ ಆದರ್ಶಪ್ರಾಯನಾಗಿದ್ದಾನೆ.

**ಶಿ. ಶಿ. ಬಸವನಾಳ**

---

ಏಕಾದಶ ಶತೇಂ ಏಕಾದಶ । ಪದೇಂ ವದಲಾ ಮುನಿ ಚಾಮರಸ ॥
ಪಂಪಾಪತಿ ವಿರೂಪಾಕ್ಷ ಈಶ । ವರ ವಿಶೇಂಷಲಾವ್ರುನಿ ॥ ೬೬ ॥
ಲೀಂಲಾವಿಶ್ವಂಭರಾಚ ಚರಿತ್ರ । ಸರೋಂವರ ರಚಿಲೇಂ ಪವಿತ್ರ ॥
ಮೋಂಕ್ಷಲಾಭೇಂ ಸ್ನಾನೇಂ ಮಾತ್ರ । ಜೀಂವ ಸ್ವತಂತ್ರ ಪರಬ್ರಹ್ಮ ॥ ೬೭ ॥
... .... ... ...
ಶ್ರೀಂಗಿರಿಮಠ ಭೋಂಗದಾರ । ಸಂಪ್ರದಾಯಿ ಪದ ಮನೋಂಹರ ॥
ಸರಸ್ವತೀಂಶನಾಮಿ ಥೋಂರ । ಕೀಂರ್ತಿ ವಸುಂಧರೇಂ ವಿಸ್ತಾರಿಲಿ ॥ ೭೦ ॥
ಸನ್ಯಾಸಿಧರ್ಮ ವರಿಷ್ಠ ಮೂರ್ತಿ । ನಾಮೇಂ ನರಸಿಂಹಸರಸ್ವತೀಂ ॥
ಗಣಗಸೂಂರಿ ವಿಖ್ಯಾತಕೀಂರ್ತಿ । ಯೋಂಗೀಂ ವರ್ಣಿತಿ ಸರ್ವದಾ ॥ ೭೧ ॥
ತೋಂಚ ಆತ್ಮಾ ಮೂಲ ಪುರುಷ । ಶ್ರೀಂಕೃಷ್ಣಸ್ವಾಮಿ ಸದ್ಗುರು ಈಶ ॥

ತೇಂಗೇಂ ತಾರಿಲಾ ಬ್ರಹ್ಮದಾಸ । ಸ್ವಕೀಯ ಧ್ಯಾಸ ಲಾವುನಿ ॥ ೭೨ ॥

ಈ ಗ್ರಂಥವನ್ನು ಪ್ರತಿಮಾಡಿದ ಕಾಲವು 'ಶಾಲಿವಾಹನ ಶಕೆ ೧೬೪೪ ಶುಭಕೃತು ಸಂವತ್ಸರ ಚೈತ್ರ ಶುದ್ಧ ೭ ಸೋಮವಾರ ದಿಸೇ ಸಮಾಪ್ತಂ' ಎಂದು ಇದೆ. ಆದುದರಿಂದ ಕವಿಯು ಇದನ್ನು ಅದಕ್ಕೂ ಮೊದಲು ಬರೆದಿರಬಹುದು. ಈ ಕವಿಯ ಕಾಲವನ್ನು ಸರಿಯಾಗಿ ನಿರ್ಧರಿಸಲು ಸಾಕಷ್ಟು ಆಧಾರಗಳು ದೊರೆತಿಲ್ಲ.

-|| ಶ್ರೀ ಗುಹೇಶ್ವರಲಿಂಗಾಯ ನಮಃ || -

# ಪ್ರಭುಲಿಂಗಲೀಲೆ

### ಭಾಮಿನಿ ಷಟ್ಪದಿ

## ೧. ಮಂಗಲಾಚರಣದ ಗತಿ



ಸೂಚನೆ:

ಶ್ರೀಮೃದಮತಾಂಶುಪ್ರಮೌಳಿ
ಪ್ರೇಮಿಗಳಿಗಾನಂದ[1]ನಿತ್ಯವ[1]
ನೇಮಿಸಿದನೆಮ್ಮಲ್ಲಮಪ್ರಭು ಗುರು ಗುಹೇಶ್ವರನು ||

ಶ್ರೀಮದಮಲಜ್ಞಾನಭಕ್ತಿ
ಪ್ರೇಮ ವೇದಪುರಾಣಶಾಸ್ತ್ರ
ಸ್ತೋಮನುತನತಚಾರುಚರಣಾಂಭೋಜ ಘನಮಹಿಮ
ನಾಮ-ರೂಪ-ಕ್ರಿಯಾಕೞಾಪವಿ
ರಾಮನನುಪಮದಿವ್ಯತೇಜೋ
ವ್ಯೋಮಮೂರುತಿ ಗುರು ಗುಹೇಶ್ವರಲಿಂಗ ಶರಣಾ[2]ರ್ಥಿ[2] ||೧||

ಕಾಯದೊಳು ಗುರುಲಿಂಗಜಂಗಮ
ದಾಯತವನಱಿಯಲ್ಕೆ ಸುಲಭೋ
ಪಾಯದಿಂದಿದಿರಿಟ್ಟು ಬಾಹ್ಯಸ್ಥಲ[3]ಕೆ[3] ಕುಱುಹಾಗಿ
ದಾಯದೋಱಿ ಸಮಸ್ತಭಕ್ತನಿ
ಕಾಯವನು ಪಾವನವ ಮಾಡಿದ
ರಾಯ ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ ||೨||

೧. ಪದವಿಯ (ಗ.) ೨. ಗು ( ಇ. ) ೩. ದ ( ಅ, ಎ, ಒ, ಕ, ಚ,)

ವೀರಶೈವಾಚಾರಮಾರ್ಗವಿ
ಚಾರದಭ್ಯಂತರದೊಳೀ ಪರಿ
ಯೋರಣಿಸಿ ಹರಕರ್ಮಭಕ್ತಿಜ್ಞಾನ[೧]ವಿಹುದೆ[೧]ಂದು
ಧಾರುಣಿಯೊಳಜೀವಂತೆ ಕರುಣಾ
ಕಾರನಾಗಿ ಷಡುಸ್ಥಳವನು
ದ್ಧಾರಿಸಿದ ಗುರು ಚೆನ್ನ[೨]ಸಂಗನಬಸವ[೨] ಶರಣಾರ್ಥಿ || ೩ ||

ಕಂತುವನೆ ಕಂಗೆಡಿಸಿಯೊಳಪೊ
ಕ್ಕಂತರಂಗವಿಚಾರವೆಲ್ಲವ
ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡಯಿಸಿ
ಚಿಂತಿತಾರ್ಥವನರ್ಥಿಗಿತ್ತು ನಿ
ರಂತರಖಿಳರಿಗಜೀವನೀವ ಮ
ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ || ೪ ||

ಗೋಮುಖವ್ಯಾಘ್ರಂಗಳಂದದ
ಕಾಮ ಮೊದಲಾದಖಿಳವಿಷಯ
ಸ್ತೋಮವನು ಮುಱಿದಿಕ್ಕಿ ಮುಂಬರಿದಂತರಂಗದಲಿ
ಆ ಮಹಾಶಿವಲಿಂಗಸಂಗ
ಪ್ರೇಮಿಯಾಗಿ[೩]ಶಿವೈ[೩]ಕ್ಯಪದವನು
ನೇಮಿಸಿದ ಮಾದೇವಿಯಕ್ಕಗೆ ಶರಣು ಶರಣಾರ್ಥಿ || ೫ ||

ಶರಣುವೊಕ್ಕ ಸಮಸ್ತರಂತಃ
ಕರಣದಲ್ಲಿಯನಾದಿಮಾ[೪]ಯಾಂ
ಬರದ[೪] ಮೈಲಿಗೆದೊಳೆದು ಭಕ್ತಿರಸಪ್ರ[೫]ವಾಹ[೫]ದಲಿ
ಶರಣಪದವಿಗೆ[೬]ಸ[೬]ಲಿಸಿ ಪರಮೇ
ಶ್ವರನ ತೋಱುವ ಸುಲಭ ಕರುಣಾ
[೭]ಶರಧಿ[೭] ಮಡಿವಳ ಮಾಚಿದೇವ[೮]ಯ್ಯಂಗೆ[೮] ಶರಣಾರ್ಥಿ || ೬ ||

೧. ನಿಧಿಯೆಂಜ ( . ) ೨. ಬಸವಣ್ಣಂಗೆ (ಇ) ; ಬಸವೇಶ್ವರಗೆ (ಖ) ೩. ನಿತ್ಯ (ಇ, ಚ, ) ೪. ಯಾವರಣ (ಅ, ಇ, ) ೫. ಸಾರ (ಗ.) ೬. ಸಿ (ಬ) ೭. ಕರಣಿ (ಗ.); ಕರದ (ಮು.) ೮. ಮಹತ್ಮ (ಅ.)

ಮರುಳಶಂಕರದೇವರಿಗೆ ಕಿ
ನ್ನರಿಯ ಬೊಮ್ಮಣ್ಣಂಗೆಯೇಲೇ
ಶ್ವರದ ಕೇತಯ್ಯಂಗೆ ಗಾಣದ ಕನ್ನಪಯ್ಯಂಗೆ
ಪರಿಪರಿಯ ಶಿವಲಿಂಗಭಕ್ತಿಯ
ಪರುಠವಿಸಿ ಕಾಲನ ನಿವಾರಿಸಿ
ಹರನನೊಚ್ಚತಗೊಂಡ ಶಿವಶರಣರಿಗೆ ಶರಣಾರ್ಥಿ || ೭ ||

ಅಲ್ಲಮಪ್ರಭುಸಂಪ್ರದಾಯದ
ಸಲ್ಲಲಿತಸನ್ಮಾರ್ಗವನು ನಾ
ನೆಲ್ಲರಱೀವಂದದಲಿ ಪೇಳುವೆನುಚಿತವಚನದಲಿ
ಸೊಲ್ಲಿನೊಳಗಣ ಸೊಂಪನಿಂಪನು
ಬಲ್ಲವರು ಭಾವುಕರು ಭಕ್ತಿಯ
ಬಲ್ಲಿದರು [1]ಭಾವಿ[1]ಸುವುದೀ ಪ್ರಭುಲಿಂಗಲೀಲೆಯಲಿ || ೮ ||

ದೇಗುಲವೆ ಮಾತಾಡುವಂದದೊ
ಳಾಗಿರದೆ ಒಳ[2]ಗಿರ್ದು[2] ನುಡಿದೊಡೆ
ಲೋಗರಿಗೆ ಪ್ರತಿಶಬ್ದದಿಂದಾ ಪರಿಯಲೆನ್ನೊಳಗೆ
ಲಾಗಿನಿಂದಲಿ ಗುರು ಗುಹೇಶ್ವರ
ನಾಗಳೆನ್ನನು ನುಡಿಸಿದೊಡೆ ನುಡಿ
ದಾಗುಮಾಡಿಯೆ ಪೇಳ್ವೆನೀ ಪ್ರಭುಲಿಂಗಲೀಲೆಯನು || ೯ ||

ವಿವರಿಸುವೊಡೀ ಲೀಲೆಯನು ಹೇ
ಳುವನು ದಿಟ ನಾನಲ್ಲ ಮಿಗೆ ಕೇ
ಳುವರು ಮಾನವರಲ್ಲವಿದು ಸಾಮಾನ್ಯತರವಲ್ಲಾ
ಶಿವನ ನಟನಾಟಕದ[3]ಮಹಿಮೆಯ[3]
ಶಿವನೆ ಬಲ್ಲನದಂತುಕಾರಣ
ಶಿವನ ಭಕ್ತರು ತಿಳಿವುದೀ ಪ್ರಭುಲಿಂಗಲೀಲೆಯನು || ೧೦ ||

೧. ಲಾಲಿ (ಅ, ಇ.) ೨. ಹೊಕ್ಕು (ಜ) ೩. ಘನವನು (ಓ, ಗ.)

ಬಾಯ ನುಡಿಗಳ ಕೇಳಿ ಕಿವಿಯೊಳ
ಗಾಯೆನುತೆ ಪರಿಣಮಿಸಿ ಹೋಹ ವಿ
ಡಾಯವಲ್ಲಿದು ತಮ್ಮ ತನುಮನಧನವನೆಲ್ಲವನು
ಬೀಯಮಾಡಿಯೆ ಲಿಂಗದಲಿ ನಿಜ
ಕಾಯ ನಿಲುವೊಡೆ ನಿತ್ಯರಪ್ಪೊಡೆ
ದಾಯಿಗರು ಲಾಲಿಸುವುದೀ ಪ್ರಭುಲಿಂಗಲೀಲೆಯನು ॥ ೧೧ ॥

ಕಾಳೆಗದ ಕಥೆಯಲ್ಲ ವಿಷಯ೧ಗ
ಳೀ೧ಳಿಗೆಯ ವಿಧಿಯಲ್ಲ ಹೊಟ್ಟೆಯ
ಹೂಳಲಿಕ್ಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ
ಕಾಳೆಗವು ಕರಣದಲಿ ಸುರತದ
ಕೀಲು ಕುಂಡಲಿಯಲ್ಲಿ ತೃಪ್ತಿಯ
ದಾಳಿ ಗಗನದೊಳೆಂದು ಪೇಳುವುದೀ ಸುಬೋಧೆಯಲಿ ॥ ೧೨ ॥

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ೨ಹೊಲಬು೨ ತಾನಲ್ಲಾ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು ॥ ೧೩ ॥

ಕುಱುಗಳೋಪಾದಿಯಲಿ ಕಬ್ಬಿನ
ಹೊಱಗಣೆ೩ಲೆಯನೆ ಮೇದಕಟ ಮೆಲು
ಕಿಱುವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳುರಸವ
ಸೆಱೆ೩ ಸವಿವ ಗಜದಂತೆ ಭಕ್ತಿಯ
ತೆಱನ ತಿಳಿದಾಚರಿಸಬೇಕೆಂ
ದಱಿದವರು ಲಾಲಿಸುವುದೀ ಪ್ರಭುಲಿಂಗಲೀಲೆಯನು ॥ ೧೪ ॥

೧-೧. ದಾ ಹೇ (ಗ.) ೨. ಮಾತು (ಎ, ಬ, ಖ, ಚ.) ೩. ಳೆ (ಅ, ಗ, ಜ.)

ಪರುಷದಂಗಕೆ ಸಲೆ ಸುವರ್ಣಾ
ಭರಣ ಬೇಕೆಂದೇನು ವಿಧಿಯೇ
ಕರಕನಿಷ್ಠದ ಕಬ್ಬಸದ ತೊಡವಿಕ್ಕೆ ಹೊನ್ನಾಗೆ
ವಿರಚಿಸಿದೆ[೧]ನಾ[೧]ನಂತುಕಾರಣ
ಗುರು ಗುಹೇಶ್ವರಲಿಂಗಲೀಲೆಯ
ನೊರೆವೆನೆನ್ನಯ ತೊದಲುನುಡಿಯಲಿ ಸೇವ್ಯವಪ್ಪಂತೆ || ೧೫ ||

ಗಗನವನು ಮುಟ್ಟುವೊಡೆ ನೆಟ್ಟನೆ
ನಿಗುರಿ [೨]ನಿಂದಿ[೨]ರಲೇನು ಕಾರಣ
ಸಗುಣನಿರ್ಗುಣಭರಿತಚಿನುಮಯ ಗುರು ಗುಹೇಶ್ವರನ
ಹೊಗಳಲಾತನ[೩]ನೆ[೩]ನ್ನ ಬಡನುಡಿ
ಮೊ[೪]ಗಸಿ ಮು[೫]ಟ್ಟಿಹು[೫]ವೆಂದು ಪೇಳುವ
ಬಗೆಯಲುದ್ಯೋಗಿಸಿದೆನೀ ಪ್ರಭುಲಿಂಗಲೀಲೆಯನು || ೧೬ ||

ಆವುದಾನೊಂದನುಪಮದ ಮಹಿ
ಮಾವಲಂಬದ ನಿರ್ವಿಕಾರದ
ಕೇವಲಬ್ರಹ್ಮಸ್ವರೂಪಿನ ಲಿಂಗ[೬]ತತ್ತ್ವ[೬]ದಲಿ
ಶೀವಿ ರೂಪಾದನು ಸದಾಶಿವ
ದೇವನಾತಂಗಾದಳೊಬ್ಬಳು
ದೇವಿ ಪರಮಜ್ಞಾನಶಕ್ತಿಯೆನಿಪ್ಪಳಾತನಲಿ || ೧೭ ||

ಜ್ಞಾನಶಕ್ತಿ-ಸದಾಶಿವಂಗೆ [೭]ಸು
ಖಾ[೭]ನುಭವಶಿವನಾದನಾತಗ
ನೂನದಿಚ್ಛಾಶಕ್ತಿಯಾದಳು ಬಳಿಕಲವರಿಂದೆ
ತಾನೆಯಾದನು ರುದ್ರ ರುದ್ರಂ
ಗೇನು ಹೇಳುವೆನಾ ಕ್ರಿಯಾಶ
ಕ್ತ್ಯನುಗುಣಮತಿಯಾದಳೀ ಕ್ರಮದಿಂದಲಾದಿಯಲಿ || ೧೮ ||

೧. ನದ ( ಬ. ) ೨. ಕೊಂಡಿ ( ಇ. ) ೩. ಲೆ ( ಎ. ) ೪. ಸೊ ( ಉ, ಬ, ಗ. )
೫. ಟ್ಟುವು ( ಗ. ) ೬. ಲೀಲೆಯ ( ಬ, ಗ. ) ೭. ಸ।ದಾ ( ಅ. )

ಬಗೆಯಲಾ ರುದ್ರ-ಕ್ರಿಯಾಶ
ಕ್ತಿಗಳಿಗಾದನು ವಿಷ್ಣು ವಿಷ್ಣುವಿ
ಗಗಲದಿಹ ಮಾಲಕ್ಷ್ಮಿಯಾದಳು [೧]ಲಕ್ಷ್ಮಿ ವಿಷ್ಣುವಿಗೆ[೧]
ನೆಗಳ್ದನಂತಾ ಬ್ರಹ್ಮ[೨]ನಾತಂ[೨]
ಗೊಗೆದು ತೋಱಿದಳಾ ಸರಸ್ವತಿ
ಮಿಗೆ ಸರಸ್ವತಿ-ಕಮಲಸಂಭವರಿರ್ದರೊಲವಿನಲಿ ॥ ೧೯ ॥

ಎನಿತು [೩]ತೋಱಿಕೆಯಾದ ತೋಱಿಕೆ
ಯ[೩]ನಿತನೆಮ್ಮಯ ಗುರು ಗುಹೇಶ್ವರ
ನೆನಹು ಮಾತ್ರ[೪]ವೆ[೪] ಮಾಡಿ ದಿಟವೆಂಬಂತೆ ತೋಱಿಸಿದ
ಇನಿತರೊಳಗೆಲ್ಲರಿಗೆ ಮಿಗಿಲೆಂ
ದೆನಿಸಿ ತನ್ನಯ ಲೀಲೆಯಿಂದಲಿ
ವಿನುತಪದವಿಯ ಕೊಟ್ಟು ನಿಲಿಸಿದನಾದಿರುದ್ರಂಗೆ ॥ ೨೦ ॥

ಹುಟ್ಟಿಸುವ ಗುಣವೊಂದ ಬ್ರಹ್ಮಗೆ
ಹುಟ್ಟಿಸುವ ರಕ್ಷಿಸುವ ಗುಣವನು
ನೆಟ್ಟನಾ ವಿಷ್ಣುವಿಗೆ ರುದ್ರನೆನಿಪ್ಪ ಮಹಿಮಂಗೆ
ಹುಟ್ಟಿಸುವ ರಕ್ಷಿಸುವ ಭಕ್ಷಿಪ
ಕಟ್ಟಳೆಯನಳವಡಿಸಿ ಪಟ್ಟವ
ಕಟ್ಟಿ [೫]ಕರುಣಿ[೫]ಸಿ ಮೆಱೆದನೆಮ್ಮಯ ಗುರು ಗುಹೇಶ್ವರನು ॥ ೨೧ ॥

**ಅಂತು ಗತಿ ೧ಕ್ಕಂ ಪದ ೨೧ಕ್ಕಂ ಮಂಗಳಂ**

೧. ಬಳಿಕಲವರಿಂಗೆ ( ಗ. ) ೨. ಬ್ರಹ್ಮಂ ( ಇ, ಎ, ಖ, ಗ. ) ೩. ತೋಱುವ ತೋಱಿಕೆಗಳೆನಿತ ( ಇ. ) ೪. ದಿ (ಇ.) ೫. ಪಾಲಿ (ಇ.)

# ೨. ಪಾರ್ವತೀಪರಮೇಶ್ವರಸಂವಾದದ ಗತಿ

ಸೂಚನೆ:

ಪರಮನಿತ್ಯಾನಂದಗಸುಖವಹ[೧]
ಪರಿಯು ಕೇಳಿದೊಡೀಶ ಹೇಳಲು
ಗಿರಿಜೆ ಮಾಯೆಯನಿಳೆಗೆ ಕಳುಹಿದಳಱಿವೊಡಲ್ಲಮನಾ

ಪರಿಭವಂಗಳ ನೀಗಿಯಂತಹ:
ಕರಣವನು [೨]ಶುದ್ಧಯಿ[೨]ಸಿ ಮುಂದಣ
ಮರಣಬಾಧೆಯ[೩]ನೊದೆ[೩]ದು ನಿಶ್ಚಿಂತೆಯಲಿ ಸುಖದಿಂದೆ
ಪರಮಸುಜ್ಞಾನಾಮೃತವನಾ
ವ[೪]ರಿಸಿ ನಿತ್ಯವನಱಿವವರು ಸತ್
ಕರಿಸಿ ಕೇಳುವುದೀ ಮಹಾಪ್ರಭುಲಿಂಗಲೀಲೆಯನು ‖ ೧ ‖

ವರಸರಸ್ವತಿ-ಕಮಲಸಂಭವ
ರಿರವಿನಿಂದೆ ಸಮಸ್ತಸಚರಾ
ಚರವ ನಾನಾಯೋನಿಜಸ್ತ್ರೀಪುರುಷರೆಂದೆಂಬ
ಪರಿಪರಿಯಲಿಹ ಜೀವಜಾಲದ
ಹೊರಳಿ ಹುಟ್ಟಿತು ಕಮಲಜಾಂಡದ
ಹೊ[೫]ರೆಹೊರೆಗಳೆಡೆಗಳಲಿ[೫] ಕಿಕ್ಕಿ[೬]ಱಿಗಿಱಿ[೬]ದು ಸಂದಣಿಸಿ ‖ ೨ ‖

ಹರಿಸುರೇಂದ್ರಾದಿಗಳು ಮೊದಲಾ
ದರಿಗೆ ನಿರ್ಮಿತವಾಗಿ ಬಹುವಿ
ಸ್ತರದಲಪ[೭]ರವರಿಗೆ[೭] ಚತುರ್ದಶಭುವನಭವನದಲಿ
ಸುರನರೋರಗಮುಖ್ಯಸಚರಾ
ಚರರಿ[೮]ಗಿರಲ[೮]ಳವಡಿಲಕೆಲ ಮಾಡಿದ
ಪರುಠವಣೆ ಚೆನ್ನಾಯ್ತು ಚತುರಾನನನ ಚದುರಿನಲಿ ‖ ೩ ‖

೧. ಪಡವಿಯು (ಗ.) ೨. ಸಂದ್ಯೆ (ಅ.) ೩. ಗೆಲಿ (ಗ.) ೪. ದ (ಅ, ಎ, ಗ, ಜ.)
೫. ರಗಣೆಡೆಗಳಲಿಕ್ಕ (ಇ.) ೬. ರಿಗೆ ನೆರೆ (ಇ.); ರಿಗೆ ಮಿಗೆ (ಜ.)
೭. ಗೆಲ್ಲ (ಜ.) ೮. ಸಿ. (ಆ, ಜ.)
ಪ್ರ. ಲಿ. ೧ ಅ

ಆ ಸರೋಜಭವಾಂಡದೊಳಗತಿ
ಲೇಸೆನಿಸುವನುಪಮದ ಪರಶಿವ
ನಾ ಸದಾಶಿವನಾ ಶಿವನ [೧]ಮಹಿ[೧]ಮಾಭಿಧಾನಗಳಾ
ಭಾಸುರವೆ ಸಾಕಾರವಾದ ವಿ
ಳಾಸತೆಯಲಿಪ್ಪಾದಿರುದ್ರಗೆ
ವಾಸವಾದುದು ತನಗೆ ತಾನೆ ಮಹಾಮಹತ್ವದಲಿ ॥ ೪ ॥

ಮಿಸುಪ ಸತ್ವಗುಣ[೨]ಸ್ವ[೨]ಭಾವ
ಪ್ರಸರವೇ ರಜತಾದ್ರಿಯೆಂಬೀ
ಹೆಸರ ಪೆತ್ತು ನವೀನವಿಮಲಾಕಾರವೃತ್ತಿಯಲಿ
ದೆಸೆದೆಸೆಗೆ [೩]ದೇದಿಪ್ಯ[೩]ಮಾನದ
ಲೆಸೆದುದಂತಿಂತೆಂದು ಮಿಗೆ ಬ
ಣ್ಣಿಸಲು ಬಲ್ಲವನಾವ[೪]ನೈ[೪] ಕೈಲಾಸ[೫]ಪರ್ವತ[೫]ವ ॥ ೫ ॥

ನಿಗಮನಿಕರದ ಸುತ್ತುವಳಯದ
ಬಿಗಿದ ಕೋಂಟೆಯ ಶಾಸ್ತ್ರಸಂಚಯ
ದಗಳಿನಾಗಮಸಮುದಯಂಗಳ ದಾರವಟ್ಟಗಳ
ಹಗಲಿರುಳ ಹಂಗಿಲ್ಲದತಿಮಹಿ
ಮೆಗಳಿಗಾಸ್ಪದವಾಗಿ ಮಿಗೆ ಝಗ
ಝಗಿಸುತಿರ್ದುದು [೬]ರ[೬]ಮ್ಯವೆನೆ ರಚನೆಯಲಿ ರಜತಾದ್ರಿ ॥ ೬ ॥

ಶಕ್ತಿಸಂಚವನಱಿದ ಸದಮಲ
ಭಕ್ತಿಮಾರ್ಗದ ರಾಜಬೀದಿಯ
ಯುಕ್ತಿಗೊಪ್ಪುವ ಸೋಹಮೆಂಬೀ ಗುಡಿಯ ತೋರಣದ
ವ್ಯಕ್ತಮಲ್ಲದ ತತ್ವಮಸಿಯೆಂ
ಬುಕ್ತಿಯುಪ್ಪರಿಗೆಯಲಿ ನೆಱೆ ನಿ
ರ್ಮುಕ್ತಮಹಿಮೆಯ ಮನೆಗಳಲಿ ಮೆಱೆಯುತ್ತ [೭]ಕೈಲಾಸ[೭] ॥ ೭ ॥

೧. ಪರ (ಬ.) ೨. ಪ್ರ (ಇ.) ೩. ಯೀಶ್ವರಸ (ಗ.) ೪. (ನಾ. ಎ, ಒ, ಖ. ಚ, ಮ.) ೫. ಮಂದಿರ (ಬ.) ೬. ಕಾ (ಜ.) ೭. ರಜತಾದ್ರಿ (ಗ.)



ನಿರುತನಿಜಸುಖದೇವತಾಮಂ
ದಿರದ ಚಿತ್ತಸ್ಥಿರದ ಬಾಗಿಲ
ಹಿರಿದು ಪರಮಾನಂದದೊಡ್ಡೋಲಗದ ಚಾವಡಿಯ
ನೆರೆದು ಶೋಭಿಸುವಷ್ಟಮಹದೈ
ಸಿರಿಯು ಮೊದಲಾಗಿರ್ದ ನಾನಾ
ಹಿರಿಯ ಸಂಪದ ಸಂದಣಿಸಿದುದು ಶಿವನ ಭವನದಲಿ

ಹೊಳೆವ ಸಮ್ಯಗ್ಜ್ಞಾನಪೀಠ
ಸ್ಥಲದ ನಿತ್ಯಾನಂದ ನಿಜ ನಿ
ಶ್ಚಲ ನಿರಾಕುಳ ನಿರ್ವಿಕಾರ ನಿರಾಳ ನಿಶ್ಚಿಂತ
ಬಳಸಬಾರದ ಬಱಿಯ ಬೊಮ್ಮದ
ಹೊಳಹು ಸಾಕ್ಷಾತ್ಕರಿಸಿ ನೆಱೆ ನಿ
ರ್ಮಲ[1]ತೆವೆತ್ತಾ[1] ರುದ್ರನಿರುತಿರ್ಪನು ವಿನೋದದಲಿ　　॥ ೯ ॥

ಮೂಲತತ್ವವೆ ಮೋಱೆ ವಾಯುವೆ
ತೋಳುವಾದಿಯನಾದಿಯೆಂಬುವೆ
ಕಾಲು ಪಾವಕ-ದಿವಸಪತಿ-ಹಿಮಕರರೆ ಕಣ್ಣುಗಳು
ಕೀಲಿಸಿದ ಹೃದ್ಬೀಜಬಿಂದು ಚ
ಢಾಳಿಸಿದ ಶೀತಾಂಶುವಾಗಲು
ಮೇಳವಿಸಿ ತನುವೊಪ್ಪುತಿರ್ದುದು ಪಾರ್ವತೀಪತಿಯಾ　　॥ ೧೦ ॥

ಕಾಲು ಕಲ್ಪ-ವಿಕಲ್ಪಗಳು ನಳಿ
ತೋಳು ಮೋಹ-ಸ್ನೇಹಗಳು ನಡು
[2]ವೇಲ[2]ಸನ್ಮದ ವೃತ್ತಕುಚ[3]ಗಳು[3] ಕಾಮ-ಲೋಭಗಳು
ಲಾಲಿತಾಸ್ಯವೆ ಮಮತೆ ತೊಳಗುವ
ಲೋಲಲೋಚನವಱುಹು-ಕುಱುಹು ಸ
ಮೇಳವಾಗಿಹ ಗಿರಿಜೆ ಮೆಱೆದಳು ಶಂಕರಾಂ[4]ಕ[4]ದಲಿ　　॥ ೧೧ ॥

೧. ವೆಸಪ್ಪ (ಜ.) ೨. ಲೋಲ (ಗ.) ೩. ವೇ (ಗ.) ೪. ಗ (ಅ, ಇ, ಎ, ಜ.)

ಉರಗನಾಭರಣದ ಲಸನ್ಮಣಿ
ವಿರಚಿಸುವ ಭೂಷಣದ ಕಾಯದ
ಪರಮಶುದ್ಧಸ್ಫಟಿಕಕಾಂತಿಯ ದಿವ್ಯತನುರುಚಿಯಾ
ಗಿರಿಸುತೆಯನೀಕ್ಷಿಸುವ ನೋಟದ
ಹರನ ನೋಡುವ ವರಕಟಾಕ್ಷದ
ಬೆರಕೆ[1]ಯೊ[1]ಪ್ಪಿನ ದೇವ-ದೇವಿಯರಿರ್ದರೊಲಪಿನಲಿ || ೧೨ ||

ಸಸಿಯ ಶೀತಳದಂತೆ ಕಪ್ಪುರ
ದೆಸೆವ ಕಂಪುಗಳಂತೆ ಕನಕದ
ಮಿಸುಪ ಲೋಹಸುವರ್ಣದಂತೆ ಸುಧಾಂಶುರುಚಿಯಂತೆ
ಲಸಿತಮಿಥುನಾಳಾಪ ಹೊಱಗಾ
ಣಿಸದೆ ಶಕ್ತಿಸಮೇತ ಶಂಕರ
ನೊಸೆದು ಕುಳ್ಳಿತು ಮೆಱೆಯುತಿರ್ದನು ದಿವ್ಯತೇಜದಲಿ || ೧೩ ||

ಜೆಡೆಗಳೇ ಬೇರುಗಳು ಗಂಗೆಯ
ಮಡುವೆ ಬೆಳೆನೀರಂಗವೇ ತರು
ತೊಡವೆ ಪರ್ಣಗಳಭಯವರದವೆ ಕುಸುಮ[2]ಸತ್[2]ಫಲವು
ಒಡಲ[3]ನಪ್ಪಿ[3]ದ ಮಡದಿಯೇ ಬಿಡ
ದಡರಿ ಹಬ್ಬಿದ ಲತೆಯೆನಲ್ಕಾ
ಮೃಡನೆನಿಪ ಮೂಲಾತ್ಮವೃಕ್ಷಮಹಾ ವಿರಾಜಿಸಿತು || ೧೪ ||

ವರಸುಗಂಧದ ಭೂಷಣದ ಸೀ
ಗುರಿಯ ವಸ್ತ್ರದ ಪಾದುಕೆಯ ಚಾ
ಮರದ ಹಡಪದ ಕನ್ನಡಿಯ ಪರಿಚರ್ಯದೊಳಗದ
ಪರಮಸುಕೃತಿಗಳಿದ್ದರಾ ಶಂ
ಕರನ ಶರ್ವಾಣಿಯ ಸಮೀಪದ
ಹೊರೆಯಲ[4]ಗ್ಗದ[4] ರುದ್ರಗಣಗಳು ರುದ್ರಕನ್ಯೆಯರು || ೧೫ ||

೧. ಯು (ಅ, ಎ, ಜ.) ೨. ಸಂ (ಅ, ಉ, ಚ.) ೩. ನಂಟ (ಮ.); ಸಡರಿ (ಗ.)
೪. ಗಣಿತ (ಮ.)

ಬೆಸನ ಹಾರುವ ಪಾರ್ವತಿಯ ತಾ
ಮಸರಜಃಸಾತ್ವಿಕಗುಣಂಗಳು
ಪೆಸರುವಡೆದಬಲಾಕೃತಿಯಲ್ಲೋಲಗಿಸಿಕೊಂಡಿಹುವು
ಎಸೆವ ಮಾಯಾನಾಮವೇ ತಾ
ಮಸಗುಣಾನ್ವಿತೆಯಾಗಿ ಮಿಗೆ ರಂ[1]
ಜಿಸಿದಳವರೊಳು ಮಂಗಳೆಯ ಮನ್ನಣೆಯ ಮಹಿಮೆಯಲಿ || ೧೬ ||

ಕೆಂಜೆಡೆಯ ಮಕುಟಗಳ ತನುವಿನ
ರಂಜಿಸುವ ಚಾತುರ್ಭುಜಂಗಳ
ಕೆಂಜುರಿಯ ಹಣೆಗಣ್ಣುಗಳ ವಾಮಾಂಗಶಕ್ತಿಗಳ
ಕುಂಜರನ ಚರ್ಮಾಂಬರದ ಭವ
ಭಂಜನರು ಮುಂಬಿನಲಿ ತೇಜಃ
ಪುಂಜನೊಡ್ಡೋಲಗದೊಳಿರ್ದರು ರುದ್ರಕೋಟಿಗಳು || ೧೭ ||

ಪ್ರೇಮದಿಂದಲಿ ನೀಲಮೇಘ
ಶ್ಯಾಮಕಾಯರು ಸಾತ್ವಿಕಸ್ಥಿತ
ನಾಮಧೇಯರು ಕೌಸ್ತುಭೋರಃಸ್ಥಳದ ಚೆನ್ನಿಗರು
ಶ್ರೀಮಹಾಲಕ್ಷ್ಮೀಸಮೇತರು
ಕಾಮಜನಕರು ಕಮಲನೇತ್ರರು
ವಾಮದಲಿ ಶಿವಸಭೆಯೊಳಿರ್ದರು ವಿಷ್ಣುಕೋಟಿಗಳು || ೧೮ ||

ಚತುರತೆಯ ಚತುರಾನನದ ಶಾ
ಶ್ವತರಜೋಗುಣರಚಿತಮೂರ್ತಿಯ
ಸುತಸುವರ್ಣಚ್ಛವಿಯ ನಿರ್ಮಲಕಾಯಕಾಂತಿಗಳ
ಅತಿಶಯದ ಸಾಕ್ಷಾನ್ಮಹಾಭಾ
ರತಿಸಮೇತದ ಮಹಿಮರಾ ಪಶು
ಪತಿಯ ಬಲದಲಿ [2]ಮೆಱೆದಿರ[2]ತುಳಬ್ರಹ್ಮಕೋಟಿಗಳು || ೧೯ ||

೧. ರಾ (ಇ, ಜ.) ೨. ನೆರೆದುದ (ಅ, ಇ, ಗ.)

ಸುರರು ಖಚರರು ಸಿದ್ಧ ವಿದ್ಯಾ
ಧರರು ಮನುಗಳು ಯಕ್ಷ ರಾಕ್ಷಸ
ಗರುಡ ಗಂಧರ್ವಾದಿ ನಾನಾದೇವಯೋನಿಜರು
ಉರಗನರರೊಡಗೂಡಿ ದೇವೇಂ
ದ್ರರುಗಳಗಣಿತಕೋಟಿ ನೆರೆದುದು
ಸರಸಿಜಾಸನನಪರದೆಸೆಯಲಿ ಶಿವನ ಸಭೆಯೊಳಗೆ ॥ ೨೦ ॥

ಚಂದ್ರಕಳೆಗಳನೆಯ್ದೆ ಕರಗಿಸಿ
ತಂದು [೧]ಕರು[೧]ವಿನೊಳೆಜ[೩]ದರೋ ಮೇ
ಣಿಂದುವೌಳಿಯ ದರಹಸಿತವೇನೊಂದು ರೂಪಾಯ್ತೋ
ಎಂದೆನಲು ಪರಮೇಶ್ವರಂಗಾ
ನಂದದಾಶ್ರ[೨]ಯ[೨]ವೆನಿಪ ಮಹಿಮೆಯ
ನಂದಿಕೇಶ್ವರನಿರ್ದ [೩]ಸಮ್ಮುಖದಲ್ಲಿ ಶಂಕರನಾ[೩] ॥ ೨೧ ॥

ಜನನ ಜವಗೆಡಿಸುವ ಮಹಾಮೃ
ತ್ಯು[೪]ವಿನ [೫]ಮಿತ್ತುವ[೪] ಮಿಡಿವ[೫] ಕಾಲ[೬]ನ
ಠ[೬]ವಣೆಯನು ತಕ್ಕಿಸುವ ಕರ್ಮಭ್ರಮೆಯ ಭಂಗಿಸುವ
ಶಿವಪದದ್ರೋಹಿಗಳ ಸಜ್ಜನೆ
ಸವರಿ ಸೀಳ್ದಪ್ಪಳಿಸುವಘಟನ
ತಪಕತಕ್ಕೆಯ ವೀರಭದ್ರನು ಮುಂದೆ ಮೋಹಿಸಿದ ॥ ೨೨ ॥

ಹರನ ಹರುಷದ ಹಕ್ಕೆ ಪರಮೇ
ಶ್ವರನ ಪರಿಣಾಮದ ಪಸರ ಶಂ
ಕರನ ಸೌಖ್ಯದ ಸಾಲೆ ಮೃಡನೀಕ್ಷಿಸುವ ಮುಖಮುಕುರ
ಪರಮಭಕ್ತಿಯ ಭಾವಭಂಗಿಯ
ಕರುವೆನಿಸುವಾ ಭೃಂಗಿನಾಥನ
ಪರಿ ವಿರಾಜಿಸುತಿರ್ದುದಾ ಶಶಿಧರನ ಸಭೆಯೊಳಗೆ ॥ ೨೩ ॥

೧. ರೂ.(ಕ) ೨. ಪ(ಎ,ಬ,ಗ.) ೩. ಸಭವನ ದೃಷ್ಟಿಸಾರಿಯಲಿ (ಅ.) ೪–೪. ಪಸು ಪೋಂಟುಸ (ಉ,ಕ,); ಪಸು ಪೆಟ್ಟುವ(ಇ.) ೫–೫. ಗಂಟಲ ಮಿಡಿವ(ಗ.); ಜೇಟಿಸ ಪುಂಪಿಸ(ಅ.); ಮುಕುಟವನೆಪಿದವ(ಎ.) ಮೀಸೆಯ ಹಿಡಿವ(ಬ) ೬. ಸು.ರ(ಕ)

ಕಡಲನಾದೊಡೆ ಕಂಗಳಿಂದವೆ
ಕುಡಿವ ತತ್ತೊಡೆ ಮೇರುಗಿರಿಯನು
ಮಿಡಿದು ಮೀಂಟುವ ಮುಳಿದೊಡಬುಜಭವಾಂಡಮಂಡಲವ
ಹಿಡಿದು ಹಿಸುಕುವ ವೀರವೃತ್ತಿಯ
ಕಡುಹಿನುಗ್ರಸಮುಗ್ರರಿರ್ದರು
ಮೃಡನ [1]ಮುಂದೆಸೆಯಲ್ಲಿ ಭೂತಪ್ರೇತ[1]ಗಣನಿಕರ || ೨೪ ||

ವರವಿನಾಯಕ ದುರ್ಗೆ ಭೈರವ
ನೆರೆದ ವೇತಾಳಿಯರು ಕರಭೀ
ಕರದ ಶಾಕಿನಿ ಡಾಕಿನಿಯರುಗಳಾದಿಯಾಗಿರ್ದ
ಪರಿಪರಿಯ ಪೆಸರವರನೇಕರು
ನೆರೆದರಾ ಶಂಕರನ ಸಭೆಯೊಳು
ಹಿರಿದುಹರುಷಂಗಳಲಿ ಸಚರಾಚರರು ಸಂದಣಿಸಿ || ೨೫ ||

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರ ಗೌತಮ ಗಾರ್ಗ್ಯ ನಿರ್ಮಳ
ಗಾತ್ರನಾರದ ಭೃಗು ಪುಲಸ್ತ್ಯ ವಶಿಷ್ಠ ದುರ್ವಾಸ
ಚಿತ್ರತರವೆನಿಸುವ ಪವಿತ್ರಚ
ರಿತ್ರರಾ ಶಿಖಿರವಿಸುಧಾಕರ
ನೇತ್ರನೊಡ್ಡೋಲಗದೊಳಿರ್ದುದು ಪರಮಮುನಿನಿಕರ || ೨೬ ||

ಓಲಗಿಸುವ ನವಗ್ರಹಂಗಳ
ಸಾಲುಗಳ ಸೌರಂಭಗಳ ದಿಕ್
ಪಾಲಕರ ಸಂದಣಿಯ ಸಡಗರದಖಿಳಸಂಭ್ರಮದ
ಮೇಲೆಮೇಲುಪ್ಪಡಿಪ [2]ಪಾಠಕ[2]
ರೋಳಿಗಳ ಗಡಬಡಿಯ ಗಡಣದ
ಮೇಳದಲಿ ಮೆಱೆ[3]ದಿರ್ದುದಾ ಶಶಿಮೌಳಿಯಾಸ್ಥಾನ || ೨೭ ||

೧. ಓಂದೆಸೆಯಲ್ಲಿಯುಗಣಿತಪ್ರಮುಖ (ಗ.) ೨. ಸೂ (ಅ.) ೩. ಪಡಿಯಂದ (ಇ.ಬ.ಕ.)

ನೋಡಿದೊಡೆ ಮುಕುಳಿತಕರಂಗಳು
ಮೂಡುವವು ಮಣಿಮುಕುಟದಲಿ ಮಾ
ತಾಡಿದೊಡೆ ತನತನಗೆ ಜೀಯ ಹಸಾದವೆಂದೆನುತ
ಕೂಡೆ ಮಣಿವರು ಮೌಳಿಗಳನಾ
ರೂಢಿಯಾದ ವೃಷಧ್ವಜನ ಮನ
ವಾಡಿದಂತಾಡುತ್ತುವಿರ್ದುದು ಸಭೆ ಸ[೧]ಘಾಟ[೧]ದಲಿ ‖ ೨೮ ‖

[೨]ಬೆಳಗುಮಣಿಭೂಷಣದಿನತಿ ಮೆ
ಯ್ವೆಳಗು ಭೂಷಣ ಮೆಯ್ವೆಳಗಿನಿಂ
ಬೆಳಗು ನಖನಯಂಗಳಾಸ್ಥಾನದ ಮಹೋ[೩]ತ್ತಮರ[೪]
ಬೆಳಗು ಬೆಳೆದಾ ಶಿವನ ಮೂರ್ತಿಯ
ಬೆಳಗಿನೊಳು ಬೆರಸಿದೊಡೆ ಸಭೆಯದು
ಬೆಳಗುತಿರ್ದುದು ಶುದ್ಧಜ್ಯೋತಿ[೫]ರ್ಲೋಕ[೫]ವೆಂಬಂತೆ ‖ ೨೯ ‖

[೬]ಇರುತಲೊಂದಾನೊಂದುದಿನ ವಿ
ಸ್ತರವಿನೋದಂಗಳಲಿ ಸಭೆಯೊಳು
ಹರಿಕರಿಸಿ ದಂತಚ್ಛವಿಯ ಬೆಳುದಿಂಗಳನು ಸುರಿವ
ಕರಚೆಲುವ ಬಾಯ್ದೆಱೆಯ ಪರಮೇ
ಶ್ವರಿ ನಿಜಾಂತಃಕರಣಜನಿತ
ಸ್ಫು[೭]ರಣೆಯನು ಬಿನ್ನೈಸಲುದ್ಯೋಗಿಸಿದಳಭವಂಗೆ[೮] ‖ ೩೦ ‖

೧. ಗಾನ (ಎ,ಕ,ಗ.) ೨–೪. ಜಲಜಭವ ಮೊದಲಾದ ದೇವಾವಳಿಯು ಮಣಿಭೂಷಣದ ಕಾಯದ ಲಲಿತನಖನಯಂಗಳಾ ಶಿಖಿರವಿಸುಧಾಕರರ (ಗ.) ೩–೪. ನ್ನತಿಯು (ಉ.) ೫. ಲಿಂಗ (ಉ,ಜ.) ೭. ಸ್ಮ (ಅ,ಕ,ಜ.)

೬–೮. ಹರನ ವಾಮಾಂಗದಲಿ ಕುಳ್ಳಿರ್ದಿರುತಲೊಂದಾನೊಂದುದಿನ ಭೂ
ಧರವರಾತ್ಮಜೆ ನಿಜಮನೋಜನಿತಪ್ರಪಂಚವನು
ವರಪತಸುರುಚಿಚಂದ್ರಿಕೆಯನಾದರಹಸಿತವಪನೇಂದು ಬೀರು
ತ್ತಿರೆ ಶಿವಗೆ ಬಿನ್ನೈಸಿದಳು ಭಯಭರಿತಭಕ್ತಿಯಲಿ (ಗ.)

ಶಿವನೆ ನಿನ್ನೊಡ್ಡೋಲಗದೊಳೊ
ಪ್ಪುವ ಮಹಾಘನಮುಹಿಮರೆಲ್ಲರು
ಭವಕೆ ಬಾರದೆ ನಿತ್ಯಸುಖದಿಂದಿಪ್ಪರೋ ಮೇಣು
ಇವರಿಗೆಯು ನೆಲೆಯಿಲ್ಲವೋ ಪೇ
ಳಿವರವಸ್ಥೆಯನೆನುತ ಕೇಳಲು
ಶಿವೆಗೆ ತಿಳಿವಂದದಲಿ ಬಳಿಕಾ ಶಂಭುವಿಂತೆಂದ ॥ ೩೧ ॥

ಗಿರಿಜೆಯಹುದೌ ನಿನ್ನ ಬುದ್ಧಿಯ
ಪರಿಯದೊಳ್ಳಿಹ ಪ್ರಶ್ನೆಯಾಯಿತು
ಹರಿವಿರಂಚಿಗಳಾದಿಯಾದವರಾದೊಡೆಯು ತುದಿಗೆ
ವಿರಚಿಸುತ್ತಿಹ ನಾಮರೂಪಗ
ಳೊರೆದ ಸ^೧^ತ್ಕ್ರಿಯೆ^೨^ಯಿದ್ದುವಾ^೨^ದೊಡೆ
ದೊರಕಲಱಿಯದು ನಿತ್ಯಸುಖವಗಜಾತೆ ಕೇಳೆಂದ ॥ ೩೨ ॥

ಆಗಲಾದೊಡೆ ನಾಮ-ರೂಪು-
ಕ್ರೀಗಳನು ಗೆಲಬಲ್ಲ ವಿಮಲೋ
ದ್ಯೋಗವಾವುದು ಕರುಣಿಸಿದನಾನಱಿಯಬೇಕೆನಲು
ನಾಗಭೂಷಣ ದುರಿತಭೀಷಣ
ರಾಗಶೋಷಣ ಭಜಕಪೋಷಣ
ನಾಗಳಾ ಪಾರ್ವತಿಗೆ ಕರುಣಿಸಿ ಶಂಭುವಿಂತೆಂದ ॥ ೩೩ ॥

ಭೋಗಭೂಮಿಯ ಭೋಗತನುವಿನ
ಲಾಗದನುಪಮಸಿದ್ಧಿ ಕರ್ಮೋ
ದ್ಯೋಗಭೂಮಿಯ ಕರ್ಮತನುವಿನಲಲ್ಲದದಱಿಂದೆ
ಯೋಗಯೋಗ್ಯರು ಯೋಚಿಸುತ ಭೂ
ಭಾಗದಲಿ ಮಾನವಶರೀರಿಗ
ಳಾಗಿ ಸಾಧಿಸಿ ನಿಜವನಱಿವರು ಗಿರಿಜೆ ಕೇಳೆಂದ ॥ ೩೪ ॥

೧. ತ (ಅ, ಕ, ಗ, ಚ.) ೨. ಯಿಂದಲಾ (ಉ, ಜ.); ವಿವಿಧವಾ (ಗ.)

ಎನೆ ಹಸಾದವದಪ್ಪುದಾಡೊಡೆ
ಮನುಜಲೋಕದೊಳಾವ ಪರಿಯಿಂ
ದನುಭವಸ್ಥಿತಿಗತಿಯನುಪದೇಶಿಸುವ ಗುರುವಾರು
ಎನಗೆ ತಿಳಿವಂದದಲಿ ಪೇಳೆನ
ಲಿನಿಯಳಿಗೆ ವಿಸ್ತರಿಸಬೇಕೆಂ
ದನುಕರಿಸಿದನು ಶಂಭು ತತ್ತ್ವೋದ್ಯೋಗದಾ¹ಯಿಗನ¹ || ೨೫ ||

ಏನು ಹೇಳುವೆನಾದಿಯಲಿ ಸು
ಜ್ಞಾನಿ ನಿರಹಂಕಾರರೆಂಬರ
ನೂನತಪವನು ಮಾಡಲೆನ್ನ ನಿಜಸ್ವರೂಪವರಾ
ಸೂನುವೆಂಬಂದದಲಿ ಸುಳಿದನು
ತಾನೆಯಲ್ಲಮನೆಂಬ ಪೆಸರೊಳು
ಮಾನಿನಿಯೆ ಕೇಳಾ ಮಹಾತ್ಮನೊಳಱಿ²ವುದಱಿವುಗಳ² || ೨೬ ||

ಅಲ್ಲಮಪ್ರಭುವೆನಿಪನಾತನ
ಬಲ್ಲೆ ನಾನೀಗಱಿದೆ ³ಬಳಿಕಿ
ನ್ನ³ಲ್ಲಿ ನಿಜತತ್ತ್ವಸ್ವರೂಪವನಱಿವೊಡೇನರಿದು
ಒಳ್ಳಿತಾಯಿತು ತಿಳಿಯಬೇಕೆಂ
ಬೆಲ್ಲರಿಗೆ ಕರ⁴ಸುಲಭ⁴ವೆನುತಲಿ
ಘುಲ್ಲವಿಸಿ ಗಿರಿಜಾತೆ ನುಡಿಯಲು ಶಂಭುವಿಂತೆಂದ || ೨೭ ||

ಖಾತಿಗೊಳ್ಳದಿರಾಡಿ ತೋಱದೊ
ಡೀತ ನಿಷ್ಠುರನೆನ್ನದಿರು ಬಱಿ
ಮಾತುಮಾತಿಗೆ ಸಿಕ್ಕನಾರಾ⁵ರವರ⁵ ಭಕ್ತಿಗಳ
ರೀತಿಗಳಲಿಹರವರಿಗವರಾ
ಪ್ರೀತಿಯಲಿ ರೂಪಾಗಿ ತೋಱುವ
ನಾತನನುಪಮನಗಜೆ ಕೇಳ್ ಸಾಮಾನ್ಯನಲ್ಲೆಂದ || ೨೮ ||

೧. ಯುತವ (ಗ.) ೨. ನಿಜಸ್ಥಿತಿಯ (ಗ) ೩. ನೆನಗಿಂದ (ಜ.) ೪. ಕುಶಲ (ಕ.)
೫. ರಾವ (ಅ, ಕ, ಗ.)

ಇದು ಯಥಾರ್ಥದ [1]ವಾಕ್ಯವ[1]ದು ತ
ಪ್ಪದು ವಿಚಾರಿಸಲುಳಿದವರಿಗಾ
ದುದು ಮಹಾದುಸ್ತರತೆಯೆನ್ನಯ [2]ಚಾರು[2] [3]ಚತುರ[3]ತೆಗೆ
ಹೃದಯವನು ತೋಱಿಸದೆಯಲ್ಲಮ
ಹಮಳ ಹೋಹನೆ ಕಾಂಬೆನೆನುತಲಿ
ಮದಮತಿಯಲಾ ಗಿರಿಜೆ ನುಡಿದೊಡೆ ಶಂಭುವಿಂತೆಂದ ॥ ೩೯ ॥

ರಾಣಿಯಹುದೌ ನಿನ್ನ ಬುದ್ಧಿಯ
ಕಾಣಬಹುದಿನ್ನಾದೊ[4]ಡೀ ಪರಿ[4]
ಹೂಣಿಕೆಯ ನುಡಿದಿನ್ನು [5]ಹೊಳೆ[5]ದೊಡೆ ಸೋಲು ನಿನಗೆನಲು
ಮಾಣು ಬಱುಮಾತುಗಳನೆನುತಾ
ಪ್ರಾಣವಲ್ಲಭೆಗೆಂದಳಾ ಶ
ರ್ವಾಣಿಯೆನ್ನಯ [6]ಪೈಜೆ[7]ಯಿದೆಯ[8]ಹುದೆಂದಳಧಟನಲಿ ॥ ೪೦ ॥

ಬಳಿಕಲಂಬಿಕೆ ತನ್ನ ತಾಮಸ
ಕಳೆಯ ಮೂರುತಿಯಾದ ಮಾಯೆಯ
ನಿಳೆಯೊಳುದಯಿಸಿಯಲ್ಲಮನ ನೀನಱಿದು ಬಾಯೆನಲು
ತಿಳಿವೆನಾತನ ನಿಜವನಥವಾ
[9]ಹೊಳೆರ್ದ[9]ನಾದೊಡೆ ಮುಟ್ಟೆ ಹಿಡಿಕೊಂ
ಡೆಳೆದು ತಹೆನಾನೆನುತೆ ಪೈಜೆಯ ನುಡಿದಳಾ ಮಾಯೆ ॥ ೪೧ ॥

೧. ಮಾತಹು (ಗ.)
೨. ಮಾಯೆ (ಇ.)
೩. ಚಪಳ (ಎ.)
೪. ಡೆನ್ನಲಿ (ಮು.)
೫. ಹೋ (ಚ, ಜ, ಮು.)
೬–೭. ವಾಕ್ಯ (ಇ.)
೭–೮. ಯಹುದ (ಗ.)
೯–೯. ಸೆಳೆದೆ (ಅ, ಇ, ಉ) ; ಸೆಳೆದ (ಜ.)

ಇಂತು ನುಡಿದುನ್ಮತ್ತ[1]ವೃತ್ತಿ[1]
ಭ್ರಾಂತಿಯಲಿ ತನ್ನಳವನಱಿಯದೆ
ಕಂತುಹರನಾಸ್ಥಾನದಲಿ ಬೀಳ್ಕೊಂಡು ಬಿಂಕದಲಿ
ಮುಂತೆ ಮಲೆವುತ ನಲಿದು ಭೂಲೋ
ಕಾಂತರವ ನಿಶ್ಚೈಸಿ ಮಾಯಾ
ಕಾಂತೆ ಕರಭರವಸದಲೈದಿದ[2]ಳತಿ[3]ವಿನೋದ[3]ದಲಿ[2] ॥ ೬೨ ॥

ಅಂತು ಗತಿ ೨ಕ್ಕಂ ಪದ ೬೩ಕ್ಕಂ ಮಂಗಳಂ

---

೧. ರೀತಿಯು (ಗ.)

೨-೨. ಳಂದಿಳಾತಳಕೆ (ಜ.)

೩-೩. ವಿಲಾಸ (ಇ, ಚ.)

# ೩. ಮಾಯೆ ಹುಟ್ಟಿದ ಗತಿ

**ಸೂಚನೆ**

ಭೂವಳಯದೊಳು ಜನಿಸಿ ಮಾಯಾ
ದೇವಿ ಬಳೆಯುತ್ತಿರ್ದಳೊಪ್ಪುವ
ಹಾವಭಾವವಿಲಾಸವಿಭ್ರಮದಿಂದೆ ಮಿಗೆ ಸೊಗಸಿ

ಚಿತ್ತವಿಸುವುದು ಸಕಲಶಿವಭ
ಕ್ತೋತ್ತಮರು ಮುಂದಣ ಕಥಾಸದ್
ಬಿತ್ತರವನಮರಾದ್ರಿಗೊಪ್ಪುವ ತೆಂಕದಿಕ್ಕಿನಲಿ
ಸತ್ಯದಲಿ ಸದ್ಭಕ್ತಿಯಲಿ ಸ
ದ್ವೃತ್ತಿಯಲಿ [೧]ಸಚ್ಚರಿತದ[೧]ಲಿ ಸಂ
ಪತ್ತಿನಲಿ ಸಲೆ ಸೊಗಸಿ ಬೆಳವೊಲದೇಶ [೨]ಮೆಱೆ[೨]ದಿಹುದು || ೧ ||

ಆದಱೊಳವನೀಕಾಂತೆಗೊಪ್ಪುವ
ವದನವೋ ಶೃಂಗಾರಸಾರದ
ಸದನವೋ ಸೊಬಗಿನ ಸುಮಾನದ ಸುಖದ ನೆಲೆವೀಡೋ
ಸುದತಿರತ್ನಗಳೊಗೆವ ಚೆಲುವಂ
ಬುಧಿಯೊ ಪೇಳೆನೆ ಸಕಲಸೌರಂ
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು || ೨ ||

ಆವ ಕಾಲದಲಾದೊಡೆಯು ಫಲ
ವೀವುತಿಹ [೩]ಪಲತೆರೆದ[೩] ನೇಱಲು
ಮಾವು ದಾಡಿಮ ತೆಂಗು ನಾರಂಗಾದಿ ತರುಲತೆಯು
ತೀವಿ ಚರಿಸುವ ಶುಕಪಿಕಭ್ರಮ
ರಾವಳಿಯ: ನಾನಾವಿಧದ ಶೋ
ಭಾವಹವೆ ತಾನಾದುದಾ ಬನವಸೆಯಲುದ್ಯಾನ || ೩ ||

೧. ಸುಚರಿತ್ರದ (ಇ.); ಸದ್ಯುಕ್ತಿಯುಲಿ (ಜ.) ೨. ವೆಸೆ (ಞ) ೩. ಪನಸೀಳೆ (ಎ, ಜ.); ಪಲಸುಗಳು (ಖ.)

ಕೇರಿಕೇರಿಯ ತಳಿರಿಡಿದ ಗುಡಿ
ತೋರಣಂಗಳ ಪರಿಮಳಿಸುತಿಹ
ಸಾರಣೆಯ ಕಾರಣೆಯ ಗಂಧೋದಕದ ಚಳೆಯುಗಳ
ಸೌರಭದ ಪೂವಲಿಗಳಲಿ ಶೃಂ
ಗಾರಿಸಿದ ಬೀದಿಗಳ ಸೊಬಗಿನ
ಸಾರದಲಿ ಸಮನಿಸಿದುದತಿಸಂರಂಭ ಬನವಸೆಯಾ ॥ ೪ ॥

ವೇದಶಾಸ್ತ್ರಾಗಮಪುರಾಣವ
ನೋದುವ ಧ್ವನಿಯಿಂದೆ ಕಳನೊಳು
ಕಾದಿ ಗೆಲಿದತಿಬಳರ ಕೈವಾರಿಸುವ ಧ್ವನಿಯಿಂದೆ
ಬೀದಿಬೀದಿಗಳಲ್ಲಿ ನಿಗಡನಿ
ರೋಧಮದಗಜತತಿಯ ಬೃಂಹಿತ
ನಾದದಲಿ ಕಳಕಳತೆವೆತ್ತಿಹು[1]ದಾಗಳಾ ಪುರವು[1] ॥ ೫ ॥

ನುಡಿ[2]ವ[2] ಜಾಣರು ಸಕಲಶಬ್ದವ
ನಡೆ[3]ವ[3] ಜಾಣರು ನಿಖಿಳರೀತಿಯ
ಕುಡ[4]ವ[4] ಜಾಣರು ಕುಂದದಂತಿರಲರ್ಥಿಗರ್ಥವನು
ಪೊಡವಿಗಿದು ಪೊಸತೆಂಬ ಜನಪದ
ವಿಡಿದು ಕಿಕ್ಕಿಱಿಗಿಱಿದ ಬನವಸೆ
ಗೊಡೆಯನಾಗಿರುತಿರ್ಪ[5]ನ್ನೈ[5] ಮಮಕಾರ[6]ಭೂಪಾಲ[6] ॥ ೬ ॥

ಆರು ಬಣ್ಣಿಸಬಲ್ಲರಾ ಮಮ
ಕಾರನೃಪನ ಮಹಾಪ್ರತಾಪವ
ಶೂರತೆಯ ಸಾಹಸವನಾತನ ಸಕಲಗುಣಗಣವ
ಧಾರುಣಿಯಲಪ್ರತಿಮನಾಗಿಯು
ದಾರತೆಯಲಿರುತಿಪ್ಪನಾತಗೆ
ನಾರಿಯಾಗಿಹಳೊಬ್ಬ ಮಾನಿನಿ ಮೋಹಿನೀದೇವಿ ॥ ೭ ॥

೧. ದಲ್ಲಿ ಬನವಸೆಯು (ಗ, ಜ.) ೨, ೩. ದು (ಅ,ಇ,ಕ,ಜ.) ೪. ಲು (ಅ,ಇ, ಕ, ಜ.) ೫. ಸಾ (ಚ) ೬. ನೆಂಬ ಸ್ವಪ (ಚ)

ಕುಸುಮಬಾಣನೊ ರತಿಯೊ ಮೇಣಾ
ಶಶಿಯೊ ರೋಹಿಣಿದೇವಿಯೋ ಮೇ
ಣೆಸೆವ ಸುರಪನೊ ಶಚಿಯೊ ಮೇಣ್ ಪುರುಷೋತ್ತಮನೊ [1]ಸಿರಿ[1]ಯೋ
ಹೆಸರಿಡಲು ಹವಣಲ್ಲವೆಂಬೊಂ
ದಸಮಸಮ್ಮೇಳದ ಸಗಾಢದ
ಬೆಸುಗೆಯಲಿ ಮಮಕಾರನೃಪ-ಮೋಹಿನಿಯ[2]ರೆಸೆದಿಹ[2]ರು ॥ ೮ ॥

ಅವರು ಮಕ್ಕಳ ಬಯಸಿ ಭರದಲಿ
ವಿವಿಧಗೌರೀವ್ರತವೆ ಮೊದಲಾ
ದವನು ನಾನಾಶಕ್ತಿದೇವತೆಗಳ ಸಮೂಹವನು
ಶಿವಪದಪ್ರಾಂತವನು ಸಾರದೆ
ಕವಲುವಟ್ಟೆಗಳಲ್ಲಿ ಜಡದೈ
ವವನು ಮಿಗೆ ಮಮಕಾರನೃಪ-ಮೋಹಿನಿಯರರ್ಚಿಪರು ॥ ೯ ॥

ಭಾವಿಸಲು ಮಮಕಾರ-ಮೋಹಿನಿ
ದೇವಿಯರ ಬಸುಱಿನಲಿ ವರರಾ
ಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ
ದೇವ-ದಾನವ-ಮಾನವರುಗಳ
ಠಾವಣಿಯ ದನ[3]ವಾಗೆ[3] ಕಟ್ಟುವ
ಭಾವೆ ಮಾಯಾದೇವಿ [4]ಹುಟ್ಟಿ[4]ದಳಖಿಳವಿಭವದಲಿ ॥ ೧೦ ॥

ಸೂಳವಿಸಿದುವು ಗಡಣದಲಿ ನಿ
ಸ್ಸಾಳ ಗಿಡಿಬಿಡಿ ಕೊಂಬು ಚಂಬಕ
ಡೋಳು ಡೌಡೆ ಡಮಾಣ ಜಾಗಟೆ ಮದ್ದಳಾದಿಗಳು
ಓಳಿಯಲಿ [5]ಘೀಳಿ[5]ಟ್ಟು ಚೀಱುವ
ಕಾಳೆಗಳು ಮೊದಲಾದ ವಾದ್ಯದ
ಮೇಳ ಮೆಱೆದಿರ್ದುದು ಕುಮಾರಿಯ ಹೆತ್ತ ಹರುಷದಲಿ ॥ ೧೧ ॥

೧. ರಮೆ (ಇ.) ೨. ರೊಪ್ಪಿದ (ಗ.) ೩. ಮಾಡಿ (ಇ, ಮು.) ೪. ಜನಿಸಿ (ಮು.)
೫. ಭುಗಿಲಿ (ಗ.)

ಹಲುವುಕಾಲಕೆ ಹರಸಿ ಹೆತ್ತರು
ಲಲಿತಗಾತ್ರೆಯ ವಿಮಳನೇತ್ರೆಯ
ವಿಳಸಿತವ್ಯಾಮೋಹನವರಸಭರಿತಪಾತ್ರೆಯನು
ಬಳಿಕ ಬುಧರಿಗೆ ಸಕಲರಿಗೆ ಪೊಂ
ಗಳನು ಭೂ[1]ಗೋ[1]ವಸ್ತ್ರರತ್ನವ
ನೊಲಿದು ದಾನವ ಮಾಡಿದನು ಮಮಕಾರಭೂಪಾಲ ॥ ೧೨ ॥

ಇತ್ತಲಿಂತೀ ಮಾಯೆ ಹುಟ್ಟಿದ
ಡತ್ತ[2]ಲಖಿಳಬುಧವ್ರಜಂ[2]ಗಳ
ಚಿತ್ತಗಳು ಪಲ್ಲಟಿಸಿಯಾಶಾ[3]ಪಾ[3]ಶ ವೆಗ್ಗಳಿಸಿ
ಮುತ್ತು ನರೆತಿಹ ಜೀವಜಾಳರಿ
ಗೆ[4]ತ್ತ[4] ಕಾಮಗ್ರಹವಿಕಾರತೆ
ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯಾ ॥ ೧೩ ॥

ಊರ ತೊಱೆ[5]ದಡವಿಯೊಳು ಗಂಗಾ
ತೀರದೊಳು ಗಿರಿಗಹ್ವರಂಗಳ
ಘೋರತರಗುಹೆಗಳೊಳು ಜಲಪಂಚಾಗ್ನಿಮಧ್ಯದೊಳು
ಧೀರಮುನಿಗಳು ದಿಟ್ಟ ಸಿದ್ಧರು
ದಾರಯೋಗೀಶ್ವರರು ಭಯದಲಿ
ಭೋರನೆದೆಗುಂದಿದರು ಮಾಯೆಯ ಜನನಕಾಲದಲಿ ॥ ೧೪ ॥

ಬೆತ್ತ[6]ಬಿದಿರಿಡಿದಿರ್ದ[6] ತರುಲತೆ
ಹುತ್ತು[7]ಬೆಳೆದ[7] ಸಮಾಧಿವಂತರು
ಚಿತ್ತ[8]ಸಂಚಲವಾಗಿ[8] ನೆನಹಿನ ನೇಮ ನೆಲೆಗೆಡಲು
ಎತ್ತಲಿಂದೀ ಮಾಯೆ ಹುಟ್ಟಿತೆ
ಸುತ್ತೆ ಚಿಂತಾಕ್ರಾಂತರಾಗಿರೆ
ಸತ್ಯಸಿದ್ಧಿ ಪುರ್ವಾಸನಾ ಪ್ರಸ್ತಾವದಲಿ ಸುಕಿದ ॥ ೧೫ ॥

೧. ಹೀಜ (ಕ, ಬ, ಅ.) ೨. ಲಾ ಬುಧಪ್ರತಜನಂ (ಡ.) ೩. ನೀ (ಲ, ಡ.) ೪. [illegible] (ಮು.) ೫. [illegible] (ಗ.) ೬. [illegible] (ಆ. ಮು.) ೭. [illegible]
[illegible] (ಡ.)

ವಿನಯ ಮಿಗೆ ಬಳಿಕರ್ಘ್ಯಪಾದ್ಯಾ
ಸನಗಳಿಂ ಸತ್ಕರಿಸಿ ಮುದದಲಿ
ತನತನಗೆ ಸಾಧಕರು ಸಿದ್ಧರು ವರತಪೋಧನರು
ಇನಿತು ಕಾಲದೊಳಿಲ್ಲದೀಗಲು
ಮನಸು ಸ೧ಂಚಲವಾದುದೆಮ೨ಗೆ೨ಂ
ದೆನುತೆ ಪೇಳಿದರವರುಗಳು ದುರ್ವಾಸಮುನಿಪತಿಗೆ || ೧೬ ||

ಹೂಣಿ೩ಸಿಯೆ೩ ಹುರಿಗೊಂಡು ನೆಱೆ೩ ಗೀ
ರ್ವಾಣರೆಲ್ಲರ ಮುಂದೆ ಮಿಗೆ ರು
ದ್ರಾಣಿ ತನ್ನಯ ತಾವು ಸಾಂಗದ ಮಾಯೆಯನು ಕಳುಹೆ
ಮಾಣದಿಳೆಯೊಳು ಜನಿಸಿ ಬಂದಳು
ಕಾಣಿರೇ ಬಳಿಕಲಿ ಸಮಾಧಿ
ತ್ರಾಣಿಗಳಿಗೆಲ್ಲಿಯದು ತರಹರವೆಂದನಾ ಮುನಿಪ || ೧೭ ||

ಅಲ್ಲದಿರ್ದೊಡೆ ನಮಗಿದೆ೪ತ್ತಣ೪
ತಲ್ಲಣವು ಬರಲೇನು ಕಾರಣ
ವಿ೫ಲ್ಲ೫ ನಿಮ್ಮ ನಿರೂಪವಿದು ದಿಟವೆನುತೆ ಮುನಿನಿಕರ
ಒಳ್ಳಿತಾಯಿತು ನೀವು ಕೃಪೆಯಿಂ
ದಿಲ್ಲಿಗೈತಂದುದು ನಿಮಿತ್ತದ
ಲೆಲ್ಲ ಸಂಶಯವಳಿದುದೆಂದರು ಮುನಿಗಳಾತಂಗೆ || ೧೮ ||

ಮತ್ತೆ ಮಾಣದೆ ಕೇಳಿದರು ಮುನಿ
ಪ್ರೋತ್ತಮರು ದುರ್ವಾಸಮುನಿಯನು
ಚಿತ್ತವಿಸು ತನ್ಮಾಯೆ ಜನಿಸಿದಳೇನು ಕಾರಣವು
ಎತ್ತಣದು ಸಾಂಗತ್ಯ ನಮಗೀ
ಚಿತ್ತರವನಱುಪೆಂದೊಡವರಿಗೆ
ತಥ್ಯವನು ವರಮುನಿಗಳಿಗೆ ದುರ್ವಾಸನಿಂತೆಂದ || ೧೯ ||

೧. ಚ (ಅ.) ೨. ಗ (ಪು.) ೩. ಕೆಯು (ಮು.) ೪. ಲ್ಲಿಯು (ಇ.) ೫. ಲ್ಲಿ (ಉ, ಎ, ಋ.)

ಮಾತುಮಾತಿನೊಳೋಲಗದೊಳಗ
ಜಾತೆ ಶಿವನೊಳು ಗೋಷ್ಠಿಮಾಡುತ
ಲಾತನನು ನಿಜರೂಪ ಕೇಳಿದೊಡಲ್ಲಮಪ್ರಭುವ
ಭೂತಳದೊಳಿಂದಲ್ಲಿ ತಿಳಿಯೆನೆ
ಭೂತನಾಥನು ಬಳಿಕ ಪಾರ್ವತಿ
ಪ್ರೀತಿಯಿಂದಟ್ಟಿದಳು ನಿಜತಾಮಸದ ಮಾಯೆಯನು ॥ ೨೦ ॥

ಇದುವೆ ಕಾರಣ ಮಾಯೆ ತಾ ಪು
ಟ್ಟಿದಳು ಬಳಿಕಿನ್ನಾರಿ[೧]ಗಾದೊಡೆ[೧]
ವಿದಿತವಾಗಿಹುದಲ್ಲಮಪ್ರಭುಲಿಂಗಸಂಗವನು
ಹೃದಯದೊಳು ಹುರಿಗೊಳಿಸುವೊಡೆ ಬಳಿ
ಕದಳಿ ಮಹಿಮೆಯನೇನ ಹೇಳುವೆ
ಸದಮಳಸ್ವಾತಂತ್ರ್ಯ ನಿಜವಹುದೆಂದನಾ ಮುನಿಪ ॥ ೨೧ ॥

ಎಂದು ಪೇಳ್ದಲ್ಲರಿಗೆ ಮನದ ತ
ಮಂಧವನು ಪರಿಹರಿಸಿ ಬಳಿಕಾ
ನಂದದಲಿ ದುರ್ವಾಸಮುನಿ ಹೋದನು ನಿಜಾಶ್ರಮಕೆ
ಅಂದು ಮೊದಲಾಗಳಿವವರು ಮನ
ಬಂದ ಪರಿಯಲಿ ಭಕ್ತಿಯುಕ್ತಿಗ
ಳಿಂದ ಸಾಧಿಸುತಿರ್ದರೆಮ್ಮಯ ಗುರು ಗುಹೇಶ್ವರನ ॥ ೨೨ ॥

ಮತ್ತೆ ಮನದಲಿ ತಮ್ಮ ತಮ್ಮಯ
ಚಿತ್ತದೊಳಗಲ್ಲಮನ ನೆನೆವುತೆ
ಸುತ್ತಿ ಸುಳಿಯದೆ ಮುನ್ನಿನಂತಿರ್ದರು ತಪೋಧನರು
ಇತ್ತಲೀ ಮಮಕಾರನೆಂಬ ನೃ
ಪೋತ್ತಮನ ಸುಕುಮಾರಿ ಮಿಗೆ ಬಳೆ
ವುತ್ತಲಿರ್ದಳು ಗಳಿಗೆಸಂಖ್ಯೆಗೆ ಸಕಲಸುಖದಿಂದೆ ॥ ೨೩ ॥

೧. ಗೆಯು ನಿಜ (ಇ.)

ಸಿಸುವ ನೋಡಿದ ಕಣ್ಗೆ ಸೂಯವೆ
ಮುಸುಕುವುದು ಮನ ಮೆಚ್ಚುವುದು ಮೋ
ಹಿಸುವುದೀ ಪರಿ ಜನನಿಜನಕಾದ್ಯರುಗಳೆಲ್ಲರಿಗೆ
ವಸುಮತೀಪತಿ ಬಳಿಕಲತಿಸಂ
ತಸದಲಾತ್ಮಜೆಗಖಿಲವಿಭವದಿ
ಹೆಸರನಿಟ್ಟನು ಮಾಯೆಯೆಂಬ ನವೀನನಾಮವನು ॥ ೨೪ ॥

ಉಲಿವ ಗೆಜ್ಜೆಯ ಕಾಲ ಕಡಗದ
ಘುಲಘುಲಿಸುವಂದುಗೆಯ ರತುನದ
ಉಳಿಯ ಕಟಿಸೂತ್ರದ ಝಣತ್ಕಾರಿಸುವ ಕಂಕಣದ
ಹುಲಿಯುಗುರ ಬಂದಿಯ ಸುಢಾಳದ
ಲೊಲಿವ ಮಾಗಾಯಿಗಳ ಪೊಳೆವರ
ಳೆಲೆಯ ಮಿಸುಗುವ ಬಾಲದೊಡಿಗೆಯ ಮಾಯೆಗಿಕ್ಕಿದರು ॥ ೨೫ ॥

ಪೆಚ್ಚುನೀರೆಱೆದಿಟ್ಟು ತೊಟ್ಟಿಲೊ
ಳೊಚ್ಚೆಱಗ ದುಗುಲದಲಿ ಹೊಕ್ಕುಳ
ಮುಚ್ಚಿ ಸೊಡರಕ್ಕಿನಲಿ ಬೊಟ್ಟಿಟ್ಟೊಲವಿನಲಿ ಹರಸಿ
ನಿಚ್ಚ[2]ದಲಿ[2] ತೂಪಿಱಿದು ತೂಗುವ
ನಚ್ಚುಮಚ್ಚಿನ ದಾದಿ[3]ಯರ್ಗಂ[3]
ಮೆಚ್ಚನೀವುತೆ ಹೆಚ್ಚುತಿರ್ದಳು ಮೋಹಿನೀದೇವಿ ॥ ೨೬ ॥

[4]ಹಲಗೆ[4]ಮಾಣಿಕದೊಟ್ಟಿಲಲಿ ಮ
ಗ್ಗುಲಿಸಿ ಮಲಗಿ ನಿರೀಕ್ಷಿಸುತೆ ಮಾ
ರ್ಪೊಳೆವ ತನ್ನನೆ ಕಂಡು ನಲಿಯುತೆ ನಗುತೆ ಕೈದುಡಿಕಿ
ಸೆಳೆದು ತೆಗೆದರೆ ಬಾರದಿರಲಾ
ನೆಳಲ[5]ನೊದೆವು[5]ತೆ ಕಾಲ ಗೆಜ್ಜೆಗ
ಳುಲುಹನಾಲಿಪ ಮಾಯೆ ಮೆಱೆದಳು ಬಾಲಲೀಲೆಯಲಿ ॥ ೨೭ ॥

೧. ಚ (ಇ, ಮ.) ೨. ನಿಂಗೆ (ಚ.) ೩. ಗಾಗಳು (ಅ, ಉ.); ಯರಿಗೆಯು (ಗ.)
೪. ಹೊಳೆವ (ಗ.) ೫. ನೋಡು (ಅ.)

ಹೊಡೆಮು[1]ರ[1]ಳ ಕಲಿತರೆ ವಿರಕ್ತರ
ದೃಢತೆ ಹೊಡೆಗೆಡೆಯಿತ್ತು ದಟ್ಟಡಿ
ಯಿಡಲು ಕೆಟ್ಟುದು ಶೌಚ ಬಾಲಬ್ರಹ್ಮಚಾರಿಗಳ
ನುಡಿಗಲಿಯೆ [2]ಮೌನಿ[2]ಗಳ ಬಾಯ್ಗಳ
ಲಿಡಿದ ಮುದ್ರೆಗಳೊಡೆದುವೆಂದೆನೆ
ನುಡಿವೆನಾನಿನ್ನೇನ ಮಾಯೆಯ ಬಳವಿಗೆಯ [3]ಬಲುಹ[3] ॥ ೨೮ ॥

ಆಡಿಸುವ [4]ದಾ[4]ದಿಯರ ಸಂಜ್ಞೆಯ
ಲಾಡಿ ಪರಿದ[5]ಪ್ಪಪ್ಪೆ[5]ನುತ್ತಲಿ
[6]ಕೂಡೆ ನಡೆತಂದ[6]ಪ್ಪಿ ಮೇಲುದ ಸೆಱಗಿನೊಳಗಡಗಿ
ನೋಡುತಲಿ ದಾ[7] ಎನುತೆ [8]ಜ್ಜೈಮುಂ
ಡಾ[8]ಡಿ ಮುಂದಲೆವಿಡಿದು ಕುಣಿಕುಣಿ
ದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ ॥ ೨೯ ॥

ಒಮ್ಮೆ ಮಮಕಾರವನಿಪನನೊ
ಮ್ಮೆಮ್ಮೆ ಮೋಹಿನಿದೇವಿಯನು ಮ
ತ್ತೊಮ್ಮೆ ತನ್ನನಾಡಿಸುವ [9]ತರುಣಿ[9]ಯರ ತಂಡವನು
ಹೆಮ್ಮೆಗೊಳಿಸುತೆ ಸುಖಮುಖವ ಹೊಱ
ಹೊಮ್ಮಿಸುತೆ ನೆಱೆ ಬಾಲಲೀಲೆ[10]ಯ
ಸೊಮ್ಮ[10] ಸೂಱೆಯ ಕೊಡುತಲಿರ್ದಳು ಮಾಯೆ [11]ಮಹಿಯೊಳ[11]ಗೆ ॥ ೩೦ ॥

೧. ಗು(ಅ.)
೨ ಯೋಗಿ(ಅ.)
೩. ಪರಿಯ (ಇ.) ; ಹದನ (ಕ.); ಹವಣ (ಮು.)
೪. ಕೆಳ (ಅ,ಇ,ಕ.)
೫. ಬ್ಬಬ್ಬೆ (ಜ.)
೬. ಓಡಿಬಂದಮರ್ದ (ಅ.)
೭. ಬಾ (ಅ.)
೮. ಕೈ ಮುಂದ್ದಾ (ಅ )
೯. ಕೆಳದಿ (ಎ.)
೧೦. ಯೊಳೊಪ್ಮೆ (ಜ.) ೧೧. ಮೋಹಿಸಿ (ಇ,ಜ,ಮು.)

ಬೀಱುತಿರ್ದಳು ಮುದ್ದುತನವನು
ಹೇಱುತಿರ್ದಳು [೧]ಸಕಲ[೧] [೨]ಚೆಲುವನು[೨]
ತೋಱುತಿರ್ದಳು ಜಗದ ಜಂಗುಳಿಗಾಡು[೩]ಪೊಲನಾಗಿ[೩]
ಸಾಱುತಿರ್ದಳು ಸಕಲಸೊಬಗನು
ಮೀಱುತಿರ್ದಳು ದಿನದಿನಕೆ ಕಳೆ
ಯೇಱುತಿರ್ದಳು ಮಾಯೆ ವಿವಿಧವಿಲಾಸವೃತ್ತಿಯಲಿ || ೩೧ ||

ಹಿಡಿ[೪]ಹಿಡಿದುಕೊಂಡ[೪]ರ್ತಿಯಲಿ ಬೆಂ
ಬಿಡದೆ ಶಿಕ್ಷಾಚಾರ್ಯತನದಲಿ
ಜಡಿದು ಜಂಕಿಸಿ ಮುದ್ದುತನ[೫]ವಿಗೆ[೫] ಮಾಯೆ ತನ್ನಂತೆ
ನಡೆಯ ಕಲಿಸಿದಳಂಚೆವಿಂಡಿಗೆ
ನುಡಿಯ ಕಲಿಸಿದಳರಗಿಳಿಗೆ ಸರ
ವಿಡಲು ಕಲಿಸಿದಳಾ[೬]ಕೆ[೬] ತನ್ನರಮನೆಯ ಕೋಗಿಲೆಗೆ || ೩೨ ||

ಮನದ ಮಾತಿನ ರೀತಿಗಳು ಕ
ಣ್ಣಿನಲಿ ಕೈಗಳ ಸಂಜ್ಞೆಗಳು ಹು
ಬ್ಬಿನಲಿ ಸೊಬಗಿನ ಸೌಮ್ಯತೆಯ ಸಂಗ್ರಹವು ಮೊಲೆಗಳಲಿ
ಅನುಕರಿಸಿ ಮೊನೆದೋಱುತಿರ್ದುವು
ದಿನದಿನಕೆ ಹೆಚ್ಚುತಲಿ ಮಾಯಾ
ವನಿತೆಗಂಕುರಿಸಿತ್ತು ಜವ್ವನ ಜಗವ ಜೋಂಪಿಸುತೆ || ೩೩ ||

ಆ ನಟನೆಯಾ ರೀತಿ[೭]ಯಾ ನಿಲ[೭]
ವಾ ನಡೆವ ಗತಿ ಗಮಕವಾ ತೊಡೆ
ಯಾ ನಿತಂಬಗಳಾ ನಡುವಿನಸಿದಾ ಮೊಲೆಯ ಚೆಲುವು
ಆ ನಯ[೮]ದ ತೋಳಾ ಮುಖಾಂಬುಜ
ವಾ ನಯನ[೮]ವಾ ನೋಟವಾ ತುಱು
ಬಾ ನವೀನತೆಯುಡಿಗೆಯೇಂ ನೆಲಸಿದವೋ ಮಾಯೆಯಲಿ || ೩೪ ||

೧. ನಿಖಿಳ (ಇ,ಜ.) ೨. ಕಳೆಗಳ (ಇ.) ೩. ಪೋಜೆಯಲಿ (ಐ.); ಪಂಪಪಲಿ (ಗ.)
೪. ಮುಯೊಳತಂಪ (ಇ.) ೫. ಪಲಿ (ಅ.) ೬. ಗ (ಅ.) ೭. ಮೋಹನ (ಇ.)
೮. ನವಾ ತೋಳ್ ಮುಖಾಂಬುಜ। ವಾ ನಗೆಯು (ಇ.)

ಮಾಡಿಸಿದನು ಕುಮಾರಿತಿಗೆ ಮಣಿ
ಮಾಡ ನಾನಾಪರಿಯ ಮಂಟಪ
ಖೇಡಕುಳಿಯು[1]ಪವನಗಳೊ[1]ಲಗಶಾಲೆ ಮೊದಲಾದ
ರೂಢಿ[2]ಸಿದ ವಿನಿಯೋಗ[2] [3]ಕೇಳಿಗೆ[3]
ಜೋಡಿಸಿದ [4]ಮನೆ[4]ಗಳನು ಕನ್ನೆಗೆ
ಮಾಡವೊಂದನು ರಚನೆಯಲಿ ಮಮಕಾರಭೂಪಾಲ || ೩೫ ||

ಆಕೆ ಕನ್ಯಾಮಾಡದೊಳು ನಾ
ನಾಕುಶಲಶಾಸ್ತ್ರವನು ವಿದ್ಯಾ
[5]ನೀಕವನು ಪರಿಚರಿಸಿ[6] ಪರಿಣತೆಯಾಗಿ[7] [8]ಸುಖ[8]ದಿಂದೆ
ಆ ಕುಮಾರಿತಿಯಿರುತಿರಲು ಬಳಿ
ಕಾ ಕಳಾನಿಧಿ ನೃಪತಿ ಮಾಯೆಗೆ
ಬೇಕೆನುತಲಾ[9]ಳಾಪಿಸಿ[9]ದ ಮದುವೆಯನು ಮನದೊಳಗೆ || ೩೬ ||

ಲಾಳ ಗುಜ್ಜರ ಬೋಟ ಕರಹಟ
ಚೋಳ ಪಾಂಡ್ಯ ಕಳಿಂಗ ಚೀನ ಕ
ರಾಳ ಕೊಂಕಣ ಮಲಯ ಮಗಧ ಮರಾಟ ನೇಪಾಳ
ಮಾಳವರು ಮೊದಲಾದ ಭೂಮೀ
ಪಾಲರೊಳುಯೆನ್ನಯ ಕುಮಾರಿಯ
ತೋಳುದೊಡವಿನ್ನಾರೆನುತೆ ಚಿಂತಿಸಿದನವನೀಶ || ೩೭ ||

ಇರುತಿರಲು ಮಮಕಾರಭೂಮೀ
ಶ್ವರನ ವಿಮಲಾನ್ವಯಕೆ ನೆಟ್ಟನೆ
ಗುರುವೆನಿಪಹಂಕಾರನೆಂಬಾಚಾರ್ಯನೈತಂದು
ಅರಸು ಮಾಡುವ ವಂದನೆಯ[10]ನಾ
ದ[10]ರಣೆಯನು ಕೈಕೊಳುತೆ ಕೇಳಿದ
ಕರುಣದಿಂದಲಿ ಭೂಮಿಪನ ಸುಕ್ಷೇಮಕುಶಲವನು || ೩೮ ||

೧. ಪ್ರಾಂಗೆಯೊ (ಇ.) ೨. ವಿಡಿಪುವನಂಗ(ಬ, ಕ, ಗ, ಜ.) ೩. ಪಂಗಕೆ (ಅ.) ೪. ನೆಲೆ (ಗ.) ೫ ೬. ನೇಕಗಳನುಪಚರಿಸಿ (ಇ.) ೫–೭. ನೇಕರಸವನು ಪರಿಚರಿಸಿ ಪರಿಣಾಮ (ಗ.) ೮. ಪುರದ (ಅ, ಬ.) ೯. ಳೋಚಿ (ಅ, ಎ.) ೧೦. ನನು (ಜ.)

ಕೇಳಿ ಹರುಷಿತನಾದನಾ ಭೂ
ಪಾಲಕನ ಸುಕ್ಷೇಮಕುಶಲವ
ನಾಲಿಸುತಲವನಿಪನ ಕೆಲದ ಕುಮಾರಿಯನು ಕಂಡು
ಆ ಲತಾಂಗಿಯ ರೂಪರೇಖಾ
ಜಾಲವನು ಚೆನ್ನಾಗಿ ತಿಳಿದು ಕೃ
ಪಾಳು ನಿಶ್ಚೈಸಿದನು ಕಾರಣಕನ್ಯೆಯಿವಳೆಂದು || ೩೯ ||

[೧]ಇನಿತು[೧] ನೆಯ್ದಿಲುಗಣ್ಣ [೨]ಕೋಕ[೨]
ಸ್ತನದ ತೊಳಪ ಮೃಣಾಳನಾಳದ
ತನುಲತೆಯ ಮಿ[೩]ಸು[೩]ಗುವ ತರಂಗದ ನಿಱಿಯ ನಿಱಿಗೆಗಳ
ಇನಿತು ಚೆಲುವಿನಲಿಪ್ಪ ಮಾಯಾಂ
ಗನೆಯ ಲಾವಣ್ಯಾಂಬುಸರಿಸಿಯ
ಲನುಚರಿಸುವಂತಪ್ಪ ಹಂಸನ ಕೇಳ್ದನಾಚಾರ್ಯ || ೪೦ ||

ಕೇಳಲಾಚಾರ್ಯಂಗೆ ಧರಣೀ
ಪಾಲ ಬಿನ್ನೈಸಿದನು ನೀವೇ
ಹೇಳಬೇಹುದು ದೇವ ವರನಾರೀ ಕುಮಾರಿತಿಗೆ
ಲಾಲಿಸುವು[೪]ದುರಗೇ[೪]ಂದ್ರಸುರನರ
ಜಾಲದೊಳು ಸಾದೃಶ್ಯಸದ್ಗುಣ
ಶೀಲರಾರೆನಲರಸಗೊಲಿದಾಚಾರ್ಯನಿಂತೆಂದ || ೪೧ ||

ಫಲಿತಚೂತದ ಮರನ ಸಿರಿ ಕೋ
ಗಿಲೆಗೆ ನೆಟ್ಟನೆ ಹಾಲು ಹಂಸೆಗೆ
ಲಲಿತಕುಸುಮದ ಕಂಪು ತುಂಬಿಗೆ ಸವಿಯನೀವಂತೆ
ಉಳಿದ [೫]ಖಗ[೫]-ಕಡುದುಱಿಗಳಿಗೆ ಸುಖ
ವಳವಡುವುದೆ ಸದಾಶಿವಂಗೀ
ಲಲನೆಯಲ್ಲದೆ ನರರಿಗುಚಿತವೆ ಭೂಪ ಕೇಳೆಂದ || ೪೨ ||

೧. ಬಿಸುತ (ಅ, ಆ, ಜ.) ೨. ತೋರ (ಬ, ಕ, ಗ.) ೩. ಸು (ಮು.) ೪. ದಮರೇ (ಅ, ಇ, ಕ.) ೫. ಬಕ (ಕ, ಜ.)

ಶಿವನೆ ಪತಿಯಹನೆಂದು ನೀವ್ ಚಿ
ತ್ತವಿಸಿದಿರಿಯಾ ಶಿವನು ದಿಟ ಮಾ
ನವಶರೀರಿಗಳಿಗೆ ಸುಸಾಧ್ಯನೆ ದೇವ ಪೇಳೆನಲು
ಶಿವನು ಶಿವಭಕ್ತಿಯನು [೧]ವಿುಗೆ[೧] ಮಾ
ಡುವರಿಗವರವರಿಚ್ಛೆಯನು ಸಲಿ
ಸುವನು ಸತ್ಯವಿದೆಂದ[೨]ನೊಲಿದಾಚಾರ್ಯನರಸಿ[೨]ಂಗೆ || ೪೩ ||

ಎನುತೆ ಸಂಭ್ರಮದಿಂದೆ ಮಾಯಾಂ
ಗನೆಗೆ[೩]ಯುಪದೇಶವ[೩]ನು ಮಾಡಿ[೪]ದೊ
ಡ[೪]ನುಕರಿಸಿ ಮಾಡುತ್ತಲಿರ್ದಳು ಭಕ್ತಿಯನು ಬಳಿಕ
ಜನಪ[೫]ತಿಯೊ[೫] ಸುಖದಿಂದಲ[೬]ರಿಯೆಂ
ದೆನುತ[೭]ಹಂಕಾರಾರ್ಯ[೮]ರ್ಬೀ[೯]ಳ್ಕೊ
ಟ್ಟನುಗತಿಯ[೧೦]ಂಲ್ರೈ[೧೦]ದಿದನು ತನ್ನಯ ನಿಜನಿವಾಸ[೧೨]ವನು[೧೨] || ೪೪ ||

ಧರಣಿಪಾಲಕನಿತ್ತ ಸುಖದಿಂ
ದಿರುತಲಿರ್ದನು ಈ ಕುಮಾರಿತಿ
ಹರುಷದಿಂದಲಿ ನಿತ್ಯನೇಮವ ಒಡಿದು ಛಲದಿಂದೆ
ಪುರಕೆ ಘಟಿಕಾಸ್ಥಾನವೆನಿಸುವ
ಪರಮಸಿದ್ಧಿಯನೀವ ಮಧುಕೇ
ಶ್ವರನ ಪೂಜಿಸುತಿರ್ದಳೆಸಿಯನ ಬಯಸಿ ಭಕ್ತಿಯಲಿ || ೪೫ ||

೧. ಸಲೆ(ಎ.)
೨. ನಾಚಾರ್ಯನು ನೃಪಾಲ (ಚ.)
೩. ಶಿವದೀಕ್ಷೆಯ (ಚ, ಮ.)
೪. ಸ।ಲ (ಜ.)
೫. ಸೀ (ಗ.)
೬–೧೧. ಮುದಂ। ದೆನುತಲಾಹಂಕಾರ ಬೀಳ್ಕೊಂ। ಡನು ನೃಪತಿಯ್ಕೆ (ಇ.)
೭–೮. ಲಾಹಂಕಾರ (ಗ, ಜ.)
೯–೧೦. ಳ್ಕೊಂ। ಡನುನಯುದ (ಗ.
೧೨. ಕ್ಕೆ (ಅ, ಚ, ಜ.)



ಬನವಾಸಿಯ ಮಧುಕೇಶ್ವರ ದೇವಾಲಯ

ಅಷ್ಟ[೧]ವಿಧದರ್ಚನೆಗಳಿ[೧]ಂದುಭ
ಯಾಷ್ಟವಿಧದುಪಚಾರದಿಂದಲ
ಭೀಷ್ಟವೆನಿಸುವ ನಿಜಮನೋವಲ್ಲಭನ ಬಯಕೆಯಲಿ
ಶ್ರೇಷ್ಠನೆನಿಸುವ ಮಧುಕನಾಥ[೨]ನ[೨]
ತುಷ್ಟಿವಡುವಂತರ್ಚಿಸಿದಳೀ
ಸೃಷ್ಟಿಯೊಳು ಸಾಂಗದಲಿ ಮಾಯಾದೇವಿ ಮನವೊಲಿದು ॥ ೪೬ ॥

**ಅಂತು ಗತಿ ೩ಕ್ಕಂ ಪದ ೧೦೯ಕ್ಕಂ ಮಂಗಳಂ**

---

೧–೧. ಮಹದೈಶ್ವರ್ಯದಿ (ಗ.) ೨–೨. ನು (ಕ.)

# ೪. ಮಾಯೆ ಮಧುಕನಾಥನ ಪೂಜಿಸಿದ ಗತಿ

ಸೂಚನೆ

ಮಾಯೆ ಮನದೊಳು ತನಗೆ ಪ್ರಾಣ
ಪ್ರಿಯನನು ಮಿಗೆ ಬಯಸಿ ಭಜಿಸಿದ
ಛಾಯತಿಕೆಯಲಿ ಮಧುಕನಾಥನ ಪಾದಪಂಕಜವ

ಧರಣಿಯೊಳು ಮಮಕಾರ ಭೂಮೀ
ಶ್ವರ[೧]ತನೂಭವೆ[೧] ನಿಚ್ಚನಿಚ್ಚಲು
ವಿರಚಿಸುವ ತೆಱನಂತಿರೊಂದಾನೊಂದು ದಿವಸದಲಿ
ಹರುಷದಿಂದಾ ಮಾಯೆ ತಾನಾ
ದರಿಸಿ ಮಾಡಿದ ನಿತ್ಯಪೂಜೆಯ
ಪರಿಯ ಪೇಳುವೆನೆಲ್ಲರಱಿವಂದದಲಿ ವಿಸ್ತರಿಸಿ ॥ ೧ ॥

ಮಿಸುಗುವರುಣೋದಯದಲುಪ್ಪವ
ಡಿಸುತೆ ನಿಜಕರತಳವನಾಲೋ
ಕಿಸುತೆ ನಿರ್ಮಳತರದ ಮಣಿದರ್ಪಣವನೀಕ್ಷಿಸುತೆ
ಶಶಿಮುಖಿಯರೊಗ್ಗಾಗಿ ಮಿಗೆ ರಾ
ಗಿ[೨]ಸುವ ಮಂಗಳಗೀತಗಳನಾ
ಲಿಸುತೆ ಮಾಯಾದೇವಿ ಮಂಚವನಿಳಿದಳೊಲವಿನಲಿ ॥ ೨ ॥

ವಿನುತಭೂಷಣ[೩]ಗಂಧವಸ್ತ್ರ[೩]ದ
ಕನಕದ[೪]ರ್ಪಣ[೪]ಚಾಮರಂಗಳ
ಘನತರದ ವಿನಿಯೋಗಭಾ[೫]ರದ ಜಾತಿಬಾಲೆ[೫]ಯರು
ತನತನಗೆ ನೆಱೆದುದು ವಿಳಾಸಿನಿ
ಜನವು ತಂತಮ್ಮೊಳಿಗಂಗಳ
ನಸುವ ಮಾಡಿಕೊಳುತ್ತೆ ಮಾಯೆಯ ಕನ್ನೆಮಾಡದಲಿ ॥ ೩ ॥

೧. ನ ತನಯಳು (ಇ.) ೨. ಜಿ (ಅ, ಕ, ಮ.) ೩. ವಸ್ತ್ರರತ್ನ (ಇ.) ೪. ಂಡಪ (ಇ.) ೫. ವಪ ಸುಮತಿಭಾವೆ (ಅ, ಕ.) ; ವಪ ಜಾತಿಭಾವೆ (ಉ, ಜ.) ; ವಪ ಜಾತಿರಾಣಿ (ಇ.)

ವೇದಿಸಿಯೆ ಮಘಮಘಿಸುತಿಪ್ಪ ಜ
ವಾದಿಯಲಿ ಮುಡಿಹೂಸಿ ಪರಗಂ
ಧೋದಕಂಗಳಲೊಲಿದು ಮಜ್ಜನಕೆಱೆದು ಮಡಿ[೧]ಯುಡಿ[೧]ಸಿ
ಆದರಿಸೆ ಕೆಳದಿಯರು ಕನಕದ
ಪಾದುಕೆಯ[೨]ಲಾ[೨] ಮಾಯೆ ಬಂದು ವಿ
ನೋದದಲಿ ಮಂಡಿಸಿದಳಾ ಮಣಿಮಯದ ಪೀಠದಲಿ † ॥ ೪ ॥

ಸಸಿನೆ ಮುಡಿಯನು ಬಿಚ್ಚಿಬಿ[೩]ಟ್ಟಾ[೩]
ಱಸಿಯನೇಕಕದಂಬಪರಿಮಳ
ಕುಸುಮಗಳನಳವಡಿಸಿ ಹೆಣಿಲಿ[೪]ಱಿಯ[೪]ಲು ನಿತಂಬಿನಿಗೆ
ಕುಸುಮಶರಭಂಡಾರವನು ಕಾ
ದಿಸೆವ ಕಾಳೋರಗನಿದೆಂಬವೊ
ಲೆಸೆದುದಾ ಮಾಯಾಂಗನೆಯ ನಿಡುಜೆಡೆ ವಿರಾಜಿಸುತೆ ॥ ೫ ॥

ಬಗೆಗೆ ಸರಿಯೋ ಭಾವಿಸಲು ಮೇಣ್
ಮಿಗಿಲೊ [೫]ರಾಣಿ[೫]ಯ ಚಾರುಚರಣಗ
ಳುಗುರ ಕಾಂತಿಯ ನೋಡಬೇಕೆನುತೊಬ್ಬಳರ್ತಿಯಲಿ
ನಗುತಲೊಯ್ಯನೆ ತಂದು ಚೆಲುವಿಕೆ
ಮಿಗಲು ಮಾಯಾದೇವಿಯರ ಪಾ
ದಗಳ ಬೆರಳ್ಗೆ ತೊಡಿಸಿದಳು ಮಣಿಮುದ್ರಿಕಾವಳಿಯ ॥ ೬ ॥

ಕಾಮನಜೀವ[೬]ರಹಸ್ಯ[೬]ಶಾಸ್ತ್ರ
ಸ್ತೋಮಗತಿಯನು ನುಡಿದು ತೋಱುವ
ರಾಮಣೀಯದ ನೇವುರವನಿಕ್ಕಿದರು ಚರಣದಲಿ
ಸೀಮೆಯಿದಲಾ ಮದನತತ್ವ
ಪ್ರೇಮಿಗಳಿಗೆನುತಳವಡಿಸಿದರು
ಕಾಮಿನಿಯ ಕಾಲಿಂಗೆ ಕೆಲಬರು ಪಾಯವಟ್ಟವನು ॥ ೭ ॥

೧. ದೊಡಿ (ಉ.) ; ವೊದಿ (ಕ) ೨. ನಿಡೆ (ಎ, ಜ.) ೩. ಟ್ಟೀ (ಜ.) ೪. ಕ್ಕ (ಇ.
೫. ನಾರಿ (ಜ.) ೬. ಸಮಸ್ತ (ಗ.) † ಈ ಪದ್ಯ (ಅ) ಪ್ರತಿಯಲ್ಲಿಲ್ಲ.

ಕಾಮುಗಿಕರ್ಮುಗದ ೨ಕಾಮು೨ಭೋಗದ
ಭೂಮಿಗಿಂತಿದೆ ಭುವನಕೋಶದ
ಸೀಮೆಯೆಂಪಱಯಲಿಕೆ ಕುರುಹಿನ ಕಲ್ಲನೋಳಿಯಲಿ
ನೇಮಿಸಿದರೆಂಬಂತೆ ಕಟಿಯಲಿ
ಕಾಮಿನಿಗೆ ಮಣಿಮಯದ ಕಾಂಚೀ
ದಾಮವನು ೩ಕಟ್ಟಿದಳದೊ೩ಬ್ಬಳು ಚಪಳೆ ಚದುರಿನಲಿ ॥ ೮ ॥

ತೆಳುವಸುಱಿ ಕೊಬ್ಬಿದ ಕುಚಂಗಳ
ಲಲಿತಕಂಬುಗ್ರೀವವನು ಕಂ
ಡಲಸದೀಕ್ಷಿಸುವವರ ಕಂಗಳ ಕಾಂತಿ ಕರಗಟ್ಟಿ
ಬಳಸಿನಲಿ ನೆಲಸಿರ್ದುವೆನೆ ಕೋ
ಮಳೆಯ ಕೊರಳಳಿನೊಳೊಬ್ಬಳಿಕ್ಕಿದ
ಳೊ೪ಲಿದು ಬೆಳಗುವ ತೊಳಪ ಮುತ್ತಿನ ೫ತೋ೯ರ೫ ಹಾರವನು ॥ ೯ ॥

ದರಹಸಿತ೬ಸಪ೬ನಾದ ಮುಖರಸ
ಪರಿದು ಬರುತೆ ಕುಚಾದ್ರಿ ೭ತಡೆಯಲು೭
ತಿರುಗಿ ೮ಬರುತಿ೮ಕ್ಕೆಲನ ಪರಿವೇಷ್ಟಿಸಿದುದೆಂಬಂತೆ
ತರುಣಿಯೊಬ್ಬಳು ಹತ್ತಿಗಟ್ಟಿದ
ಕೊರಳೊಳೊಪ್ಪುವ ತೋರ ಮುತ್ತಿನ
ಸರದ ಸಮುದಯ ೯ಸೊಗಸು೯ತಿರ್ದುವು ಮಾಯೆ೧೦ಗತಿ ಮೀಱದು೧೦ ॥ ೧೦ ॥

೧. ತರ್ಕ (ಚ.)
೨. ಕರ್ಮು (ಖ)
೩. ತಂದಿಟ್ಟಳೊ (ಅ.)
೪. ಳೊಳಗೊಬ್ಬಳಿಟ್ಟಳು ವೊ (ಇ.)
೫. ಕೋರಳ (ಅ.)
೬. ವಶ (ಅ.)
೭. ಯಾಂತಡೆ (ಉ, ಖ, ಜ.) ೮. ಸರಿದಿ (ಅ) ; ಪರಿದಿ (ಉ, ಖ, ಗ.)
೯. ಮೆರೆವು (ಎ, ಖ.) ; ಸೂಸು (ಬ.)
೧೦. ಗತಿ ಸೊಗಸಿ (ಎ.) ; ಯಂಗದಲಿ (ಇ.)

ಸರಳುಗಳು ಚೆಲುವಾಗಿ ಬಲುಹಾ
ಗಿರಲು ಬೇಕೆಂದಂಗಜನು ವಿ
ಸ್ತರಿಸಿವಡೆಯಣಸುಗಳೊ ಪೇಳೆಂಬಂತೆ [1]ಸೊಗಸಾ[1]ಗೆ
ಕರಯುಗಾಂಗುಲಿಗಳಿಗೆ ಶೋಭಾ
ಕರವೆನಿಸಿ ಮಣಿಮುದ್ರಿ[2]ಕಾಳಿಯು[2]
ತರುಣಿಯೊಬ್ಬಳು [3]ತೊಡಿಸಿದಳು ಮಾಯೆಗೆ ವಿಳಾಸದಲಿ[3] ॥ ೧೧ ॥

ಅಡಕಿಲಡಕಿಲುಗೊಂಡ ಭುವನದ
ಗಡಣದಲಿ ಸಂಸಾರಸಂಗವ
ಜಡಿದು ಜಱಿವ ವಿರಕ್ತವೃತ್ತಿಯ ಸಿದ್ಧಸಾಧಕರ
[4]ಮೃಡ[4]ಹರಿಬ್ರಹ್ಮಾದ್ಯರನು ಕೆಡೆ
ಬಡಿದು ಕಟ್ಟುವ ಕಾಮಪಾಶದ
ತೊಡ[5]ರಿದೆ[5]ನಲಿಕ್ಕಿದಳು ಮಾಯೆಗೆ ತೋಳ ತೊಡಿಗೆಗಳ ॥ ೧೨ ॥

[7]ಮದನನೊಂದು ನವೀನವಹ ಶು
ಭ್ರದ ಸು[6]ರಂಗ[6]ಭ್ರಮರವನು ರಚಿ
ಸಿದನೊ ಕನ್ಯೆಯ ನಾಸಿಕದ ನಱುಗಂಪಿಸಿಂಪಿಂಗೆ
ಇದುವೆ ಸೋಜಿಗವೆನಲು ತಂದಿ
ಕ್ಕಿದಳದೊಬ್ಬಳು ತರುಣಿ ಮಾಯಾ
ಸುದತಿಗೊಪ್ಪಿರೆ ತೊಳಪ ಮುತ್ತಿನ ತೋರಮೂಕುತಿಯಾ[8] ॥ ೧೩ ॥

೧. ಚೆಲುವಾ (ಉ, ಒ, ಕ.) ೨. ಕೆಯುನಾ (ಎ.) ; ಕಾವಳಿ (ಇ.) ೩. ಮಾಯೆ ಯುಂಗದಲಿಕ್ಕಿದಳು ನಲಿವು (ಇ) ೪. ಜಡ (ಜ.) ೫. ವಿವೆ (ಅ.) (ಇ.) ೬. ಗಂಧ

೭–೮. ಇದುವೆ ಸೋಜಿಗವಿಂದುಬಿಂದುವೊ। ಳುದಿಸಿದ ಭಾರ್ಗವಬಿಂದು ತೋರು
ತ್ತಿದೆಯೆನಲು ತವುತವುಗೆ ಸಕಲವಿಳಾಸನೀನಿಕರ
ಚದುರೆಯೊರ್ವ ಲತಾಂಗಿ ಶೋಭಾ। ಸ್ಪದವೆನಲ್ಕಾ ಚಂದ್ರವದನೆಗೆ
ಮುದದಿಯುಳವಡಿಸಿದಳು ಮುತ್ತಿನ ತೋರ ಮೂಕುತಿಯ (ಗ.)

ಕೀಳುಮಾಡುವೆನಿನ್ನು ನೋಡಾ
ಭಾಳನೇತ್ರನ ಬಲುಹನೆನುತಲಿ
ಗಾಲಿಗಳ ಕಂದರ್ಪ [1]ಜೋಡಿ[1]ಸುವಂತೆ ನಿಜರಥಕೆ
ಮೇಳವಿಸಿ ನವರತ್ನ ತೆತ್ತಿಸಿ
ದೋಲೆಗಳ ತಂದಿಟ್ಟಳೊಬ್ಬಳು
ಬಾಲೆ ಮಾಯಾದೇವಿಗೊಪ್ಪುವ ಚೆಲುವ ಕಿವಿಗಳಿಗೆ || ೧೪ ||

ಸಡಗರಿಸಿ ಪರಿದೈದಿ ಸದಿ
ಕ್ಕಡೆಗಳಲಿ ಸೇರಿದವೊ ಕನ್ಯೆಯ
ನಿಡಿದುಗೊಂಡ ಕಟಾಕ್ಷಕಾಂತಿಯ ಮುಡುಗಳೆಂಬಂತೆ
ತೊಡಿಸಿದಳು ತಂದೊಬ್ಬಳಾಕೆಯ
ಕೊಡಕೆಯಲಿ ಹೊಸತಪ್ಪ ಮುತ್ತಿನ
ತೊಡಿಗೆಯನು ಮಾಯಾಂಗನೆಗೆ ಶೃಂಗಾರಶಾಲೆಯಲಿ || ೧೫ ||

ಸುತ್ತುವಳಯವ ತೊಳಗಿ ಬೆಳಗುವ
ಮುತ್ತು-ವಜ್ರದ ನಡುವೆ ಮಾಣಿಕ
ತೆತ್ತಿಸಿದ ಬೊಟ್ಟೊಂದ ಮಾಯಾಂಗನೆಯ ನೊಸಲಿನಲಿ
ಕತ್ತುರಿಯ ವರತಿಲಕಮಧ್ಯದೊ
ಳೊತ್ತಿ ನಿಲಿಸಲು ಮೆಱೆಯುತಿರ್ದುದು
ಚಿತ್ತಜಾ[2]ತನ ವೀರ[2]ಲಕ್ಷ್ಮಿಯ ನೊಸಲ ಕಣ್ಣಂತೆ || ೧೬ ||

ನಭದೊಳೊಪ್ಪುವ ತಾರಕಾವಳಿ
ವಿಭವದಲಿ ಸಂಪೂರ್ಣಚಂದ್ರನ
ಸಭೆಯಲೋಳಿಯಲೋಲಗಿಸ ನೆರೆದಿರ್ದುವೆಂಬಂತೆ
ಅಭಿನವದ ಮುತ್ತುಗಳ ಪಣೆಗ
ಟ್ಟುಭುಯಕರ್ಣಾಗ್ರದಲಿ ಸೇರಲು
ಶುಭತೆ[3]ಯಾಗಿ ವಿರಾಜಿಸಿತು ಮಾಯಾಂಗನೆಯ ಮುಖ[4]ಕ್ಕೆ[5] || ೧೭ ||

೧. ಸೇರಿ (ಚ.) ೨. ರಿಯು ವಿಲಯು (ಇ.); ತನ ವಿಜಯು (ಗ.) ೩-೫. ಯುಲಿ ರಾಜಿಸಿತು ಮಾಯಾಂಗನೆಯ ಮೊಗಸಿರಿಗೆ (ಎ.) ೪-೫. ವು (ಇ.)

ಒಸೆದು ಕಾಮನ ಬಾಣದಲಿ ಲೇ
ಪಿಸುವ ಸಮ್ಮೋಹನದ ಬಾಷ್ಪದ
ಮಸಿಯೊ ಪೇಳೆನೆ ಕೋಮಳೆಯ ತೊಳತೊಳಪ ಕಂಗಳಿಗೆ
ಎಸಳುಗಾಡಿಗೆರೇಖೆಯನು ಚಿ
ತ್ರಿಸಿದಳೊಬ್ಬಳು ಕಾಮುಕರ ಮೋ
ಹಿಸುವ ಮೋಹನಯಂತ್ರರೇಖೆಗ[1]ಳಂತೆ ಚೆಲ್ವಾಗೆ[2] || ೧೮ ||

ನೋಡುವರ ಕಣ್ಣಕ್ಕಜಂಗಳು
ಕಾಡದಂತಿರೆ ಬರೆದರೆಂದೆನೆ
ನೋಡಿ ಕುಚಮೂಲದೆ ಕಪೋಲಸ್ಥಲದೊಳಂಗನೆಗೆ[2]
ಕೂಡೆ ಕುಂಕುಮ-ಮೃಗಮದಂಗಳ
ಗಾಢಗಂಧದ ಪಂಕದಲಿ ಕೈ
ಗೂಡಿ ಚಿತ್ರಿಸಿ ಮಕರಿಕಾಪತ್ರವನು ರಚಿಸಿದರು || ೧೯ ||

ಮಿಸುಪ ಕೆಂಪಿನ ಪದ್ಮರಾಗದ
ರಸದ ರೇಖೆಯ ದಡಿಗಳಲಿ ಚಿ
ತ್ರಿಸಿಯೆ ಸೆರಿಗಿಗೆ ಕುಮುದಕುಸುಮದ ಬಣ್ಣವನೆ ರಚಿಸಿ
ಪಸರಿಸಿದ ಬೆಳುದಿಂಗಳಿನ ಶೋ
ಧಿಸಿದ ರಸದಲಿ ತೊಳೆದರೆನೆ ರಂ
ಜಿಸುವ ವಿಮಲಾಂಬರವನಾಯತಮಾಡಿದರು ಬಳಿಕೆ || ೨೦ ||

ಹರಿಪಿಡಿಯ ನಿಜಪಿಡಿಯ ನಾಭಿಯ
ಸರಿಸವಲಿ ಪಸರಿಸುತ ಜಘನಕೆ
ಪರುಠಿಸಿ ನಸುದೋರುವಂತಿರಲಂಗವಟ್ಟವನು
ವಿರಚಿಸಿದಳುಡಿಗೆಯನು ಮಾಯಾ
ತರುಣಿ ತಾನಳವಡಿಸಿ ಕಾಮನ
ಬರುವ ಹಳವಿಗೆಯಂತೆ ನಟನೆಯ ಜಾತಿಜಾಣಿನಲಿ || ೨೧ ||

೧. ಒಸೆಸೆ ನೋಡುವರ (ಅ.) ೨. ಅಂಗಳಲಿ ಗಂಡಸ್ಥಳಗಳಲಿ (ಗ.)

ಚೆ[೧]ನ್ನೆ ನೀನಲ್ಲದೆ ಬಳಿಕ್ಕಾ
ರಿನ್ನು ದಿಟವಿದಿರಿಟ್ಟು ತೋಱಿಸ
ಲನ್ಯರುಂಟೇ [೨]ರೂಹಿಡಲು[೨] ನೆಱೆ[೩]ನೋಡು ನೀನೆನುತೆ
[೪]ಕನ್ನಡಿಯ ತೋಱಿದಳದೊಬ್ಬಳು
ಕನ್ಯೆಕಾಮಿನಿಗಳ್ತಿಯಿಂದವೆ
ಕಣ್ಣುಗಳ[೪]ನಿದ್ದೆ[೫]ಸೆಗೆ ಸೂಸುತೆ ಮಾಯೆ ನೋಡಿದಳು ॥ ೨೨ ॥

ಮನಸಿಜನ ಮ[೬]ನೆದೇವಿ[೬] ಕುಸುಮಾ
ಸ್ತ್ರನ ಕುಲೋತ್ತಮೆ ರಾಜಗುರು ಕಾ
ಮನ ಭುಜಾಗ್ರದ ವಿಜಯಲಕ್ಷ್ಮಿಯಸಂಗಸಖಿಸ್ತ್ರೀಪ
ವಿನಯಚಿತ್ತಜ[೭]ಯಂತು[೭]ಚೇಷ್ಟಾ
ವಿನುತ[೮]ಜೇತ[೮]ನಮೂರ್ತಿ ಕಂದ
ರ್ಪನ ಕರಾಸಿಯ ಬೀರಸಿರಿಯೆನೆ ಮೆಱೆದಳಾ ದೇವಿ ॥ ೨೩ ॥

ತರುಣಿ ನಡೆಯೆ ಮಧುಕನಾಥೇ
ಶ್ವರನ ಪೂಜೆಯ ಮಾಡಲಿಕೆ ಸಂ
ವರಿಸಿ ಬಂದೆವು ಸಕಲವಸ್ತುಗಳೆನುತಲಂದಣವ
ತರಿಸಿದರು ಹೆಗ್ಗಡಿತಿಯರು [೯]ಸಾ
ದ[೯]ರದಲುತ್ಸಾಹಿಸುತೆ ರತ್ನೋ
ತ್ಕರದ ಗದ್ದುಗೆಯಿಂದಲಿದ್ದಳು ಮಾಯೆ ರಚನೆಯಲಿ ॥ ೨೪ ॥

೧. ಕ (ಅ, ಗ, ಜ)
೨. ಕುರುಹಿಡಲು; (ಅ, ಮು.); ರೂಹಿಸಲು (ಎ, ಜ.); ರೂಢಿಯಲಿ (ಘ.)
೩–೫. ಕನ್ನೆಯೋರ್ವಳು ಮಿಸುಪರತ್ನದ। ಕನ್ನಡಿಯ ತೋರಿಸಲು ಬಳಿಕಾ। ಕಣ್ಣು
ಗಳನೆಡ್ಡೆ (ಗ.)
೪–೫. ದೆಸೆದೆ (ಖ); ನಾಲ್ದೆ (ಎ)
೬. ದದಾನೆ (ಗ)
೭. ನೇತ್ರ (ಜ)
೮ ಚೆಲುವಿ (ಇ)
೯. ಸಡಗ (ಘ.)

ಎತ್ತಿ ನೆಗಹಿದ ತೊಳಪ ಮುತ್ತಿನ
ತ್ತಿಗೆಯ ಸಡಗರದ ಸರಿಸದೆ
ುತ್ತಿನಲಿ ಬಲನೆಡಕೆ ಚಿಮ್ಮುವ ಧವಳಚಾಮರದ
ಚಿತ್ತಪಾಯವಧಾರು ಎನುತವೆ
ಹತ್ತಿರುಗ್ಘಡಿಸುವ [1]ಸಗಾಢ[1]ದ
ತ್ತಿಗರ ಸಂಭ್ರಮದಲಂದಣವೇಱಿದಳು ಮಾಯೆ || ೨೫ ||

ಕಾಮರೇಖೆ ಕಳಾವಿಳಾಸಿನಿ
ಪ್ರೇಮಕಾರಿಣಿ ರಾಗಿ ಲೋಭಿಣಿ
ನಾ[2]ಮನಿ[2]ರ್ವೃತಿ[3] ಸಕಳಸಂಪದೆ ಭೋಗಿ ಮದಮಾನಿ
ಹೇಮೆ ಹೆಕ್ಕಳಿಯೆನಿಪ ನಾನಾ
ನಾಮಗಳ ಹೆಗ್ಗಡಿತಿ ದಾದಿಯ
ಾ ಮಹಾವಿನಿಯೋಗದಬಲೆಯರೈದಿದರು ಕೂಡೆ || ೨೬ ||

ಹಡಪ ಬೊಕ್ಕಸ ಛತ್ರಚಾಮರ
ಕುಡಿಯುದಕ ಬೀಸಣಿಗೆ ಹೊಂಗ
ನ್ನಡಿ ಸುಗಂಧವಿಲೇಪ ಹೂ ಹಾವಿಗೆಗಳೊಳಗವ
ಡೆಸುವವರೈದಿದರು ಮಿಗೆ ಮುಂ
ಗುಡಿಯಲಣಿವರಿದೊಕ್ಕಲಿಕ್ಕುತೆ
ುಡದಿಯರು [4]ಮಾಯಾಂಗನೆಯ ದಂಡಿಗೆಯ[4] ಬಳಸಿನಲಿ || ೨೭ ||

ಹೂವಿನಗ್ಗವಣೆಯ ಸುಗಂಧದ
ೀವಿದುತ್ತಮಧೂಪ ವಸ್ತ್ರದ
ಾಸನದ ಪರಿಕರವ [5]ಗೀತ[5]ದ ನೃತ್ಯವಾದ್ಯಗಳ
ೇವಪೂಜಾರ್ಥಕ್ಕೆ ಸಾಧನ
ೇವಕಾಂಗಿಯರೊಲಿದು ಬಂದರು
ಾವೆ [6]ಮಾಯಾ[7]ಮಾನಿನಿಯ[8] ದಂಡಿಗೆಯ ಬಳಸಿನಲಿ || ೨೮ ||

. ಸಂಗಾನ (ಗ ; ಸಘಾಡ (ಜ.) ೨. ಕಾ (ಉ.) ೩. ಮರ್ಗಳಿ (ಇ, ಗ.) ೪. ಪುರ
ಜಿಸಿ ಪಾಯಾಂಗನೆಯ (ಜ.) ೫. ಲೇಪ (ಗ.) ೬-೮. ಯುವ ಮಾಯಾಂಗನೆ
[ಯ (ಖ.) ೭-೮. ದೇವಿಯರ (ಉ.)

ಉಲಿವ ನೇವುರ-ಪಾಯವಟ್ಟದ
ಲಲಿತಕಂಕಣ ತೋಳುಬಂದಿಯು
ಉಳಿಯು ಪದಕದ ತೋರ ಮುತ್ತಿನ ಸರದ ಮೂಕುತಿಯಾ
ತಳಿತ ಹೂವಿನ ಮುಡಿಯು ಪಟ್ಟಾ
ವಳಿಯ ಸೀರೆಯ ಚಲ್ಲಣದ ಕೋ
ಮಳೆಯರೈದಿದರಂದು ಮಾಯಾಂಗನೆಯ ಬಳಸಿನಲಿ || ೨೯ ||

ಮುತ್ತಿನೋಲೆಯ [೧]ಸುತ್ತು[೧] ಸರಿಗೆಯ
ಹತ್ತಿಗಟ್ಟಿನ ಬಣ್ಣಸರಗಳ
ತೆತ್ತಿಸಿದ ನವರತ್ನ[೨]ಖಚಿತದ ಕಟಿಯ ಸೂತ್ರ[೨]ಗಳ
ಉತ್ತಮದ ಚಿತ್ರಾಂಬರಂಗಳ
ಕತ್ತುರಿಯ ಹೆಱೆ[೩]ನೊಸಲ ತಿಲಕದ
ಮತ್ತಗಜಗಮನೆಯರು ಬರುತಿರ್ದರು [೩]ವಿಳಾಸ[೩]ದಲಿ || ೩೦ ||

ವೀರಮುದ್ರೆಯ ಮೆಂಟಿಕೆಯ ವಿ
ಸ್ತಾರದಂ[೪]ಗುಲಿ[೪]ಯುಂಗುರಂಗಳ
ದೋರೆಗಡಗದ ಹೊನ್ನಬಳೆಗಳ [೫]ಶಂಖದೊ[೫]ಲೆಗಳ
ತೋರ ಮುತ್ತಿನ [೬]ಹಾರ[೬]ಗಳ ಕೇ
ಯೂರಗಳ ಧವಳಾಂಬರಂಗಳ
ನಾರಿಯರು ನಡೆತಂದರಾ ಮಾಯಾಂಗನೆಯ [೭]ಕೂಡೆ[೭] || ೩೧ ||

ನಿಱಿಯನಳವಡಿಸಿತ್ತೆ ಮೇಲುದ
ಸೆಱಗ ಸಂವರಿಸುತ್ತೆ ಬಳಲುವ
ತುಱುಬ ತಿದ್ದುತೆ ಚಪಳತೆಯ ಕಡೆಗಣ್ಣ ನೋಟದಲಿ
ಸೆಱೆ[೮]ವಿಡಿದು ಕುಸುಮಾಸ್ತ್ರನಿದಿರಿನ
[೮]ಕುಱಿ[೮]ಗಳೆನಿಸುವ ನೋಟಕರನೀ
ತೆಱದಲೈದಿದರೊಡ[೯]ತಿಯೊಡನೆ ವಿಳಾಸಿನೀನಿಕರ[೯] || ೩೨ ||

೧. ಶುದ್ಧ (ಅ,ಕ,ಜ.) ; ಪುರಿಗಿ (ಜ.) ೨. ಸೇರಿಸಿಪುಡಿಯ ಘಂಟಿ (ಚ.) ೩. ವಿನೋದ (ಎ.) ೪. ದುಗೆ (ಬ.) ೫. ಮುತ್ತಿನೋ (ಗ.) ೬. ವಾಲೆ (ಉ.) ೭. ಬಳಸಿ (ಬ.) ೮. ತುಱು (ಖ.) ೯. ನೆಯೊಡತಿಯ ಕೂಡೆ ಸಖಜನರು (ಇ.)

ಗತಿಯ ಗಮಕದಲಿಂದ್ರನನು ವಾಕ್
ಚತುರತೆಯಲಿ ವಿರಂಚಿಯನು ಪೂ
ರಿತಕಟಿ-ಸ್ತನದುಬ್ಬಿನಲಿ ಖಗರಾಜವಾಹನನ
ಸುತಕಟಾಕ್ಷ[೧]ಕಳಾವಿ[೨]ಳಾಸೋ[೩]
ನ್ನತಿಯಲೀಶನ ಮರುಳುಮಾಡುವ
ಸತಿಯರೈದಿದರಂದು ಮಾಯಾಂಗನೆಯ ಬಳಸಿನಲಿ ॥ ೩೩ ॥

ತರುಣಿಯರ ವ್ಯೈ[೪]ಸುಯ್ಯ ಕಂಪಿಗೆ[೪]
ಹರಿದು ಕವಿತಹ ತುಂಬಿಗಳ ವಿ
ಸ್ತರದ ಗಿಲಿಕಿನ ಭೂಷಣಂಗಳ ನೆಲನನುಗ್ಗಡಿಪ
ನೆರೆದ ಸದಮಳಕಾಂತೆಯರ ಸಡ
ಗರದ ಕೈವಾರಿಗಳ ಧ್ವನಿಗಳ
ಭೆರದ ಕಳಕಳ ಕೇಳಲಾದುದು ಪುರದ ಬೀದಿಯಲಿ ॥ ೩೪ ॥

ಇದು ಮನೋಜಬ್ರಹ್ಮ ತಾ ಮಾ
ಡಿದ ನವೀನದ ಸೃಷ್ಟಿಯೋ ಮೇ
ಣಿದುವೆ ರತಿವಲ್ಲಭನ ಜಂಗಮಲತೆಗಳೊ ಬಗೆಗೆ
ಇದು ವಿಚಿತ್ರವೆನಲ್ಕೆ ರೂಪಿನ
ಚದುರತನದ ವಿಳಾಸವೃತ್ತಿಯ
ಸುದತಿಯರು ನಡೆತಂದರಾ ಮಾಯಾಂಗನೆಯ ಕೂಡೆ ॥ ೩೫ ॥

ಇದುವೆ ಕೈಲಾಸಾದ್ರಿಯೋ ಮೇ
ಣಿದು ಶಶಾಂಕನ ತಗಡಿನಲಿ ಹೊದಿ
ಸಿದ ನಿನೂತನ ಪುಷ್ಪಕವೊ ಪೇಳೆನಲು ತೊಳಗುತಲಿ
[೫]ಪ್ರದಿದು[೫] ಗುಡಿ-ತೋರಣ-ಪತಾಕೆಗಳ
ಕೊಡವಿನಲಿ ಹೊಂಗಳಸದಲಿ ತೋ
ಱಿದುದು ಮಾಯೆಗೆ ಮಧುಕನಾಥೇಶ್ವರನ ವರಭವನ ॥ ೩೬ ॥

೧–೩. ದ ಸನ್ನೆಯಿಂದು। ನ್ನತದ (ಇ.) ೨. ಶೇಷೋ (ಮು.) ೪. ಗಂಪಿಗೆಱಗುವ (ಇ.) ೫. ಹುದುಗಿ (ಅ, ಚ, ಕ.)

ಬಂದಳಾ ದೇಗುಲಕೆ ಭರವಸ
ದಿಂದೆ ಬಳಿಕಾ ಮಾಯೆ ವಿಭವದ
ಲಂದಣವನೊಲಿದಿಳಿದು ಕರ[೧]ಪದ[೨]ವದನ[೩]ವನು ತೊಳೆದು
ಇಂದು[೪]ವದನೆ[೪] ವಿಲಾಸದಲಿ ಬಲ
ವಂದು ನಡೆದೊಳಪೊಕ್ಕು ಲಿಂಗದ
ಮುಂದೆ ಮೈಯಿಕ್ಕಿದಳು ಪುಷ್ಪಾಂಜಲಿಯ ಪಸರಿಸುತೆ || ೩೭ ||

ಕರವ ಮುಗಿಯುತೆ ಮಧುಕನಾಥೇ
ಶ್ವರ[೫]ನೆ[೫] ಶರಣೆನುತೆದ್ದು ಕು[೬]ಳ್ಳಿತು[೬]
ವಿರಚಿಸುತಲಂದರ್ಘ್ಯಪಾದ್ಯಾ[೭]ರ್ಚನ[೭]ವಿಧಾನಗಳ
ಪರುಠವಿಸಿ ಪಂಚಾಮೃತಂಗಳ
ನೆರೆದು ಪ್ರ[೮]ತ್ಯೇಕದಲಿ ಮಿಗೆ[೮] ವಿ
ಸ್ತರಿಸುತಿರ್ದಳು ಮಾಯೆ ಮುದದಲಿ ಮಧುಕನಾಥಂಗೆ || ೩೮ ||

[೯]ಸಾರ[೯]ಗಟ್ಟಿಯೆ ನೀಡಿಹರು ಪ
ನ್ನೀರ [೧೦]ಹೊಂ[೧೧]ಗರಗದಲಿ[೧೨] ನಲಿದಾ
ನಾರಿಯರು ವಿರಚಿಸಿದರಭಿಷೇಕವನು ದೇವರಿಗೆ
ಸಾರದಿವ್ಯಾಂಬರವನರ್ಪಿಸಿ
ಹಾರವಿಸುತಲಿ ಕುಂಕುಮದ ಕ
ರ್ಪೂರವೊದಲಾದಷ್ಟಗಂಧವನೊಟ್ಟಿದಳು ಮಾಯೆ || ೩೯ ||

೧–೨. ತಳ (ಇ.)
೨–೩. ಕಮಲ (ಕ.)
೪. ಮುಖಿಯು (ಅ.)
೫. ಗೆ (ಇ, ಎ, ಜ.)
೬. ಳಿತಳು (ಇ.)
೭. ಸ (ಅ, ಇ, ಕ.)
೮. ತ್ಯಕ್ಷದಲಿ ಬಹು (ಇ.)
೯. ಧಾರೆ (ಉ, ಜ.)
೧೦–೧೧. ಹೂ (ಜ.)
೧೧–೧೨. ಗರಗಗಳ (ಅ, ಗ, ಜ.) ; ಗಿಂಡಿಯಲಿ (ಉ), ಗಳಸಿನಲಿ (ಖ.)

ಇ[1]ಂದುಕಳೆಯದ ಮುತ್ತುಗಳಲಾ
ನಂದದಿಂದಕ್ಷತೆಯನಿಟ್ಟಳು
ತಂದು ತರುಣಿಯರೀವ ಹೂವಿನ ದಂಡೆ[2]ಯಿಂಡೆಯನು[2]
ಸಂದಿಸುತ ನಾನಾಪ್ರಕಾರದ
ಚೆಂದಚೆಂದದ ಪತ್ರೆ–ದೂರ್ವೆಗ
ಳಿಂದೆ ಮಾಯಾದೇವಿ ಮಾಡಿದ[3]ಳಭವ[3]ಪೂಜೆಯನು || ೪೦ ||

ಹಿಡಿದು ಬಾ[4]ಜೂಸೆ[4] ಘಂಟೆ ಶಂಖದ
ಗಡಣ ಜಾಗಟೆ [5]ಜಗಳೆ[5] ಮದ್ದಳೆ
ಜಡಿವ ಕಹಳೆ ಮೃದಂಗವಾವುಜ ಭೇರಿ ಕಂಸಾಳ
ನುಡಿವ ಗಂಭೀರಧ್ವನಿಯಲತಿ
ಸಡಗರಿಸಿದುದು ನಗರ ಮಾಯಾ
ಮಡದಿ ಮಾಡುವ ದೇವಪೂಜೆಯ ರ[6]ಭಸರಚನೆಯಲಿ[6] || ೪೧ ||

ಹಲವುಪರಿಯ [7]ಸುಗಂಧ[7]ಧೂಪಂ
ಗಳನು [8]ಧೂಪಿ[8]ಸಿ ಬೆಂಬಳಿಯ ಮಂ
ಗಳ ಪದಂಗಳ ಹಾಡುತಾರತಿಗಳನನೇಕವನು
[9]ತೊಳಗಿ ಬೆಳಗುತ[9]ಲೆತ್ತಿದಳು ಕೋ
ಮಳೆಯರುಘೆಯುಘೆ ಜಯತು [10]ಜಯತೆಂ[10]
ದುಲಿ[11]ಯುತಿರಲಾ ಮಧುಕನಾಥಗೆ ಮಾಯೆ ಭಕ್ತಿಯಲಿ[11] || ೪೨ ||

೧. ಬಿ (ಅ, ಕ, ಚ.)
೨. ಮಾಲೆಗಳ (ಇ.)
೩. ಳೀಶ (ಅ.)
೪. ಜಿಪ (ಅ, ಎ, ಗ) ; ಜಿಸೆ (ಇ.)
೫. ಕರಡೆ (ಉ.)
೬. ಚನೆ ಹೊಸತಾಗೆ (ಗ.)
೭. ದಶಾಂಗ (ಗ.)
೮. ಸಮರ್ಪಿ (ಇ.)
೯. ಬೆಳಗ ಪಸರಿಸ (ಗ.)
೧೦. ಚಾಗೆಂ (ಗ.)
೧೧. ಯೆಂ ಭಕ್ತಿಯ ಭಾವದಲಿ ಮಧುಕೇಶ್ವರಗೆ ಮಾಯೆ (ಗ.)

ಸರಸಶಿಂಗೆ ತಾರಕೆಯ ನಿಗುಚಿದ
ಪರಿಯಲೋಗರ ಪುಷ್ಪ[1]ರಾಗದ[1]
ಸುರಸದಂತಿರೆ ತುಪ್ಪ ಚಂದ್ರಮನಂತೆ ಪಾಯಸವು
ಥರಥರಂಗಳ ಮುಗಿಲ ಬಣ್ಣದ
ಪರಿಯಲೊಪ್ಪುವ ಭಕ್ಷ್ಯರಾಸಿಯ
ನಿರಿಸುತಿರ್ದರು ಹೊನ್ನ ಹರಿಯಾಣದಲಿ [2]ಜೋನವನು[2] ॥ ೪೩ ॥

ವರವಿ[3]ನೂತನರತ್ನಗಳ[3] ಮೃದು
ಕರಣೆಯಂಗವನಜಿುದು ಮಾಡಿದ
ಪರಿಯ ಬಾಳುಕ-ಹಪ್ಪಳಂಗಳ ಪರಪು-ಶಾಖಗಳ
ಸುರುಚಿಯಾದ ಪಳಿದ್ಯ-ಪಾನೋ
ತ್ಕರವನುಪ್ಪಿನಕಾಯಿ-ಪಣ್ಗಳ
ವಿರಚಿಸುತೆ ದಧಿತಕ್ರಗಳ ಬಡಿಸಿದರು ಭಕ್ತಿಯಲಿ ॥ ೪೪ ॥

ಪರಿಮಳಂಗಳ ಪಸರಿಸುವ ಕ
ಚ್ಚುರಿಯ ಪಚ್ಚಡಿಗಳ ಸು[4]ಸಾರೋ
ತ್ಕರದ ಸಾಜಿುನ ಸೀಕರಣೆ[5]ಯನುಪಮ ಪ[4]ಸುಂಬರಿಯು[5]
ಪರಿಪರಿಯ ಚಿ[6]-ನಿ[6]-ಪಾಲುಗಳ ಸ
ಕ್ಕರೆಗಳನು ನಾನಾಪದಾರ್ಥವ
ತರುಣಿಯರು ನೈವೇದ್ಯವನು [7]ಬಡಿಸಿ[7]ದರು ಭಕುತಿಯಲಿ ॥ ೪೫ ॥

ಲಿಂಗವವ[8]ಧಾರಿಸುತಲುಪಹಾ
ರ[8]ಂಗಳನು ನೆಜಿುತ ಮಧುಕನಾಥೇ
ಶಂಗೆ ಪುಷ್ಪಾಂಜಲಿಸಮೇತಾರ್ಪಣವ ಮಾಡುತಲಿ
ಮಂಗಳಶ್ರೀಹಸ್ತಜಲವನು
ಸಂಗಳಿಸಿ ಕೈಗಟ್ಟೆಸಹಿತವೆ
ಸಾಂಗವಲಿ ಮಾಡಿದಳು ಮಾಯಾದೇವಿ ಪೂಜೆಯನು ॥ ೪೬ ॥

೧. ಸಾಳಿಯು (ಇ.) ೨. ಭೋಜನವ (ಇ.) ೩. ನುತರತ್ನಗಳ ನವ (ಇ.)
೪. ವಣ್ಗಳ ತರದ ಸೀಕರಣೆಗಳ ಸಾರವ ಫಲವು (ಜ.) ೫. ಗಳ ಪೊಸರಸಾಯು
ನವ (ಇ.) ೬. ಲು (ಎ, ಕ, ಚ.) ; ನು (ಖ, ಗ.) ೭. ಸಲಿಸಿ (ಗ.) ; ನೀಡಿ (ಜ.)
೮. ಧರಿಸೆಸುತ ನೈವೇದ್ಯಂ (ಖ.)

ಹೋಳಿಸಿದ್ದಡಕೆಗಳ ಭಾಗವ
ಮೇಳವಿಸಿ ಕಪ್ಪುರದ ಬೆಳ್ಳಿಲೆ
ಯೋಳಿಗವಳಿಗೆಗಳನು ಶುಭ್ರದ ಸುಣ್ಣ ಸಹವಾಗಿ
ವೀಳೆಯವನಿತ್ತ[೧]ಳ್ತಿ[೧]ಯಿಂದಾ
ಬಾಲೆ ಮಾಯಾದೇವಿ ಮನದೊಂ
ದೇಳಿಗೆಯ ಭಾವನೆಯಲುಪ್ಪಾರತಿಯನೆತ್ತಿದಳು || ೪೭ ||

ಹಿಡಿದು ನವರತ್ನಂಗಳೊಪ್ಪುವ
[೨]ಕೊಡಕೆ[೨]-ಕಂಗಳ ಕಾಂತಿಯನೆ ಬಲ
ನೆಡಕೆ [೩]ಸೂಸುತೆ[೩] ಧವಳಚಾಮರವನು ವಿಳಾಸದಲಿ
ಮಡದಿಯರು ತಂದೆತ್ತುವಾರತಿ
ಗಡಣವೆಲ್ಲವನರ್ಪಿಸುತೆ ನಲಿ
ದೊಡನೊಡನೆ ಮೈಯಿಕ್ಕುತಿರ್ದಳು ಮಾಯೆ ಭಕುತಿಯಲಿ || ೪೮ ||

ದಣಿಯೆ ಪೂಜೆಯ ಮಾಡಿ ಮಣಿದ
ರ್ಪಣವ ತೋಱಿಸಿ ಕೆಳದಿಯರ ಸಂ
ದಣಿಯ ತೊಲಗಿಸಿ [೪]ಲಿಂಗವನು ಬಲವಂದು[೪] ಭಕ್ತಿಯಲಿ
ಮಣಿದು ಗರ್ಭಗೃಹವನು ಹೊಱವ
ಟ್ಟಣೆವರಿದು ಕೈಗೊಡುವರೊಲಿದಿ
ಟ್ಟಣಿಸೆ ಬಂದಳು ಮಾಯೆ [೫]ವಿಭವದೆ[೫] ರಂಗಮಂಟಪಕೆ || ೪೯ ||

ಮಿಸುಪ ಧೂಪದ ಧೂಮದಲಿ ಕೆಂ
ಪೆಸೆವ ಲೋಚನವಾನತಿಯ ಭರ
ವಸಕೆ ಸೂಸಿದ ಸುಳಿಗುರುಳು ದೀಪಂಗಳುಬ್ಬೆಯಲಿ
ಕುಸರಿ ಬೆಮರಿಡುವಂಗ ಮಿಗೆ ರಂ
ಜಿಸಲು ಮಧುಕೇಶ್ವರನ ಸಂ[೬]ಭೋ[೬]
ಗಿಸಿಯು ಬಂದಳೊ ಪೇಳೆನಲ್ ಮೆಱೆದಿರ್ದಳಾ ಮಾಯೆ || ೫೦ ||

೧. ರ್ಘ (ಕ, ಗ, ಜ.) ; ರ್ತಿ (ಖ, ಚ, ಟ.) ೨. ಕಡೆಯು (ಚ, ಟ.); ತೊಡರು (ಗ.) ೩. ಚಿಮ್ಮುವ (ಟ.) ೪. ಬಂದಳಾ ಬಲಗೊಂಡು (ಗ.) ೫. ಯೊಪ್ಪುವ (ಮು.) ೬. ಯೊ (ಬ.)

ನಿಲಿಸಿದರು ಗಡಬಡೆಯ ವಾದ್ಯದ
ಗಲಭೆಯನು ತರುಣಿಯರ ತಂಡಗ
ಳುಲುಹುಗಳನಲ್ಲಲ್ಲಿಗಾಗಳೆ ಕಂಬಿಕಾರ್ತಿಯರು
ಬಳಿಕ ಚಲ್ಲಣವುಡಿಸಿ ನೆಱೆ ಪರಿ
ಮಳದ ತುಱುಬನು ಬಲಿದು ಬಂಧಿಸಿ
ಲಲನೆಯರು [೧]ಲಾಸ್ಯ[೧]ಕ್ಕೆ ಮಾಯಾಂಗನೆಯ [೨]ರಚಿ[೨]ಸಿದರು || ೫೧ ||

ವಾಸಗಳವಾವುಜದ ಕಹಳೆಯ
ಲೇಸೆನಿಪ ಮದ್ದಳೆಯ ತಾಳದ
ಭಾಸುರದ ಗಾಯಕಿಯರೊಗ್ಗಿನ ವಿವಿಧವೀಣೆಗಳ
ಹೂಸಿಹೊಮ್ಮುವ ಸರದುಪಾಂಗಾ
ವಾಸಮೇಳಾಪಗಳಲೊಯ್ಯನೆ
ದೇಸಿರಾಗವ ಮಾ[೩]ಯೆ[೪]ಯಾಳಾಪಿಸಿದಳೊಲವಿನ[೫]ಲಿ || ೫೨ ||

ಹಾಡುತಿರ್ದಳು ಹಾರವಿಸಿ ನೆಱೆ
ನೋಡುತಿರ್ದಳು ಮಿಕ್ಕು ಮೋಹಿಸಿ
ಬೇಡುತಿರ್ದಳು ಮಾಯೆ ಮನದೊಳಗಿಷ್ಟಸಿದ್ಧಿಯನು
ಕೂಡುತಿರ್ದಳು ನೆಱೆದು ನಿಂದಿತು
ಕೂಡೆ ಕೇಳುವ ನೋಟಕರ ಮೈ
ಗೂಡಿನಲಿ ಕಾಮಾಗ್ನಿಯನು ಸಂಗೀತಕೇಳಿಯಲಿ || ೫೩ ||

ಬಳಿಕಲೊಯ್ಯನೆ ಚರಣಚಾರಣ
ಚಳತೆಯಲಿ ನಿಜಹಸ್ತವಿಸ್ತರ
ದಳತೆಯಲಿ ಝಳಪಿಸುವ ಬೆರಳಿನ ಲುಳಿಯ [೬]ಹವ[೬]ಣಿನಲಿ
ಘಲಘಲಿಸುವಂದುಗೆಯ ಕಂಕಣ
ಗಳ ಝಣತ್ಕಾರದಲಿ ಮಾಯಾ
ಲಲನೆ [೮]ರಂಗಂಬೊ[೮]ಕ್ಕು ನಿಂದಳು ನಿಜದ ನಿಱುಗೆಯಲಿ || ೫೪ ||

೧. ನಾಟ್ಯ (ಜ.) ೨. ನಿಲಿ (ಚ, ಮು.) ೩–೪. ದಿ (ಇ, ಮು.) ೪–೫. ಡುತಿರ್ದಳು ಮಾಯೆ ರಚನೆಯಲಿ (ಗ.) ೬. ಹಾ (ಬ, ಟ,) ; ಆ (ಎ, ಗ.) ; ಮಾ (ಇ.) ೭. ವಹ (ಎ, ಬ, ಗ.) ೮. ರಾಗದಿ ಹೊ (ಇ.)

ಪಸರಿಸಿದ [1]ನಿಱು[1] ಪಾದಗಳು ಸಂ
ದಿಸಿದ ಮಡ ಸಮಲಾಗಿನಲಿ ಮೋ
ಹಿಸಿಯಗ[2]ಲ್ದಿ[2]ಹ ಜಾನು ತೋಱುವ ಜಘನ ಕುಚಕಳಶ
[3]ಕುಸಿ[3]ದು ಕೆಲವಿಂಬಾದ ಕಾಲಿನ
ಲೆಸೆವ ನಳಿತೋಳುಗಳ ಭಾವದ
ಸಸಿನದಲಿ ಸಮನಿಸಿದ ಕಣ್ಣೊಪ್ಪಿದುವು ಮಾಯೆಯಲಿ || ೫೫ ||

ತಾಳದಲಿ ತರಹರಿಸಿ ಮೆಲ್ಲನೆ
ಮೇಳದಲಿ ಮೈನಿಗುರಿ ಕರಸಂ
ಚಾಳಿಯಲಿ ಚಳಬಳಿಸಿ ತಿರುಪಿನ ಮಡುಪಿನಲಿ ಮ[4]ಣಿದು
ತೋಳ ಮೈಯಲಿ ತೊನೆದು ನೋಟದ
ಥಾಳದಲಿ [5]ಥವಳಿಸಿ[6]ಯೆ[6]ವಿನುತ[8]ಮು
ರಾಳಗತಿಯಲಿ ಗಮಕಿಸುತುಮೊಪ್ಪಿರ್ದ[8]ಳಾ ಮಾಯೆ || ೫೬ ||

ನೇಮ [9]ನೆಲೆ ಪರ್ಯ[9]ಪಾಡು ಪಲ್ಲಟ
ಸೀಮೆ [10]ಸೊಗಸತಿ[10]ಬೆಡಗು ಬಿನ್ನಣ
ರಾಮಣೀಯ[11]ತೆ[11] ರೇಖೆಯಂತರಕರಣತಿರುಪಿನಲಿ
ಕಾಮಿನಿಯೊ ತಾ ಭರತಸಂಭವ
ಭೂಮಿಯೋ ಪೇಳೆನಲು ಮೆಱೆ[12]ದಾ
ಶ್ಯಾ[12]ಮೆ ಮಾಯಾದೇವಿ ಮೋಹಿಸ ಪಾತ್ರವಾಡಿದಳು || ೫೭ ||

ಸುಳಿವ ಹಸ್ತದ ಜಾತಿಭಾವದ
ಬಳಿಯಲಾಡುವ ನೋಟ ನೋಟದ
ಲುಳಿಯವೊಲು ತೆಗೆದತ್ತ ತಿರುಗುವ ಕೊರಳು ಕೊರಳಂತೆ
ಬಳುಕುತಿಹ ನಡು ನಡುವಿನಂದಕೆ
ಹೊಳೆವ ಪಾದದ ಪಾಡು ಪಾಡಿನ
ಸಿಲುಕಡೆಯ ನಿಱುಗೆಯಲಿ ಮೆಱೆದಳು ಮಾಯೆ ಲಾಸ್ಯದಲಿ || ೫೮ ||

೧. ಸರಿ (ಗ.) ೨. ಲದಿ (ಗ.) ೩. ಎಸೆ (ಜ.) ೪. ಕು (ಗ.) ೫–೬. ಡಳಮುಳಿಸಿ (ಇ.) ೭–೮. ವಿಸೂತ್ನ (ಉ, ಮ.) ೯. ಸಯು ಪಪ (ಗ.) ೧೦. ಮೋಹನ (ಇ.) ೧೧. ಕ (ಉ, ಎ, ಗ.) ೧೨. ವುಹು ಕಾ (ಗ.)

ರತಿಯು ನೀತಿಯು ದಿವಿಜರಾಜನ
ಸತಿಯು [೧]ಸರಣಿಯು[೧] ಕಮಲಜನ ಭಾ
ರತಿಯು ಭಾವವನಾದಿನಾರಾಯಣಿಯು ನಟಣೆಯನು
ಅತಿಶಯದ ಪಾರ್ವತಿಯು ಪಾವನ
ಗತಿಯುನ್ನೆಲ್ಲವ ತೋಱುತಿರ್ದಳು
ಚತುರೆ ಮಾಯಾದೇವಿ ತನ್ನಯ ಲಾಸ್ಯ[೨]ಲೀಲೆ[೨]ಯಲಿ ॥ ೪೯ ॥

ಮೃತ್ತಿಕೆಯ ಮಾಟಕದ ರೂಹಿನ
ಪುತ್ತಳಿಗಳನು ದೇಗುಲಕೆ ನೆಱೆ
ತೆ[೩]ತ್ತಿಸಿದರೆಂಬಂತೆ ಮಾಯೆಯ ನೋಡುವಳ್ತಿಯಲಿ
ಸುತ್ತಿ ಮುತ್ತಿ ಗವಾಕ್ಷರಂಧ್ರದ
ಭಿತ್ತಿಯ[೪]ಲಿ[೪] ನೆಱೆ ಕೀಲಿಸಿರ್ದರು
ಚಿತ್ತಜಗೃಹ ಸೋಂಕಿದಂತಿರೆ ಕೂಡೆ ನೋಟಕರು ॥ ೫೦ ॥

ಮೇಳಗಾನಧ್ಯಾನ[೫]ದಿನಿದನು[೫]
ಕೇಳಿ ಸಿಕ್ಕದರಾರು ಪಾತ್ರದ
ಚಾಳಿಯಲಿ ಹೊಳೆವಂಗಭಂಗಿಯ ಕಂಡು ಮನಸಿಜಗೆ
ಕೋಳುವೋಗದರಾರು ನರಸುರ
ಜಾಳದೊಳಗೆಂದೆನಲು ರಂಜಿಸಿ
ಬಾಲೆ ಮಾಯಾದೇವಿ ಮೆಱೆದಳು ಲಾಸ್ಯಕೇಳಿಯಲಿ ॥ ೫೧ ॥

ಹಲವು ಪರಿಗಳಲೀ ಪ್ರಕಾರ[೬]ದೊ
ಳೊಲವಿನಲಿ ಸರ್ವೋಪಚಾರಂ
ಗಳನು ವಿಸ್ತರವಾಗಿ ಮಾಡಿದ ಮಾಯೆಗುಚಿತದಲಿ[೬]
ಬಳಿಕ ಶಿವಲಿಂಗಪ್ರಸಾದದ
ತಳಿತ ಹೂವಿನ ದಂಡೆಯನು ಕೋ
ಮಳೆಗೆ ಕೊಟ್ಟನು ಹರಸುತಲಿ ಪೂಜಾರಿಪುಂಗವನು ॥ ೫೨ ॥

೧. ಸೈರಣೆ (ಇ.) ೨. ಕೇಳಿ (ಗ.) ೩. ಪ (ಎ, ಖ.) ೪. ನೆ (ಗ.) ೫. ವನು ನೆಱೆ (ಗ.) ೬. ಪ। ಲೊಲಿದು ಮಾಡುವ ಪಲವುಪಚಾ।ರಗಳ ಸಲೆ ವಿಸ್ತರಿಸಿ ಮಾಯಾ ದೇವಿಗುಚಿತವನು॥ (ಇ.)

ತರು[1]ಣಿ[1] ಶಿವಲಿಂಗಪ್ರಸಾದಕೆ
ಶರಣೆನುತೆ ಕೈಕೊಂಡು ನಲಿದಾ
ದರಿಸಿ ವಿರಚಿಸಿ ದೇವರೋಲಗ[2]ವಾಗಿ[2] ಕುಳ್ಳಿರ್ದು
ಇರುತಲಿರ್ದಳು ಬಳಿಕ ಸಚರಾ
ಚರರೊಳಂತರಯಾಮಿಯೆನಿಸಿದ
ಗುರು ಗುಹೇಶ್ವರನ[3]ಱಿದನಾಕೆಯ ಭಕ್ತಿಯನುಮತವ[3] || ೬೩ ||

## ಅಂತು ಗತಿ ೪ಕ್ಕಂ ಪದ ೧೭೨ಕ್ಕಂ ಮಂಗಳಂ

೧. ವ (ಜ.) ೨. ಮಾಡಿ (ಗ.) ೩. ಸರ್ವನಾಕೆಯ ಭಕ್ತಿಭಾವವಲಿ (ಇ.)

# ೫. ಪ್ರಭು ಮದ್ದಳೆಯ ಬಾರಿಸಿದ ಗತಿ

ಸೂಚನೆ:

ಬಯಸಿ ಮಾಡಲು ಮಾಯೆ [೧]ಬಱು[೧]ಭ
ಕ್ತಿಯನು ನಟಸಿದನಾಕೆಯಲಿ ಸಂ
ಶಯದ ಸಂಗವನಲ್ಲಮಪ್ರಭು ಮನುಜವೇಷದಲಿ

ಲಿಂಗಭಕ್ತರು ತಿಳಿವುದಿದನಾ
ವಂಗದಲಿ ಶರಣರುಗಳಾದವ
ರಂಗನೆಯರಳುಪಿಂಗೆ ನೆಱೆ ನಿರ್ಲೇಪವೃತ್ತಿಯಲಿ
ಸಂಗಿಯಂತಿರೆ ನಟಿಸಿ ತಾ ನಿ
ಸ್ಸಂಗಿಯಾಗಿಹ ಪರಿಯನೀ ಪ್ರಭು
ಲಿಂಗಲೀಲೆಯೊಳಾ ಸ್ವತಂತ್ರನ ಚಾರುಚರಿತೆಯಲಿ || ೧ ||

ಇರಲು ಮಾಯಾದೇವಿ ಮಧುಕೇ
ಶ್ವರನನೋ[೨]ಲಗಿಸುತ್ತೆ ಕಾಮಿಸಿ[೨]
ವರವಿಧಾವಂತರ ಕಳಾಕೇಳೀವಿನೋದದಲಿ
ಪರಮನಂತರ್ಯಾಮಿ ಕರುಣಾ
ಕರನು ಸದಮಲಸಗುಣನಿರ್ಗುಣ
ಭರಿತನಲ್ಲಮಲಿಂಗನಱಿದಿಂತೆಂದ ತನ್ನೊಳಗೆ || ೨ ||

ಕಾಮಿತಾರ್ಥವನೀಯಬೇಹುದು
ಕಾಮಿನಿಗೆ ತಾನವಳು ಕಾಮ
ಪ್ರೇಮಭಕ್ತಿಯ ಮಾಡಿದುದು ಕಾರಣದಲೆಂದೆನುತೆ
ಆ ಮಹಾಮಹಿಮಸ್ವರೂ[೩]ಪ ಸ[೩]
ನಾಮವನು ಮಱೆಮಾಡಿಯಭಿನವ
ಕಾಮರೂಪಿನ ಪರಿಯನಲ್ಲಮಲಿಂಗ ಧರಿಸಿದನು || ೩ ||

೧ ಶಿವ (ಅ, ಕ, ಗ.) ೨. ಲೈಸುವ ವಿಲಾಸದಿ (ಟ.); ಲಗಿಸುತ ವಿಲಾಸದಿ (ಗ, ಜ, ಜ.) ೩. ಪರು (ಇ.)




ಕಂಗ[೧]ಳಲಿ ನಡೆ[೧] ನೋಡಿದೊಡೆ ಹೆಱ
ಹಿಂಗಬಾರದ ಚೆಲುವ ಮುಖದ ಸು
ರಂಗ ಸೂಸುವ ದಂತಪಂಕ್ತಿಯ ತೊಳಪ ಕಣ್ಣಿನ
ಅಂಗವಟ್ಟದ ಸರಳಿಕೆಯ ಹ
ಸ್ತಂಗಳಂಘ್ರಿಯ ಕೋಮಳದ ಸ
ರ್ವಾಂಗಭಂಗಿಯ ಸೌಮ್ಯತೆಯ ಧರಿಸಿದನು ಪ್ರಭುರಾಯ || ೪ ||

ಹೂಸಿದಂತಿರೆ ತೊಡೆಹ ತುಪ್ಪುಳು
ಮೀಸೆ ಮಿಂಚಿರಲುಟ್ಟ ಪಟ್ಟೆಯ
ಕಾಸೆ ತೋಱುವ ಕನಕದುಡಿನೇವಳ ವಿರಾಜಿಸಲು
ಲೇಸೆನಿಪ ಹದಿ[೨]ನಾಱು ಹದಿನೆಂ
ಟೈ[೨]ಸು ವರುಷದ ಹರೆಯವೆಂಬ ವಿ
ಳಾಸವೇಷವ[೩]ನಲ್ಲಮಪ್ರಭುಲಿಂಗ [೪]ನಟಿ[೪]ಸಿದನು[೫] || ೫ ||

ತುಱುಬು ಚಿಮ್ಮುರಿ ಚಿಂದಿ ಕಾಸೆಯ
ಸೆಱಗು ನಸುಹೊದೆದೊಲ್ಲಿ ಮಿಂಚುವ
ಮಿಱುಪ ಸುಲಿಪಲ್ಲಸಿಯ ಸೆಳ್ಳುಗುರುಲಿವ ಹೊಂದೊಡರು
ಉಱುವ ಗಂಧದ ಲೇಪ ಬೆನ್ನೊಳು
ಮೆಱೆವ ಮದ್ದಳೆಸಹಿತ ಬಂದೀ
ತೆಱನನಲ್ಲಮ ನಟಿಸಿ ನಿಂದನು ವಿಕೃತವೇಷದಲಿ || ೬ ||

ಎಡದ [೬]ಕಿವಿ[೬]ಯಲಿ ಮೆಱೆವ ರತ್ನದ
[೭]ಕಡುಕು[೭] ತಾಯಿತ ಮಣಿಯ ಸರ [೮]ಹೆ
ದ್ದೊ[೮]ಡರ ಸರಪಳಿಗಳಲಿ ನೇಲುವ ಬಾವುಲಿಯ ಬೊಂಬೆ
[೯]ಮುಡಿಯ ಹೂಸರ ಚುಕ್ಕಿ[೯]ಬೊಟ್ಟಿನ
ಬೆಡಗುಸಹಿತವೆ ಧೂರ್ತವೇಷದ
ತೊಡಹವನು ತೊಟ್ಟಲ್ಲಮಪ್ರಭು [೧೦]ಬಂದು ನಿಂದಿರ್ದ[೧೦] || ೭ ||

೧. ಳಲಿ ನೆಱೆ (ಗ, ಜ.); ಳಂದಲಿ (ಇ.) ೨. ನ್ನೈದು ಪದಿನಾ| ರೈ (ಇ) ೩–೫. ಧರಿಸಿ ಬಂದನು ಮತ್ತೆ ಪ್ರಭುರಾಯ (ಇ.) ೪. ಧರಿ (ಚ.) ೬. ಕೈ (ಎ.) ೭. ಕಡೆಯ (ಎ.) ೮. ಹೊಂ| ಮೊ (ಅ, ಇ.) ೯. ಬಿಡದೆಸೆವ ಕತ್ತುರಿಯ (ಕ.) ೧೦. ಲಿಂಗ ನಟಿಸಿರ್ದ (ಐ)

ಕೊರಳ ಮುತ್ತಿನ ಕಂಠಮಾಲೆಯ
ವಿರಚಿಸುತ್ತಿಹ ಬಾಹುಪೂರದ
ಬೆರಳಿನುಂಗುರಗಳ ವಿಳಾಸದ [1]ಮುಡಿಲ[1] ವೀಳೆಯದ
ಧರಣಿಯೊಳು ಚೆಲುವಿಂಗೆ ತಾನೇ
ಬಿರುದ ಕಟ್ಟಿದನೆಂಬ ಸೊಬಗಿನ
ಪ್ರುರುಷವೇಷದಲಲ್ಲಮಪ್ರಭು[2]ರಾಯನೆಸೆ[2]ದಿರ್ದ ॥ ೮ ॥

ನಿಂದು ನಾನಾಪರಿಯ ವಹಣಿಗ
ಳಿಂದ ತಾಳ ಸಮೇಳ ಸದ್ಗತಿ
ಯಿಂದಲುಗ್ಘಡಣೆಯ ಗಡಾವಣೆಯಿಂದಲಲ್ಲಮನು
ಅಂದು ಮಧುಕೇಶ್ವರನ ಬಾಗಿಲ
ಮುಂದೆ ಬಾಜಿಸುತಿರ್ದನೈ ಹಲ
ವಂದದಲಿ ಮದ್ದಳೆಯ ಕೇಳುವರಲ್ಲ ಬೆಱಗಾಗೆ ॥ ೯ ॥

ಕಾರ [3]ಮುಗಿಲಿನ[3] ಗರ್ಜನೆಯ ಕಿವಿ
ಯಾರೆ ಕೇಳುವ ಸೋಗೆಯಂತಿರೆ
ಹಾರಯಿಸುತಲಿಯಲ್ಲಮನ ಮದ್ದಳೆಯ ದನಿಗೇಳ್ದು
ನಾರಿ ಮಾಯಾದೇವಿ ನಲಿಯುತ
ದಾರು [4]ಹೊಜಿಗಡೆಯಲ್ಲಿ ತೂರ್ಯೋ
ವ್ಯಾರವನು ಮಾಡುವರೆಸುತೆ ಕೇಳಿದಳು[4] ಕೆಳದಿಯರ ॥೧೦ ॥

ಕೆಳದಿಯರು ತಾವಱಿದು ಬಂದಾ
ಗಳೆ ವಿಚಾರಿಸಿ ಹೇಳಿದೊಡೆ ಕೋ
ಮಳೆ ಮನೋಮುದದಿಂದೆ ಕರೆಯಿಸಿ ಕಂಡಳಲ್ಲಮನ
ನೊಳೆತುವಾ ಕ್ಷಣ ಕಾಮಬಾಣದ
ಹಿಳುಕುಗಳು ಹಿರಿದಾಗಿ ಚಿತ್ತಜ
ನನೆಯಂಬಿಲಿ ಸಿಲ್ಕಿದಳು [5]ಮಾಯೆ ಸಾ[6]ನುರಾಗದಲಿ[6] ॥ ೧೧ ॥

೧. ಚಾಯು (ಖ,ಜ.) ೨. ಬಂದು ನಿಂ (ಉ.) ೩. ಸೋಗೆಯ (ಎ.) ೪. ಮುದ್ದಳೆ ಯನು ಮಾಡಾಗಂ। ಘೇರವನು ಬಾಜಿಸುವರೆಸುತವೆ ಕೇಳಿ (ಗ.) ೫-೬. ಮಾಯಾದೇವಿ ಮನದೊಳಗೆ (ಇ.) ೬. ನೋ (ಅ,ಖ,ಟ.)

ಆವ ದೇಶದ ಪುರುಷನೈ ನಿನ
ಗಾವ ಹೆಸರೈ ನೀನು ನೆಲೆಗೊಂ
ಡಾವ ಠಾವಿನಲಿಪ್ಪೆ[೧]ಯ್ಯೆಯೆ[೧]ಂದೆನುತೆ ವಿನಯದಲಿ
ಭಾವೆಯರು ಬಳಿಕಾತನನು ಸಂ
ಭಾವಿಸುತೆ ಕೇಳಿದೊಡೆಯಲ್ಲಮ
ದೇವನೊಲಿದಾ ಸತಿಯರಿಗೆ ನಸುನಗುತಲಿಂತೆಂದ ॥ ೧೨ ॥

ದೇಶವೆಮ್ಮದು ಹೇಳುವೊಡೆ ಪರ
ದೇಶ ಬಿರುದಿನ ಬಿಂಕಕಾಱರ
ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸ[೨]ರಿನಗೆ[೨]
ಲೇಸುಮಾಡುವ ಠಾವುಗಳಲಭಿ
ಲಾಷೆಯಿ[೩]ಲ್ಲದೆ[೩] ಹೊದ್ದುವೆವು ಸುಖ
ವಾಸಿಗಳು ನಾವೆಂದನಲ್ಲಮ[೪]ನೊಲಿದು[೪] ಸತಿಯರಿಗೆ ॥ ೧೩ ॥

ಒಳ್ಳಿತಾಯಿತು ಕಾರ್ಯ ನೀನಿ
ನ್ನಲ್ಲಿಗಲ್ಲಿಗೆ ಹೋಹ ಬುದ್ಧಿಯ
ಸಲ್ಲವಿಡು [೫]ಸುಖದಿಂದವೆ[೫]ಮ್ಮೊಡತಿಯ ಸಮೀಪದಲಿ
ಬಲ್ಲ ವಿದ್ಯಾವಸ್ತುಗಳೊಳೆ
ಮ್ಮೆಲ್ಲರೋಪಾದಿಯಲಿ ಮನಬಂ
ದಲ್ಲಿ ನೀನಿಹುದೆಂದರಾ ಕಾಮಿನಿಯರಲ್ಲಮಗೆ ॥ ೧೪ ॥

ಮನದ ಗಂದೆಯ ತುಱಿಸಿದಂತಿರೆ
ಮನಕೆ ಸಂತಸವಾದುದರಸನ
ತನುಜೆ[೬]ಗದ ತಾ[೬]ನಱಿದು ಹಡಪದ ಭೋಗಿಯೆಂಬವಳು
ವಿನಯದಿಂದಲ್ಲಮಗೆ ಬಳಿಕಲಿ
ವಿನುತ ಹೊಂಬಟ್ಟಲಲಿ ಮಾಯಾಂ
ಗನೆಯ ಕೈಯಲಿ ಕೊಡಿಸಿದಳು ಸಲೆ ಸಂತ ವೀಳೆಯವ ॥ ೧೫ ॥

೧. ನೀನೆ (ಜ.) ೨. ರಿಸಲಿ (ಕ.) ೩. ಂದಲು (ಬ, ಕ, ಮ.) ೪. ನಗುತ (ಜ.)
೫. ವುದು ನೀನು ನ (ಜ.) ೬. ಗಾದುದ (ಇ.)

ಆಸನದ ಕೈಕೊಂಡು ನೋಡುವ
ಈ ತರುಣಿ ತಾನೇನ ಮಾಡುವ
ಕೌತುಕವನೆಂದೆನುತೆ ವಿದ್ಯಾವಸ್ತು ತಾನಾಗಿ
ಪ್ರೀತಿವಟ್ಟವನಂತೆ ನಟ್ಟುವ
ಜಾತಿರೀತಿಯ ನಟಿಸುತಿರ್ದನು
ಭೂತಳದೊಳೆಮ್ಮಲ್ಲಮಪ್ರಭು ೧ತನ್ನ೧ ಲೀಲೆಯಲಿ ‖ ೧೬ ‖

ಶರಣೆನುತಲಾ ಮಾಯೆ ಮಧುಕೇ
ಶ್ವರನ ಬೀಳ್ಕೊಂಡಾಗಳಾತನ
ಕರೆದುಕೊಳುತೈತಂದು ತಂದೆಯ ಸಮ್ಮುಖವ ೨ಮಾಡಿ೨
ಅರಸನಱಿಕೆಯ ಮಾಡಿ ಮಿಗೆ ಬಳಿ
ಕಿರಿಸಿಕೊಂಡಳು ನಾಗವಾಸದ
ನೆರವಿ೩ಬಿಂದವ ಬೋವಗಾಱಿಕೆತನದಲ೪ಲ್ಲಮನ೫ ‖ ೧೭ ‖

ಹರುಷದಿಂದಲಿ ಕನ್ನೆಮಾಡದ
ಸಿರಿಯ ಚೌಮಾಳಿಗೆಯಲತಿವಿ
ಸ್ತರದಲೋಲಗಗೊಟ್ಟು ಕುಳ್ಳಿತು ಸಕಲವಿಭವದಲಿ
ಭರತವಿದ್ಯಾದ್ಯಖಿಲಕಳೆಗಳ
ಪರಿಚರಿಯ ಸೆವದಿಂದೆ ಮಾಯಾ
ತರುಣಿ ಮನದೊಳು ಸೊಗಸಿ ಮಾತಾಡಿಸಿದಳಲ್ಲಮನ ‖ ೧೮ ‖

೧. ಲಿಂಗ (ಗ, ಜ.)

೨. ನಿಲಿಸಿ (ಅ.)

೩-೪. ಯುಲಿ ತಾ ಬಿಂದಬೋಗಾರಿಕೆಯುಲ (ಉ.) ; ಗೊಪ್ಪುವ ಬಿಂದ ಬೋಗಾರಿಕೆಯುಲ (ಮ.) ; ಯುಲಿ ಬಿನ್ನಣದ ಬೋಗಾರಿಕೆಯುಲ (ಮು.).

೩-೫. ಯುಲಿ ಬಿಂದಕ್ಕೆ ಮುಖನಾಯಕನ ಮಾಡಿದಳು (ಗ.)

ಮನದಲಾತುರವಿಹುದು ಬುದ್ಧಿಯ
ಮೊನೆಗೆ ನಾಚಿಕೆ ಬಹುದು ನಗೆಗ
ಣ್ಣಿನಲಿ ಕಳವಳವಿಹುದು ಕಾಯದಲಿಹುದು ನಸುಭೀತಿ
ವಿನಯವಿಹುದೆಱಕದಲಿ ಜಿಹ್ವೆಯ
ಕೊನೆಯಲಿಹುದನ್ಯಪ್ರಸಂಗತೆ
ಯಿನಿತು ಮಾಯೆ[1]ಯಲಿ[2]ರ್ದಳಂ[1]ದ[2]ಲ್ಲಮನ ಬೇಟದಲಿ ॥ ೧೯ ॥

ಸುಧೆಯ ಸೋನೆಯ ಸುರಿಯುತಿಹ ಕಾ
ಲದಲಿ ತೃಪ್ತಿಯನೈದಲಱಿಯದೆ
ಕ್ಷುಧೆಗೆ ತೃಷೆಗಳ ಮಾಡಿ ಕೋಟಲೆಗೊಂಬ ಮರುಳಂತೆ
ಮುದ[3]ವನ[3]ಲ್ಲಮ ಕರುಣಿಸಿದ ಕಾ
ಲದಲಿ ನಿತ್ಯವ[4]ನಱಿ[4]ಯಲಱಿಯದೆ
ಕುದಿದು ಕೋಟಲೆಗೊಳುತಲಿರ್ದಳು ಮಾಯೆ ಬೇಟದಲಿ ॥ ೨೦ ॥

ಕಿಬ್ಬದಿಯ ಕೀಲಿಸಿದ ಕಾಮನ
ನಿಬ್ಬರದ ಕೂರಂಬಿನಲಿ ತನು
ವಿ[5]ಬ್ಬರಿ[5]ದವೊಲು ನಿಮಿಷ ಕುಳ್ಳಿರಲಾಱದಳವಳಿದು
ಉಬ್ಬರದ ಮದನಾಗ್ನಿ ಮೈಯನು
ಹಬ್ಬಲೇಕಾಂತಕ್ಕೆ ಬಳಿಕೊ
ಬ್ಬಬ್ಬರಾಪ್ತರುಸಹಿತ ಹೊಕ್ಕಳು ಮಾಯೆ ಮನಸೋತು ॥ ೨೧ ॥

ಮಲಗ ನೆಮ್ಮುತೆ ಗದ್ದುಗೆಯ ಮೇ
ಲೊಲಿದು ಕುಳ್ಳಿತು ತನ್ನ ಮನದಳ
ಬಳವ[6]ನೊಯ್ಯನೆ[6] ಸೂಚಿಸುವೆನಿನ್ನೋಜೆಯಿಂದೆನುತೆ
ಕಳವಳಿಸಿ ತರಹರಿಸಲಾಱದೆ
ಬಳಿಕಲಲ್ಲಮಗಾವ ಬೇಡಿನ
ನೆಲೆಯ ಮಾಡಿದಿರೆನುತೆ ಸಖಿಯರ ಕೇಳಿದಳು ಮಾಯೆ ॥ ೨೨ ॥

೧ ೧. ಯುಯುರ್ದಳಂ (ಇ.) ೨ ೨. ಹುದುವೊಬ್ಬ (ಜ) ೩. ದಲ (ಉ.) ೪. ಪಡೆ (ಇ, ಖ.) ೫. ಬ್ಬರಿ (ಅ, ಉ, ಕ.) ; ಬ್ಬಗಿ (ಇ.) ೬. ನೊಪ್ಪದೆ (ಅ, ಕ.); ನೆಲ್ಲವ (ಇ, ಉ.)

ಮಡದಿ ಮದನನ ಬಲೆಯ[೧] ಬಾಯಲಿ
ತೊಡಕಿ ಬಿರ್ದುದನಱಿದರಾಗಳೆ
ಯೊಡತಿ ನಿಮ್ಮಯ ಬಗೆಯ ಬಯಕೆಯ ನಾಚದೆಮ್ಮೊಡನೆ
ನುಡಿವೆಯಾದೊಡೆ ಬಳಿಕಲಲ್ಲವು
ಗೆಡೆಗುಡುವೆವೊಂದೆಡೆಯ ಬೀಡಿನ
ಗುಂಡಿಯನೆನುತಾ ಪಾಯೆಗಿಂತೆಂದರು ವಿದಗ್ಧೆಯರು || ೨೩ ||

ದೇವಿ ನಿಮ್ಮಯ ತನು ಮನೋಮಯ
ಭಾವ ಕಾಮನ ಕೈಯ ಭಾರಿಯ
ಹೂವಿನಂಬುಗಳಿಂದೆ ಮಾರ್ಪೊನೆಗೊಂಡ ತೆಱನಂತೆ
ತೀವಿಕೊಂಡಿವೆ ಬಱಿಯ ಬೇಟದ
ಬೇವಸದಲೆಮ್ಮೊಡನೆ ನಾಚದೆ
ಭಾವೆ[೨]ಹೇಳೆನುತೊಡತಿಯನು ಕೇಳಿದರು ಕೆಳದಿಯರು[೨] || ೨೪ ||

ಎನಲು ಕನ್ಯಾಭಾವಭಂಗಿಯ
ಮನದ ನಾಚಿಕೆಯೊಂದು ನೆಟ್ಟನೆ
ಜನಪತಿಯ ಮಗಳೆಂಬ ಹೆಕ್ಕಳ-ಹೆಮ್ಮೆ ತಾನೆರಡು
ತನಗೆ ಸಮ[೩]ಸಂಪ್ರಾಪ್ತ[೩]ನಲ್ಲದ
ಮನುಜಗಳುಪಿದೆನೆಂಬ ಮಱವೆಯ
ಘನತೆ ಮೂಱುವ[೪]ಕಳುಕಿ ನಾಚುತಲಿ[೪]ರ್ದಳಾ ಮಾಯೆ || ೨೫ ||

ಒಡತಿ ನುಡಿಯದೆ ನಾಚಿರಲು ಹೆ
ಗ್ಗಡಿತಿ ಸಕಳೆಯಿದೇನು ರಾಣಿಯ
ನಡೆವ ನೋಡುವ ಹಾಡುವಾಡುವ ರೀತಿ ಹೊಸತಾಗಿ
ಬೆಡಗು ಬಿನ್ನಾಣಿಸಿತಿದೆತ್ತಣ
ಗೊಡವೆಗೊಳಗಾಗಿದ್ದಳೆನುತಲಿ
[೫]ಮಡದಿಯೊಲಿದು[೫] ಕಳಾವಿಳಾಸಿ[೬]ಯು ಕೇಳಿದಳು ಬಳಿಕ[೬] || ೨೬ ||

೧. ಗ (ಇ.) ೨. ಸೀ ಹೇಳೆನುತ ಮಾತನು ಕೇಳಿದರು ಬಳಿಕ (ಇ.) ೩. ಸತ್ಪಾತ್ರ (ಜ.) ೪. ಕಂಜ ಮನದೊಳಗಿ (ಗ.) ೫. ತಹೆಯುದ್ಬೈದಿ (ಗ.) ೬. ನಿಯರನು ಕೇಳಿದಳು (ಇ.)

ಹಲವು ಮಾ[1]ತೇನೀ[1]ಕೆ ಕಾಮನ
ಬಲೆಗೆ ಬಿದ್ದುದು ಸತ್ಯವಲ್ಲವು
ಗಳುಪಿದುದು ದಿಟವವರಿವರಸಿನ್ನೇನ ಕೇಳುವಿರಿ
ಹೊಲಬಿದಾದೊಡೆ ತಪ್ಪದೆನುತಲಿ
ತಿಳಿಯೆ ನುಡಿವಳು ಸಕಳೆಗೊಡತಿಯ
ನೆಲೆಯನಱಿದು ಕಳಾವಿಳಾಸಿನಿ ತನ್ನ ಸನುಮತವ ॥ ೨೭ ॥

ಆ ನುಡಿಯನಾಲಿಸುತೆ ಮಾಯಾ
ಮಾನಿನಿಯು ಮೊಗವಲರಿ ಸಲೆ ಸು
ಮ್ಮಾನದಲಿ ನಸುನಗುತೆ ನಾಚುವ ಭಾವಭಂಗಿಯನು
ಆ ನಿತಂಬಿನಿಯರು ನಿಧಾನಿಸು
ತೇನು ಹುಸಿಯಲ್ಲೆನುತೆ ಶ್ರುತದೃ
ಷ್ಟಾನುಮಾನದಲಱಿ[2]ದರಲ್ಲಮನಾಕೆಯೊಲಿದುದನು[2] ॥ ೨೮ ॥

ಈ ಕುಮಾರಿಯ ತಿಳಿ[3]ವೆವೆಂಬುದ
ದೇ[3]ಕೆ ಕಾಣಲು ಬಂದ ಕಾರಿಯ
ವಾ ಕಳಾವಿದನನು ವಿಚಾರಿಸಬೇಕು ನಾವೆನುತೆ
ಆಕೆಯರು ಮದಮಾನಿಯೆಂಬ ವಿ
ವೇಕಿಯನು ಕಳುಹಿದಡೆ ಬಂದಳ
ನೇಕ [4]ಚಮರಿನ ಚಪಳ[4]ತನವಲಿಯಲ್ಲಮನ ಬಳಿಗೆ ॥ ೨೯ ॥

ನಾರಿ ಬಂದುದನಱಿದು ಮೊದಲೇ
ದಾರಿದೋಱುವೆ ನಾನೆನುತೆ ಬೀ
ಡಾರಕಿ[5]ನ್ನಾವೈದಬೇಹುದು ನಮ್ಮನಜಸಿದೊಡೆ[5]
ನಾರಿ [6]ನೀನೀ[6]ಹದನ ಹೇಳು ಕು
ಮಾರಿಗೆನುತವೆ ನಿಜವಿನೋದವಿ
ಚಾರದಿಂದಲಿ ನುಡಿದನಾ ಮದಮಾಸಿಗಲ್ಲಮನು ॥ ೩೦ ॥

೧ ತಿನ್ನೇ (ಅ, ಖ, ಜ.) ; ತೇಕೀ (ಗ.) ೨. ದು ಪೇಳಿದರಲ್ಲಮನ ಪರಿಯ (ಅ.)
೩. ವೃಪಮುಖಿ! ನ್ನೇ (ಇ.) ೪. ಪವಣಿಯ ಚಮರ (ಇ.) ೫. ನ್ಯೈದುವೆವು ನ
ಮ್ಮನು ಅರಸಿ ಕೇಳಿದೊಡೆ (ಇ.) ೬. ನೇ (ಗ.)

ನಿನಗೆ [1]ಸಾ[1]ಕಿನ್ನೇಕೆ ಬೀಡಿನ
ಮನೆ ವೃಥಾ ಬೇಱೊಂದು ಸಂಕ
ಲ್ಪನೆಯ ಬಿಡು ನಮ್ಮೊಡತಿಯಾದೊಡೆ ಮುಟ್ಟೆ ಮೋಹದಲಿ
ನಿಮಗೆ ಕೃಪೆ[2]ಯಾಗಿರ್ದಳೆ[2]ಮ್ಮರ
ಮನೆಯೊಳಿರು ಸುಖಿಯಾಗಿ ನೀನೆಂ
ದೆನುತೆ ನಯದಲಿ ನುಡಿದಳಾ ಮದಮಾಸಿಯಲ್ಲಮಗೆ ॥ ೩೧ ॥

ನಾವು ಪರದೇಶಿಗಳು ಬಡವರು
ನೀವು ದೊರೆಗಳು ಮೇಲೆ ನಿಮ್ಮಯ
ದೇವಿ ರಾಜಕುಮಾರಿ ನಾವೇ ಪುರುಷವೇಷಿಗಳು
ನೀವು ಸತಿಯರು ನಿಮ್ಮೊಳಿಹುದೆಮ
ಗಾವ [3]ಮರ್ಯಾದೆಗಳು[3] ದೂರದ
ಸೇವೆ [4]ತಾನೆಮಗುಚಿತ[4]ವೆಂದನು ನಗುತಲಲ್ಲಮನು ॥ ೩೨ ॥

ಕೂಡೆ ತಾ ಪತಿಕರಿಸಿ[5]ಮರುಳಿದು[5]
ಮಾಡಬಲ್ಲಳೆ ಮಾಯೆ ಭೇದವ
ನೋಡು ನೀನೀಗಿರುತಿರುತಲಿನ್ನಾಕೆಯಂಗವನು
ಆಡಿ ತೋಱಲದೇಕೆ ನೀ ಕೈ
ಗೂಡಿ ಕಾಂಬುದು ನಿನಗೆ ನೀನೆನು
ತಾಡುತಿರ್ದಳು ಹಲವು ಬಿನ್ನಣವಾತನಲ್ಲಮಗೆ ॥ ೩೩ ॥

ಆದೊಡೇನೌ ನಿನ್ನ ಮಾತಿನ
ಭೇದ ಬೇಱೊಂದಾಗಿಯೆನ್ನೊಳು
ವೇದಿಸುತ್ತಿದೆ ನುಡಿಯಲಮ್ಮೆವು ನಿನಗೆ ಮನ[6]ದಿಱೆದು[6]
ಆದರಿಸುವೊಡೆ ಕೇಳುವೊಡತಿಯ
ರಾದವರ ದೂರದಲಿ ಸೇವಿಸಿ
ಹೋದೊಡೆಮಗದು ಸೌಖ್ಯವೆಂದನು ನಗುತಲಲ್ಲಮನು ॥ ೩೪ ॥

೧. ಯೆಂ (ಬ.) ೨. ಮಾಡಿದಳು ನ (ಜ.) ೩ ಪ್ರಪಂಚಿತವು ನೋಡಿ (ಗ.) ೪. ನಮಗದು ಸೌಖ್ಯ (ಗ) ೫. ನಿನ್ನನು (ಜ.) ೬. ದಿವಸ (ಜ.)

ನಗೆಯ ಮಾತಲ್ಲಣ್ಣ ಮಾಯೆಯ
ಬಗೆಗೆ ನಿನ್ನನು ಸೇವಕಾವ್ಯ
ತ್ರಿಗಳೊಳೆಣಿಸುವ ಪರಿಯ ಕಾಣೆನು ನಿನ್ನ ತನ್ನಿಂದೆ
ಮಿಗಿಲು ಮಾಡುವ ಪರಿಯಲಿರ್ದಳು
ಹಗಲಿರುಳು ಹಂಬಲಿ[೧]ಸಿ ಕೇಳ್ವೆ[೧]
ಬೆಗಡುಗೊಳ್ಳದಿರೆನುತೆ ಬೋಳೈಸಿದಳು ಮದಮಾನಿ || ೩೫ ||

ಸೇವಕರ ಮೇಲೆಱಕವಿದ್ದೊಡೆ
ಭಾವೆ ತಪ್ಪೇನೊಡತಿಯಾದವ
ರೋವಿ ಸಲ[೨]ಹುವ[೨] ಮೋಹ ಮಾಡುವರವಱಗದು ಸಹಜ
ನಾವು ನಮ್ಮಯ ಸೇವಕಾಂಗದ
ಭಾವದಿಂದಿರಬೇಕೆನುತೆ ನಾ
ನಾವಿಧದ ಥಾಳಕತನಂಗಳ ನುಡಿದನಲ್ಲಮನು || ೩೬ ||

ಸಾಕು ಜಾಣಿನ ಮಾತು ಮಱೆಯಿ
ನ್ನೇಕೆ ನಿನ್ನೊಳು ಮಾಯೆ ಕಾಮೋ
ದ್ರೇಕದಲಿ ನೆಱೆ ನಿನಗೆ ಸೋತಳು ಹಲವು ಮಾತೇನು
ಲೋಕದೊಳು ನರ-ದಿವಿಜ-ದನುಜರ
ನೇಕರನು ಬಗೆಗೊಂಡು ಲೆಕ್ಕಿಸ
ದಾಕೆ ತಾನೇ ಸೋತಳೈ ನಿನಗೆಂದವಳಲ್ಲಮಗೆ || ೩೭ ||

ನೀವೆ ಬಲ್ಲಿರಿ ನಿಮ್ಮ ಮಾಯಾ
ದೇವಿಯಂತಸ್ಥವನು ಹೊಸಬರು
ನಾವು ಬಲ್ಲೆವೆಯಂತುಕಾರಣ ಮನಸು ಬಂದಂತೆ
ನೀವೆ ಮಾಡುವುದೆಮ್ಮ ಕೇಳವು
ದಾವುದುಂಟೆಂದೆನುತಲಲ್ಲಮ
ದೇವನಾ ಮದಮಾನಿಗೆಂದನು ಬಳಿಕ ನಸುನಗುತೆ || ೩೮ ||

೧. ಸಿಕೇಳ್ವಳು (ಉ.); ಸುತ್ತೈಪಳ (ಜ.) ೨. ಹಲು (ಅ, ಉ, ಕ.)

ಆವ ಶಕುನವ ತಿದ್ದಿಕೊಂಡೆಲೆ
ಭಾವ ಬಂದೆಯೊ ಅಲ್ಲದಿರ್ದೊಡ
ದಾವ ಮೋಹನವ[1]ಶ್ಯ[1]ವಿದ್ಯೆಯ ಕಲಿತೆಯೋ ದಿಟಕೆ
ದೇವಿಯನು ನೀ ಮರುಳುಮಾಡಿದೆ
ಜಾವಳಿಗನಲ್ಲೆನುತೆ ಬಂದಳು
ಭಾವೆ ನಗುತಲ್ಲಮನ ಬಳಿಯಿಂದೊಡತಿಯಿದ್ದೆಡೆಗೆ ॥ ೩೯ ॥

ಇತ್ತಲಾಗಳೆ ತೋಳು ತೊಡೆ ತುಟಿ
ವೃತ್ತಕುಚ ಕೊರಳರಳುಗಂಗಳು
ಕೆತ್ತುತಿದ್ದುವು ಮಾಯೆಗಿಚ್ಛೆಯ ಫಲವ ಸೂಚಿಸುತೆ
ಚಿತ್ತದಲಿ ಹಾರೈಸಿ ನಗುತಲಿ
ಮತ್ತೆ ಸುಮ್ಮಾನದಲಿ ಬಂದಳು
ಮತ್ತಗಜಗತಿಯಿಂದಲಾ ಸಮಯದಲಿ ಮದಮಾನಿ ॥ ೪೦ ॥

ಏನು ನಿನ್ನಯ [2]ಮುಸುಡ[2] ಚೇಷ್ಟೆ ಸು
ಮಾನವನು ಸೂಚಿಸುತಲಿದೆ ಬಳಿ
ಕೇನ ಮಾಡಿದೆ ಹೇಳು ಕಾರ್ಯದ ಹದನ [3]ನೀನೆ[3]ನಲು
ಆ ನಿತಂಬಿನಿಯಲ್ಲಮನ ಮಿಗೆ
ತಾನೊಡಂಬಡಿಸಿದುದನೆಲ್ಲವ
ನೂನವಿಲ್ಲದೆ ಹೇಳಿದಳು ಮದಮಾನಿ ವಿಸ್ತರಿಸಿ ॥ ೪೧ ॥

ನೀನಹುದು ಸಂಮೋಹನದ ಸಂ
ಧಾನವಿದ್ಯಾಜಾಣೆಯೆನುತಾ
ಮಾನಿನಿಯರುರುಗಳೊಲಿದು ಮಾಯಾಂಗನೆಯ ಕೈಯಿಂದೆ
ಆ ನಿತಂಬಿನಿ ದಣಿವವೊಲ್ ಸ
ನ್ಮಾನಿಸುತೆ ಸಂತೋಷದಲಿ ಮದ
ಮಾನಿ[4]ಗುಚಿತದ[5]ಲೀಸಿ[4] ಕೊಡಿಸಿದರಂಗಚಿತ್ತವನು[5] ॥ ೪೨ ॥

೧. ಸ್ತ್ರೀ (ಜ.) ೨. ಮುಖದ (ಕ.); ಮನದ (ಜ.) ೩. ನೆಂದೆ (ಗ.) ೪. ಸಿಗೆ ಹರುಷದಲಿ (ಇ.) ೫. ಲಿಂಗವಟ್ಟವ ಕೊಟ್ಟಳಾ ಮಾನಿ (ಜ.)

ಕಱುಬರಾದ ಕನಿಷ್ಠರಿಂತಿದ
ನಱಿದರಾದೊಡೆ ಭೂಮಿಪಾಲಂ
ಗಱುಹುವರು ಬಳಿಕರಸನೀ ಸೋಹೆಯನು ಕೇಳಿದೊಡೆ
ಅಱಿಯಬಾರದು ಮತ್ತೆ ಕಾರ್ಯದ
[1]ತೆಱನು[1] ಹೇಗಹುದೆಂದೆನುತ್ತಲಿ
ನೆಱೆ ವಿಚಾರಿಸಿ ಗುಪ್ತವನು ಮಾಡಿದರು ಕೆಳದಿಯರು ‖ ೪೩ ‖

ಅಂದಿನಿರುಳಿನಲಾರುವಱಿಯದ
ಛಂದದಿಂದಲಿ ಬಳಿಕ ಸಜ್ಜಾ
ಮಂದಿರಕೆ [2]ಸಡಗರಿ[2]ಸಿ ಮಾಯೆಯನಲ್ಲಮನನೊಲಿಸಿ
ತಂದು ಬಿಜಯಂಗೈಸಿದರು ಬಳಿ
ಕಿಂದುಮುಖಿಯರು ತಮವ ತರಣಿಯ
ನೊಂದು ಮಾಡುವೆವೆಂಬ ಭಾವಭ್ರಮಿತ[3]ಬುದ್ಧಿಯ[3]ಲಿ ‖ ೪೪ ‖

ನೆಲಸಿ ಮಿಂಚಿನ ಮಿ[4]ಡುಕಿ[4]ನೊಲು ಕಂ
ಗಳಿಗೆ ತೋಱುವನಲ್ಲದಪ್ಪಿಗೆ
ನಿಲುಕನಂಬರದಂತೆ ಸೋಂಕಿಹನಲ್ಲದನು[5]ರ[5]ತಿಗೆ
ಉಲುಕನಕ್ಷರ[6]ದಂತೆ ಬಾಯೊಳು
ನಲಿವನಲ್ಲದೆ ಚುಂಬನಕೆ[6] ತಾ
ಸಿಲುಕನಲ್ಲಮನೀ ಪರಿಯ ನಟಿಸಿದನು ಮಾಯೆಯಲಿ ‖ ೪೫ ‖

ಬಯಲ ಚಪ್ಪರಿಪಂತೆ ಚುಂಬನ
ಬಯಲನಪ್ಪುವವೊಲು ಸಮು[7]ಷ್ಟಿ[7]ಕೆ
ಬಯಲನೀಕ್ಷಿಸುವಂತೆ ನೋಟದ ಕೂಟವನುಭವಣೆ
ಬಯಲುಗೊಂಡುವು ಭಾವಿಸಲು ನಿ
ರ್ಮಯಲಿನಲ್ಲಮು[8]ಗೋತ[8] ಕಾರಣ
ಬಯಲ ಬ[9]ಹ್ಮದ[9] ಬಲೆಗೆ ಬಿದ್ದಳು ಮಾಯೆ ಸುರತದಲಿ ‖ ೪೬ ‖

೧. ನೆರವು (ಜ.) ೨ ಸಡೆಗೊಳಿ (ಜ.) ೩. ಚಿತ್ತದ (ಇ.) ೪. ಸುಗಿ (ಇ, ಎ.) ೫. ಗ (ಎ, ಒ, ಕ, ಜ.) ೬. ಪಳತೆ ಬಾಯೊಳು। ಸಲುವನಲ್ಲದೆ ಭಂಜನೆಗೆ (ಜ.) ೭. ಷ್ಪಿ (ಅ, ಇ, ಉ, ಕ.) ೮. ಗೊಲಿದ (ಜ, ಮು.) ೯. ಬ್ರಹ್ಮನ (ಇ.)

ಮಳೆಗೆ ನೆನೆವುದೆ ಗಾಳಿ ಬೀಸಿದೊ
ಡೊಲೆವುದೇ ಬಲುಗಿಚ್ಚಿನುರಿಯಿಂ
ದಳಿವುದೇ ನಭವಾ ಪರಿಯ ಬಯಲುಗನು ತಾನಾಗಿ
ಕಳವಳದ ವಿಷಯುಗಳ ವ್ಯಸನಗ
ಳೊಳಗೆ ಸಿಕ್ಕುವನಲ್ಲವಾತನ
ಹೊಲಬು ತಾ ಬೇಱೊಂದು ಪರಿಯೇನೆಂಬೆನಲ್ಲಮನ || ೪೭ ||

ಜಗವನೇಡಿಸಿ ಕಾಡುವಾ ಮಾ
ಯೆಗೆ ನವೀನವೆನಿಪ್ಪ ಮಾಯಾ
ವಿಗನು ತಾನೆಂಬಂತಿ೧ರಿಲ್ಲದ೧ ಬಯಲ ಬಗೆಗೊಳಿಸಿ
ಅಗಲದಂತಿರಲಿದ್ದು ಸುರತದ
ಸೊಗಸಿಗಿಲ್ಲದೆ ಸುಳಿದನಾತನ
ಬಗೆಯನಂತಿಂತೆಂದು ಬಲ್ಲವರಿಲ್ಲವಲ್ಲಮನ || ೪೮ ||

ಅಕ್ಕಟಕ್ಕಟ ಈತಗಳುಪಿದ
ಕಕ್ಕುಲತೆ ಕೈಸಾರಿತಲ್ಲದೆ
ಹೊಕ್ಕು ಮೈಕೈಗೂಡಿ ಸುರತಸುಖಾತಿರೇಕದಲಿ
ಒಕ್ಕಲಿಕ್ಕಿ ಸಮಸ್ತಭೋಗವ
ಮಿಕ್ಕು ಸವಿಯದೆಯೆನ್ನ ಭಾವನೆ
೨ಮುಕ್ಕು೨ ಹೋದುದೆ ಎನುತೆ ಮನದೊಳು ಮಱುಗಿದಳು ಮಾಯೆ
|| ೪೯ ||

ವನಿತೆ ಬೆಱಗಾಗಿರ್ದಳಲ್ಲಮ
ತನಗೆ ರೂಹಿಸಿ ಸುರತಸುಖಭಾ
ವನೆಗೆ ಬಾರದೆ ಬಯಲುಗೊಂಡಿರೆ ಸುಯ್ದು ಮಱೆದೊಱಗಿ
ಕನಸ ಕಂಡಂತಾಗಿ ಬಳಿಕಾ
ದಿನದ ಮಱುದಿವಸದಲಿ ತನ್ನಯ
ಮನವೊಲಿದ ನಿಜಸಖಿಯರೊಳಗಿಂತೆಂದಳಾ ಮಾಯೆ || ೫೦ ||

೧. ರಲ್ಲಮ (ಗ,ಜ.) ೨. ಮಿಕ್ಕಿ (ಇ.)

ನೋಡಿಮೊಡೆ ರೂಪಾಗಿರಲು ವ್ಯೈ
ಗ್ಗೂಡಲಿಕೆ ಸೋಂಕಿಲ್ಲದಿರ್ದೊಡೆ
ನೋಡಿ ನಾ ಬೆಱಗಾಗಿ ಮಱ[3]ದೊಱಗಿರಲು ಮನದೊಳಗೆ
ಕೂಡುವಂತಿರಲೆನಗೆ ಮೋಹವ
ಮಾಡುವಂತಿರೆ ಕಂಡೆ ಕನಸನು
ನೋಡಿದಿರೆಯಲ್ಲಮನ ನಟಣೆಯನೆಂದಳಾ ಮಾಯೆ || ೫೧ ||

ಮರುಳುಗೊಂಡಂತೆನಗೆ [1]ಮೋಹದಿ[1]
ಬೆರಳುಗಳ[2]ನೊಲಿ[2]ದಿತ್ತು ಕೀ[3]ಲಿಸಿ
ಯಿ[3]ರುಳು ಹಗಲೆಡೆಬಿಡದೆ [4]ಕಾದಿ[4]ರುತಿರ್ದನೆಂಬಂತೆ
ಹಿರಿಯ ಕನಸನು ಕಂಡೆ ನಾನಿ
ನ್ನಿರುಳೊಳೀ ಪರಿಯೆನುತೆ ಮಾಯಾ
ತರುಣಿ ವಿಸ್ತರಿಸಿದಳು ತನ್ನಯ ಕೆಳದಿಯರ ಕೂಡೆ || ೫೨ ||

ಸುರತ[5]ಮು[5]ಖದಲಿ ಮುಂದುಗೆಡದಿಹ
ಪುರುಷನಿವನಿನ್ನಾರೊ ಸತಿಯರ
ಸರಸಪಾಶಕೆ ತೊಡ[6]ಕಿ[6] ಬೀಳದ ಮಹಿಮನಿವನಾರೋ
ಪರಿಕಿಸುವೊಡಲ್ಲಮನ ಭೇದಿಸ
ಲರಿದಲಾ ಎಂದೆನುತೆ ಮಾಯಾ
ತರುಣಿಗಾ ಕೆಳದಿಯರು ಬಳಿಕಿಂತೆಂದರೊಲವಿನಲಿ || ೫೩ ||

ಇದಿರುಗನಸಿದು ಲೇಸು ನಿನಗ
ಭ್ಯುದಯವನು ಸೂಚಿಸುವುದೆನುತಲಿ
ಸುದತಿಯರು ಮಿಗೆ ಕನಸ ಮುಱಿದರು ಮನಸುಬಂದಂತೆ
ಅವನು ಕೇಳುತೆ ಮತ್ತೆ ಮಱುಕಳಿ
ಸಿದುದು ನೆಱೆಯಲ್ಲಮನ ಬೇಟದ
ಕುದಿಹ ಮಾಯೆಯ ತನು-ಮನಂಗಳ ಕಂದೆ ಕುಂದಿಸುತೆ || ೫೪ ||

೧. ಮೂಗನು (ಗ, ಖ, ಚ.); ಮೂಗೆದೆ (ಏ.) ೨. ನಱು (ಉ, ಕ, ಮು.) ೩. ಳಿ ಲೊ। ಳಿ (ಕ.) ೪. ಕೂಡಿ (ಇ.) ೫. ಸು (ಬ, ಕ, ಗ, ಜ.) ೬. ರಿ (ಉ, ಮು.)

ಅಂದು ಬಳಿಕಾ ಹದನನಾಗಳೆ
ತಂದು [೧]ಹರ[೧]ಹಲು [೨]ಕೆಲರು[೨] ಭರವಸ
ದಿಂದೆ ಮೋಹಿನಿದೇವಿ [೩]ತನ್ನಯೆ ಮಗಳ ಮಂದಿರಕೆ
ಬಂದು[೩] ತಾನೇಕಾಂತದಲಿ ನಿಜ
ನಂದನೆಯು[೪]ನಾಪ್ತೆಯರ[೪] ಕರೆದಿಂ
ತೆಂದು ನುಡಿದಳು ತಾನು ಕೇಳಿದ ಗುಪ್ತವಾರ್ತೆಯನು ॥ ೫೫ ॥

ಮಗಳೆ ನೀ ನಿನಗಲ್ಲ[೫]ದಿದೊರ್
ಜಗಳ [೬]ನಡೆ[೬]ವರೆ[೫] ರಾಜಕುಲದಲಿ
ನಗೆಗೆಡೆಯ ಮಾಡುವರೆ ನಿಮ್ಮಯ ತಂದೆ ಕೇಳ್ದೊಡೆ
ಸೊಗಸುವನೆ ಮಿಗೆ [೭]ಮುನಿ[೭]ವಲ[೮]ವರ[೮] ಮಾ
ತುಗಳಿಗಾಸ್ಪದವಹರೆ ಅಕಟಾ
ನೆಗಳಲಹುದೇ ಪುರುಷಸಂಗವನೆಂದಳಾ ಜನನಿ ॥ ೫೬ ॥

ನೀತಿಯುಱಿಯುದೆಯಾನು ಮೊದಲಲಿ
ಕಾತರಿಸಿದುದದೊಂದು ಭಾವಿಸ
ಲಾತ ಸುರತವಲಂಗಸಂಗಕೆ ಸಿಕ್ಕದಿಹುದೊಂದು
ಮಾತೆ ಕೇಳಿದುದೊಂದು ನಮಗಿ
ನ್ನೇತಱದು [೯]ನುಡಿ[೯]ಯೆನುತೆ ಲಜ್ಜೆಯ
ಭೀತಿಯಲಿ [೧೦]ಬೆಂಬಿದ್ದು[೧೦] ಮೌನದೊಳಿರ್ದಳಾ ಮಾಯೆ ॥ ೫೭ ॥

ತರಳೆ ನೀನಕಟೇನ ಮಾಡುವೆ
ದುರುಳರಿವದಿರು ನಿನ್ನ ತೊತ್ತಿರು
ಮರುಳು ಮಾಡಿದೊಡೊಲಿದೆಯ್ಯೆಸಲೆ ಎನುತೆ ನಿಜಸುತೆಯು
ಕರುಣದಲಿ ಮೋಹದಲುಪೇಕ್ಷೆಯ
ಭರದಲಾಕೆಯನೇನುವೆನ್ನದೆ
ಮುರಿದು ಮೋಹಿನಿದೇವಿ ನೆಜಿ ನೋಡಿದಳು ಕೆಳದಿಯರ ॥ ೫೮ ॥

೧. ನೆಱ (ಅ,ಕ,ಗ.) ೨. ಕೇಳಿ (ಎ.) ೩. ತನುಜೆಯು ಮಂದಿರಕೆ ಬಂದು ನಿಂದು (ಜ.) ೪. ಮುಪದಿಂದೆ (ಇ.) ೫. ದೊರೆಯು ನೆಗಳಲಹುದೇ (ಇ.) ೬. ನೆನೆ (ಎ.) ೭. ನಗು (ಎ.) ೮. ನೆಲೆ (ಇ.) ೯. ಗತಿ (ಗ.) ೧೦. ಬೆಂದಿರ್ದು (ಮು.); ಬೆದೆ ಬೆಂದು (ಇ.)

ಅರಸಿ ನುಡಿದೊಡೆ ನಾವು ಪ್ರತ್ಯು
ತ್ತರವ ಬಿನ್ನಹಮಾಡಬಾರದು
ತರುಣಿ ತಾನಲ್ಲಮನ [1]ಕಾಣುತೆ ಕಾಮ[1]ತಾಪದಲಿ
ಮರುಳುಗೊಂಡಾತಂಗೆ ಮೋಹಿಸಿ
ಹರಣಮಾತ್ರವನುಳುಹಿಕೊಂಡಳು
ಹಿರಿದು ಮಾತಿನ್ನೇತಕೆಂದರು [2]ಕೂಡೆ[2] ಕೆಳದಿಯರು ॥ ೫೯ ॥

ಅಕಟ ಮಗಳಿಗಿದಾವ [3]ದೆಸೆಯುಲಿ[3]
ವಿಕಳ ಬಂದುದೊ ಬಱಿದೆ [4]ಬಹುಸೇ
ವಕ[4]ರಿರಲು ಸಲೆ [5]ಸಂತವಿಟ್ಟಿರಿದೆ[5]ತ್ತಣಲ್ಲಮನ
ಸಕ[6]ಳೆ[6] ಬುದ್ಧಿಯ ಬಲ್ಲೆ ನೀನೇ
ತಕೆ ವಿಚಾರಿಸದಾದೆಯೆನುತಾ
ಸಕಳೆಯನು ಮ[7]ರುಳಾ[7]ಡುತಿರ್ದಳು ಮೋಹಿನೀದೇವಿ ॥ ೬೦ ॥

ಮನುಜದೇಹವಪೂರ್ವವದ[8]ಱೊಳು
ಜನಪತಿಯ ಸುತೆಯಹುದಪೂರ್ವತೆ
ಯಿನಿತಱೊಳು ಪಟುವಾಗಿ ಸಕಲಸುಖಂಗಳ[9]ನು ತಿಳಿ[9]ದು
ಅನುಭವಿಸುವುದಪೂರ್ವವದಱಿಂ
ಮನಸು ಬಂದಂತಿರಲಿ ಮಾಯಾಂ
ಗನೆಯದೇತಕೆ ಕಾಹು ಕಟ್ಟಳೆಯೆಂದಳಾ ಸಕಳೆ ॥ ೬೧ ॥

ಅಹುದು ತನುವುಳ್ಳಲ್ಲಿ ಸುಖದಿಂ
ದಿಹುದು ಬಳಿಕಲಿ ಬಯಸಿ[10]ಬಾತೊರ್ದೆ
ಬಹವೆಯದುಕಾರಣದಲಾತ್ಮಜೆ ಮನಸು ಬಂದಂತೆ
ಬಹಳಭೋಗವ ಕೊಳಲಿಯೆನುತಾ
ಗ್ರಹವಸೀಡಾಡಿದಳು ನೀವೇ
ಸಹಿತರೇ ಎನುತವರನುಪಚರಿಸಿದಳು ನೃಪರಾಣಿ ॥ ೬೨ ॥

೧. ಕಾಮಾತುರದ (ಇ.) ೨. ನೆರೆದ (ಜ.) ೩. ಕಡೆಯುಲಿ (ಇ.) ದೆಸೆಯು (ಎ.)
೪. ಭಾವಿಸಿ। ಸಕಲರಱಿಯಲು ಸಂತವಿಟ್ಟಳುಯೆ (ಇ.) ೫. ರದೆಲ್ಲರು (ಜ.) ೬. ಲ. (ಇ.) ೭. ಜಱಿದಾ (ಇ.) ೮. ನು ಸರಿ (ಇ.); ೯ ಜಿಳಿ (ಗ.) ೧೦. ಬಱುದೆಗೆ (ಇ.)

ಅರಸನಱಿಯದ ತೆಱದಲಿದನಾ
ಚರಿಸುವುದು ನೀವೆನುತೆ ಭಾವಿಸೆ
ಮರುಳರೇ ನಿಮ್ಮಿಂದೆ ಬಲ್ಲವ[೧]ರಾರು[೧] ಧಾತ್ರಿಯಲಿ
ಇರುತಲಿರಿ ನಿಮ್ಮಿಚ್ಛೆ ಬಂದಾ
ಪರಿಯಲೆನು[೨]ತಾ ರಾಣಿ ತಾ[೨] ತ
ನ್ನರಮನೆಗೆ ಹೋದಳು ಕುಮಾರಿಯನೊಲಿದು ಮನ್ನಿಸುತೆ ||೬೩||

ನೋಡಿದಾ[೩]ಲಾವ[೩]ಕರು ಮಾತೆಯ
ಕೊಡೆಯಾಗಳೆ ಹೋಗಿ ದೊಡ್ಡಿತ
ಮಾಡಿ ಹೇಳಿದರಾದೊಡಂಜಿಕೆಯೇನು ನಮಗಿದಕೆ
ಬೇಡಬೇಕೆಂದೆನಗೆ ಶಿಕ್ಷೆಯ
ಮಾಡುವರೆ ಪರಸತಿಯೆ ಇದ[೪]ನೇ
ಕಾ[೪]ಡಿ ಹೋದಳು ರಾಣಿಯೆಂದಳು ಸಕಳೆಗಾ ಮಾಯೆ ||೬೪||

ತರುಣಿ ಕೇಳಾ ನಿನಗೆ ಪರಮೇ
ಶ್ವರನೆ ಪತಿಯಹನೆಂದು ನೃಪಕುಲ
ಗುರುವೆನಿಪಹಂಕಾರನಾ ಮಮಕಾರ ಭೂಪತಿಗೆ
ನಿರುತವಚನವ[೫]ನುಡಿದ ನೀನೀ[೫]
ಪರಿಯ[೬]ಗಾವಳಿಗಂಗೆ ಕೂರ್ತೊ[೬]ಡೆ
ಮರುಳುಗುಟ್ಟಿದೆ ಮಾಣ್ಬರೇ ಹೇಳೆಂದಳಾ ಸಕಳೆ ||೬೫||

ನೀಱೆ ಕೇಳಾ ನಾವು ಮಾಡಿದ
ದೂಱಿನೆಮ್ಮಯಿ ರಾಣಿ ಕೇಳಿದ
ಕಾರಣದಲಿದು ಜಾಱುತಲ್ಲದೆ ರಾಯ ಕೇಳಿದೊಡೆ
ಗಾಱುಹೆವು ನಾವಿನ್ನು ನೀತಿಯ
ಮೀಱದಿರಬೇಕಂತುಕಾರಣ
ಜೆಱೆ ಬೀಡಿಸಲಿರಲಿಯುಲ್ಲಮನೆಂದಳಾ ಸಕಳೆ ||೬೬||

೧. ರಿಲ್ಲ (ಜ.) ೨. ತಲಿ ಕರುಣಿಸಿಯೆ (ಅ.) ೩. ಮಾಸ (ಅ.) ೪. ಸು ದಾ (ಅ.) ೫. ನಾತಿಪತು ಈ (ಇ.); ನುಡಿದ ನಿನಗೀ (ಉ.) ೬. ಕೌಶಿಕ ಮಾನುಜಗೋತ್ರದ (ಜ.); ಕೌತುಕಗಳನು ಮಾಡಲು (ಇ.) ಲೀಕೌಶಿಕನೆ ಕೂರ್ತಡೆ

ಕೆಳದಿಯರು ತಮತಮಗೆ ಬುದ್ಧಿಯ
ಕಲಿಸುತಿರಲಾ ಮಾಯೆ ಚಿಂತಾ
ಕುಲತೆಯಿಂದಲಿ ಬೆಱಗುಹೊಡೆದಿರಲಾಗಳೈತಂದು
ಲಲನೆಗೇತಕೆ ದುಗುಡವಾರು
ನ್ಮ್ರಿಕೆಯನು ಮಾಡಿದರು ಹೇಳೆನು
ತೊಲಿದು ಕೇಳಿದನಂದು ಸಕಳೆಯನ[೧]ಲ್ಲಮನು ಬಳಿಕ[೧] || ೬೭ ||

ಅಣ್ಣ ಕೇಳುದಕದಲಿ ಮುಳುಗಿದ
ಸುಣ್ಣ ಕಲ್ಲಂತಾಗಿ ಕುದಿಯುತೆ
ಬ[೨]ಣ್ಣವಳಿದ[೨]ಳು ಮಾಯೆ ಕಾಣುತೆ ನಿನ್ನ ಬೇಟದಲಿ
ಕಣ್ಣುಗಾಣದೆ ಕಾಮನೇಱ[೩]ನ
ಹುಣ್ಣಿನಲಿ ಹೊರಳಿದೊಡೆಯಾ [೪]ಸ್ಥಿತಿ[೪]
ಹಣ್ಣಿ ಹಬ್ಬಿತು ಪುರದೊಳೆಂದಳು ಸಕಳೆಯಲ್ಲಮಗೆ || ೬೮ ||

ಒಡತಿ ಮುಂತಾದರಮನೆಯಲಿಹ
ಮಡದಿಯರು ತಾವಱಿದರೊಬ್ಬನೆ
ಪೊಡವಿಪಾಲಕನಱಿಯನಲ್ಲ[೫]ದೆ[೫] ನಮ್ಮ ಪುಣ್ಯದಲಿ
ತೊಡ[೬]ಗಿ[೬]ತೀ ಪರಿ ರಟ್ಟು ಸಾಕಿ
ನ್ನಡೆಯ ಮಾಡ್ಡೈ ನಿನಗೆ ಬೀಡಿನ
ಗುಡಿಯು ಹೊಱಗೊಂಡಡೆಯಲೆಂದಳು ಸಕಳೆಯಲ್ಲಮಗೆ || ೬೯ ||

ಮಾಯೆಯುಗಲಿದ ಬಳಿಕ ಭಾವಿಸೆ
ಕಾಯವುಂಟೇ ಪ್ರಾಣ[೭]ವಾಗಿಹ[೭]
[೭]ವಾಯು[೭] ನಡೆವುದೆ ಕಾಲು-[೮]ಕೈ-ಕಣ್ಣುಗಳು[೮] ಮಿಡುಕುವುವೇ
ಬಾಯ ನುಡಿ ಬೆವಹಾರ [೯]ಬೆಸರ್[೯]ಗ
ಛಾಯ[೧೦]ತವು ಬಳಿಕುಂಟೆ[೧೧]ಕೇಳಾ[೧೨]
ಸಾಯದಂತಿರೆ ಸತ್ತೆ ನಾನಕಟೆಂದನಲ್ಲಮನು || ೭೦ ||

೧. ಗುತಲಲ್ಲಮನು (ಜ.) ೨. ಸ್ಮಬಟ್ಟಿ (ಮು.) ೩. ಪ್ರಕೆ (ಜ.) ೪. ವು (ಜ.)
೫. ೦ (ಅ.) ೬. ಪಗಲಿದ (ಇ.) ೭. ಕಾಯ (ಜ.) ೮. ಕಣ್ಣುಗಳುಳಿಕಿ (ಜ.)
೯. [illegible] (ಗ.) ೧೦-೧೨ [illegible] (ಅ.); ೧೧-೧೨ [illegible] (ಜ.)

ಎಂದ ಮಾತಿನ ಮಱೆಯ ಬೆಡಗಿನ
ಸಂದಿಯಲಿ ಶಿವಕಾಮತತ್ತ್ವ
ದ್ವಂದ್ವವಿಪ್ಪುದನಱಿಯಲಱಿಯದೆಯೀಗಳೇನಾಯ್ತು
ಮುಂದೆ ಮಾಯೆಯ ನಿನ್ನ ರಿಣಸಂ
ಬಂಧವುಳ್ಳೊಡೆ ತಾ[1]ನೆ ಕೂಡುವು
ದೆ[2]ಂದು ಮೆಲ್ಲನೆ ಜಾಱಿ ನುಡಿದಳು ಸಕಳೆಯಲ್ಲಮಗೆ || ೭೧ ||

ಆಗಲೆನುತಲಿ ಬಳಿಕ ಪಾತ್ರದ
ಭೋಗದವರೊಳು ಮಧುಕನಾಥಗೆ
ಹೋಗಿ ಮಾಯಾಂಗನೆಯ ಲಾಸ್ಯದ ಕೇಳಿಯೂಳಿಗವ
ಜೋ[3]ಗಯಿಸುತಿರುತಿರ್ದ ಭಕ್ತಿಯ
ಭಾಗೆಯಲಿ ತಾನೊಲಿದ ಕಾರಣ
ವಾ[4]ಗಿರುವ ನಮ್ಮ[5]ಲ್ಲಮಪ್ರಭು ಲಿಂಗಲೀಲೆಯಲಿ || ೭೨ ||

Note.

**ಅಂತು ಗತಿ ೫ಕ್ಕಂ ಪದ ೨೪೪ಕ್ಕಂ ಮಂಗಳಂ**




೧. ನೆ ಕೂಡಿ: ತೆ (ಜ.) ೨. ಭೋ (ಉ.) ೩. ಗುಣಾರ್ಣವನ (ಇ.)

# ೬. ವಿಮಳೆ ಬಂದ ಗತಿ

**ಸೂಚನೆ:**

ಉಮೆಯು ನೇಮದಲಿಳೆಗೆ ಬಂದಾ
ವಿಮಳೆ [೧]ಪೇಳಲು ವಿಸ್ತರಿಸಿಯ
ಲ್ಲಮನ ಪರಿಯನು ಕೇಳುತಿ[೧]ರ್ದಳು ಮಾಯೆ ಮನ[೨]ವೊಲಿದು[೨]

ಸದಮಲಜ್ಞಾನಿಗಳು ಶಾಶ್ವತ
ಪದದಲನುಭಾವಿಗಳು ಕೇಳುವು
ದಿದಱೊಳಗೆ ಮೇಲೆನಿಸಿ ನಡೆ[೩]ವ ಕಥಾಕುತೂಹಲ[೩]ವ
ಮಧುಕನಾಥನ [೪]ವಾದ್ಯ[೪]ಮೇಳಾ
ಪದಲಿ ಮೆಱೆವಲ್ಲಮನ ಮಹಿಮೆಯ
ಹದನನಾದರದಿಂದಲೀ ಪ್ರಭುಲಿಂಗಲೀಲೆಯಲಿ ॥ ೧ ॥

ಧರಣಿತಳದೊಳು ನಿಚ್ಚ ಮಧುಕೇ
ಶ್ವರನನಭಿವಂದಿಸುತೆ ಕಾಮಾ
ತುರದಲಲ್ಲಮಗೋತು ಮಾಯಾದೇವಿಯಿರುತಿರಲು
ಹಿರಿದು ದಿನಗಳು ಹೋದುವೆನುತಲಿ
ಗಿರಿಜೆ ಮಾಯೆಯು ಹದನನಾಲಿಸಿ
ಕರೆದು [೫]ತರಲಿಕೆ ಕಳುಹಿ[೫]ದಳು ಬೆಸಸಿತ್ತು ವಿಮಳೆಯನು ॥ ೨ ॥

ತೊಳಪ ಕಂಗಳ ಕಾಂತಿ ಮಿಂಚಿನ
ಬಳಗವನು ಬೆಸಲಾಗುತಿರೆ ಕೋ
ಮಳದ ತನುವಿನ ಸಾರಸೌ[೬]ರಭವಿಡಿಯೆ ದೆಸೆಗಳಲಿ[೬]
ಸೆಳೆನಡುವಿನುನ್ನತಕುಚಂಗಳ
ಚೆಲುವಿಕೆಯ ದಿವ್ಯಾಂಗತೇಜದ
[೭]ಬಳವಿಯಿ[೭]ಂದಲಿ ಬಂದಳವನಿಗೆ ವಿಮಳೆ [೮]ವಿನಯದಲಿ[೮] ॥ ೩ ॥

೧. ವಿಸ್ತರಿಸಿದರೆ ಕಾರ್ಯ। ಕ್ರಮವನಱಿಸೆನೆನುತ್ತಲಿ (ಗ.) ೨. ಸೋತು (ಗ, ಜ.) ೩. ವಾ ಕಥನ ಕೌತುಕ (ಜ.) ೪. ದಿವ್ಯ (ಇ.) ೫. ತಾರೆನುತ್ತಟ್ಟ (ಇ.) ೬. ರಂಭದ ವಿಳಾಸದಲಿ (ಇ.); ರಂಭಗಳ ರಚನೆಗಳ (ಜ.) ೭. ಬೆಳಗಿನಿಂ (ಜ.) ೮. ಮನವೊಲಿದು (ಇ.)

ಬಂದು ಭರ[1]ವಸದಿಂದೆ[1] ಕನ್ನೆಯ
ಮಂದಿರವನೊಳಹೊಕ್ಕು ಭೋಂಕನೆ
ಮುಂದೆ ನಿಂದಿರೆ ಕ್ಷಣ[2]ತವೆ ಸತ್ಕರಿಸಿ[2] ಕುಳ್ಳಿರಿಸಿ
ಇಂದುಮುಖಿ ನೀನೆತ್ತಣಿಂದಲಿ
ಬಂದೆಯೇತಕೆ ನಿನ್ನ ಹೆಸರೇ
ನೆಂದು [3]ಮಾಯಾದೇವಿ ಕೇಳಿದಳೊಲಿದು ವಿಮಳೆಯನು[3] ॥ ೪ ॥

ಕೆಳದಿ ನಿನ್ನನು ನೋಡಲಂಬಿಕೆ
ಕಳುಹಿದರೆ ರಜತಾದ್ರಿಯಿಂದಾ
ನಿ[4]ಳಿದು[4] ಬಂದೆನು ವಿಮಳೆಯೆಂಬವಳಾನು ನೀನೀಗ
ಇಳೆಯೊಳುದಯಿಸಿ ಮ[5]ಱೆ[5]ದೆಯಾದೊಡೆ
ತಿಳುಹುವೆನು ನಾ ನಿನಗದೆಲ್ಲವ
ನೊಲಿದು ಕಾರಣಕಥನವನು ಕೇಳೆಂದಳಾ ವಿಮಳೆ ॥ ೫ ॥

ಏನು ಕಾರಣ ನಾನು ಹುಟ್ಟಿದೆ
ನೇನು ಕಾರಣ ನೀನು ಬಂದೆಯಿ
ದೇನು ಕಾರಣ ಗಿರಿಜೆ ಮಾಡಿದಳೆನಗೆ ಕರುಣವನು
ತಾನು ದೇವತೆಯಾನು ಮಾನಿಸಿ
ಯೇನು ಸಂಭಾವನೆಗೆ ಕಾರಣ
ಮಾನಿನಿಯೆ ಹೇಳೆನುತಲಿದ್ದಳು ವಿಮಳೆಗಾ ಮಾಯೆ ॥ ೬ ॥

೧. ದಲಿ ಬೇಗ (ಜ.)

೨. ತಾಕೆಯ ಹತ್ತೆ (ಜ.)

೩. ಕೇಳಿದಳಾಕೆಯನು ಮುಪದಿಂದಲಾ ಮಾಯೆ (ಇ.); ಬೆಸಗೊಳೆ ಮಾಯೆಗೆಂ
ದಳು ವಿಮಳೆ ನಿಜನೆಲೆಯ (ಜ.)

೪. ಳಿಗೆ (ಇ.)

೫. ಮೆ (ಉ, ಕೆ.)

ಹರನ ನಿ[೧]ಷ್ಕ[೧]ಳರೂಪನಲ್ಲವು
ನಿರ[೨]ವಿನಿಂದಲು ತಾನು ತಿಳಿವಾ
ತುರಕೆ[೨] ತನ್ನ ಗುಣಸ್ವರೂಪದ ಮಾಯೆ ನಿನ್ನನು
ಧರೆಗೆ ಕಳುಹಲು ನೀನು ತಡೆದಿರು
ತಿರಲು ನಿನ್ನನು ತಿ[೩]ಳುಹಿ[೩] ತರಲಿಕೆ
ಗಿರಿಜೆ ಬಳಿಕಿಂತೆನ್ನ ಕಳುಹಿದಳೆಂದಳಾ ವಿಮಳೆ ‖ ೭ ‖

ಬಳಿಕ ಮಾಯಾಂಗನೆಯ ಮನಸಿಗೆ
ತಿಳಿವು ತಿಣ್ಣನೆ ತಿ[೪]ಟ್ಟವಿಟ್ಟಿತು[೪]
ಹೊಳಹು ಹೊಮ್ಮಿತು ತನ್ನ ಪೂರ್ವದ ಕಥನಕಾರಣದ
ಬೆಳವಿಗೆಗೆ ಬೆ[೫]ದೆ[೫]ಯಾಯ್ತು ನೆನಹಿನ
ನೆಳಲು ಮಿಂಚಿದುದೊಳಗೊಳಗೆ ನಿ
ರ್ಮಳೆಯ ಸಂಗವು ಕಳೆಯದಿಹುದೇ ಮನದ [೬]ಮೈಲಿಗೆಯ[೬] ‖ ೮ ‖

ಹರಿಹರಬ್ರಹ್ಮಾದಿ ದೇವಾ
ಸುರರು ಜನನಕೆ ಬರಲು ಜಾತಿ
ಸ್ಮರಣೆಯಿಲ್ಲೆನಲಾವು ಸತಿಯರು ನಮ್ಮ ಪಾಡೇನು
ಪಿರಿದು ಪೂರ್ವಸ್ಥಿತಿಯ ಭಾವಿಸ
ಲರಿದು ನೀನದಱಿಂದಲಲ್ಲವು
ನಿರವನೆಲ್ಲವ ವಿರಚಿಸೆಂದಳು ವಿಮಳೆಗಾ ಮಾಯೆ ‖ ೯ ‖

ಆದೊಡಾಲಿಸುವೊಂದು ಬುದ್ಧಿಯ
ಲಾದರಿಸಿ ಕೇಳಭವ ತನ್ನ ವಿ
ನೋದದಿಂದಾ ಗಿರಿಜೆಗಱುಹಿದ ಕಥನ[೭]ಕೌತುಕ[೭]ವ
ಆದಿಯಲಿ [೮]ಸಾಕ್ಷಾತು[೮]ವಾಗಿಯೆ
ವೇದಿಸಿ[೯]ಯಲಿರುತಿರ್ದರ[೧೦]ಮು[೧೦]ಲಗು
ಣಾಧಿಕರ್ದ ಸುಜ್ಞಾನಿನಿರಹಂಕಾರರೆಂಬವರು ‖ ೧೦ ‖

೧. ಪರ್ಗ (ಗ, ಜ.) ೨. ಸ ನೀ ತಿಳಿಯಲಿಕೆ ಭರದಾ। ತುರದ (ಜ.); ಲಿಕಾತನಪರಿಯ ನಱಿಯಲು। ಭರದಿ (ಗ.) ೩. ಳಿದು (ಅ.); ಕರೆದು (ಇ.) ೪. ಳಿವುತಿರ್ಪುದು (ಜ.) ೫. ಳೆ (ಜ.) ೬. ಕಲ್ಮಷದ (ಜ.) ೭. ಕಾರಣ (ಇ, ಉ, ಏ.) ೮. ಪ್ರತ್ಯಕ್ಷ (ಜ.); ನಿತ್ಯಂತ (ಇ.) ೯. ಹೊಳಿರುತಿಹರು ಜ್ಞಾನಾಂ। ಬೋಧಿಗಳು (ಇ.) ೧೦. ಖಿ (ಜ.)

ಒಳ್ಳಿತಾಗಿ[೧]ಯೆ[೧] ಚೆಲುವ ಬನವಸೆ
ಬಳ್ಳಿಗಾವಿಯ ಭಕ್ತಿಭಾವುಕ
ರೆಲ್ಲ[೨]ರೊಳಗಭಿವಂದ್ಯನಾಗಿ ಸಮಸ್ತ[೨]ಭಾಗ್ಯದಲಿ
ಬಲ್ಲಿದನು ತಾನೆನಿಸಿ ತನಗೊಂ
ದಿಲ್ಲವೆನುತಲಿ ಪುತ್ರಕಾಮ್ಯದ
ಭುಲ್ಲವಣೆಯಲಿ ಬಳಿಕ ನಿರಹಂಕಾರನಿಂತೆಂದ ॥ ೧೧ ॥

ದಾನವಿಲ್ಲದ [೩]ಧರ್ಮ ವಿಷಯ[೩]
ಧ್ಯಾನವಿಲ್ಲದ ತಪವು ಜೀವ
ಸ್ಥಾನ[೪]ದನುಸಂಧಾನವಿಲ್ಲದ ಯೋಗದಭ್ಯಾಸ[೪]
ಜ್ಞಾನವಿಲ್ಲದ [೫]ಸಿದ್ಧಿ[೫] ವರಸಂ
ತಾನವಿಲ್ಲದ ಬಾಳ್ಕೆಯಲಿ ಸುಖ
ವೇನು ದೊರಕುವುದೆನುತೆ ನಿರಹಂಕಾರ ಚಿಂತಿಸಿದ ॥ ೧೨ ॥

ಲೌಕಿಕರು ಕಾಮಿಸುವರಿಹಪರ
ಲೋಕವನು ತಮಗೀವ ಪುತ್ರನ
ನೇಕೆಯಾ [೬]ಮಾಯಾ[೬]ಪ್ರಪಂಚಿನ ಬಳಕೆಗಳು ನಮಗೆ
ಏಕವೆನಿಸುವ ನಿಜವನೀವ ನಿ
ರಾಕುಳದ ಸುಕುಮಾರನಾಗಲಿ
ಬೇಕು ನಮಗೆಂದೆನುತೆ ನಿರಹಂಕಾರ ಚಿಂತಿಸಿದ ॥ ೧೩ ॥

ಉಪವಿಸಲು ಸತಿಸಂಗ[೭]ರಸ[೭]ದಲಿ
ಜಪದ ಜಂಜಡ ಜೋಕೆಯಲಿ ಮೆಣ್
ತಪದ ತಾಮಸಭಾವದಲಿ ಮಾಯಾಪ್ರಪಂಚಿನಲಿ
ವಿಪುಲ[೮]ವಿಜ್ಞಾನಾಕೃತಿಯ ನಿ
ಶ್ಚ[೮]ಪರ್ಳ[೯]ನಾದ[೯] ಕುಮಾರನಿಲ್ಲೆನು
ತಪರಿಮಿತದೆಣಿಕೆಗಳ ನಿರಹಂಕಾರ ಚಿಂತಿಸಿದ ॥ ೧೪ ॥

೧. ಹ (ಕ.) ೨. ರಿಗೆ ಮಿಗಿಲಧಿಕವಾಗಿಹ ಸಕಲ(ಇ.) ೩. ಧನವು ಶಿವಪಪ(ಇ.); ವಿತ್ತ ಧರ್ಮಪ (ಜ.) ೪. ವಿಲ್ಲದ ದೇಹ ಮನವಳಿಯದನ ಗುಣಯೋಗ (ಇ.) ೫. ಭಕ್ತಿ (ಜ.) ೬. ಜಲ (ಕ,ಮು.) ೭. ನಾನಾ (ಎ,ಗ,ಜ.) ೮. ಲಿಂಗಾಕಾರ ಕೃತಿಯುಳಿ। ಚ (ಜ.) ೯. ನಹ ಸು (ಬ.)

ಆದೊಡಂತಃಕರಣವೃತ್ತಿಯ
ಹಾದಿಯನು ಪಲ್ಲಟಿಸಿ ಮೆಲ್ಲನೆ
ನಾದ-ಬಿಂದು-ಕಳಾಪ್ರ[೧]ಬಂಧದ[೧] ಬಲೆಗಳಿಲಿ ನುಸುಳಿ
ಆದರಿಸಿಯೆ-ನಗಜಲಪದವನು
ವೇ[೨]ದಿಸುವ ಸತ್ಪುತ್ರನೊಬ್ಬನ
ಸಾಧಿಸುವೆನೆಂದೆನುತೆ ನಿರಹಂಕಾರನನುಗೆಯ್ದ || ೧೫ ||

ಸತಿಸಹಿತ ಸಂಕಲ್ಪಸಾಧನ
ಗತಿಯ ಮೇಳಾಪದಲಿ ನೆಱೆ ನಿ
ಶ್ಚಿತವ ಮಾಡಿ ಮನಸ್ಸಿ[೩]ನೇಕೋಭಾ[೩]ವನಿಷ್ಠೆಯಲಿ
ಪ್ರತಿಯಿಡುವ ಪಂಚೇಂದ್ರಿಯಂಗಳ
ನತಿಗಳೆವ ನಂದನನ ಬಯಕೆಯ
ಮತಿಗಳಲಿ ಸುಜ್ಞಾನಿನಿರಹಂಕಾರರೊಪ್ಪಿದರು || ೧೬ ||

ಸಂತೆಯೊಳಗುಂಟೇ [೪]ಸಮಾಧಿ[೫]ಯ[೬]
ಸಂತತಾನಂದದ ಸುಖೋದಯ
ವೆಂತು ದೊರಕುವುದೆನುತೆ ಮಂದಿಯ ಕಳವಳವ ತೊಲಗಿ
ಸಂತತಿಯ ಸಂಕಲ್ಪದಿಂದೇ
ಕಾಂತವಾಸವ ಹೊಕ್ಕು ಮಿಗೆ ವಿ
ಶ್ರಾಂತಿಯಲಿ ಸುಜ್ಞಾನಿನಿರಹಂಕಾರರೊಪ್ಪಿದರು || ೧೭ ||

ಅನುಗೊಳಿಸಲಳವಟ್ಟ ಪದ್ಮಾ
ಸನದ ಹಸ್ತನ್ಯಸ್ತಲಿಂಗದ
ನೆನಹು ನೆಱೆ ಕರಿಗಟ್ಟಿದಂಗದ ನಟ್ಟ ದೃಷ್ಟಿಗಳ
ಮನದ ಮೇಳ[೭]ಗಳೊಳ[೭]ಗೆ ಸಿ[೮]ಕ್ಕ[೮]ದ
ಘನತರ ಪ್ರಾಣಾನಿಲನ ಸಾ
ಧನಸಮಾಧಿವಿಳಾಸದಲಿ ದಂಪತಿಗಳೊಪ್ಪಿದರು || ೧೮ ||

೧. ಪಂಚಿನ (ಗ.) ೨. ಭೇ (ಇ, ಜ.) ೩. ನೊಳು ನಿರ್ಭಾ (ಜ.) ೪-.೫ ಸುಬೋಧೆ (ಇ, ಗ.); ಸುಬೋಧ (ಜ.) ೫-೬. ಯು (ಇ.) ೭. ದ ವೊನೆ (ಉ.) ೮. ಕ್ಕ (ಎ, ಕ, ಜ.)

ಹೊಳಿಹೋಯಿತ್ತನ್ನಪಾನದ
ಮೇಲಣಿಚ್ಛೆಯನೇಕ[೧]ಪಜಾಯ[೧]ಲಿ
ಹಾಳು ಬಿದ್ದುವು ಜಾಗ್ರ-ಸ್ವಪ್ನ-ಸುಷುಪ್ತಿಗಳ ಬಲುಹು
ಕೋಳುಹೋಯಿತು ಕರಣಗಳ ಕಾ
ಲಾಳು [೨]ಬೆಂಬಟ್ಟಿಯು[೨] ಸುಷುಮ್ನಾ
ನಾಳದಲಿ ದಂಪತಿಗ[೩]ಳನುಭವವಿರೆ[೩] ಸಮಾಧಿಯಲಿ ॥ ೧೯ ॥

ಆ ಸಮಾಧಿಯ ಭಾವದಲಿ ನವ
ಮಾಸ ಪೂರಿತವಾಗಿ ನೆನಹಿನ
ನೇಸಱಿನ ಬಲುಬಿಸಿಲು ಬೆಳಗಿಮುವಂತರಂಗದಲಿ
ಲೇಸೆನಿಸಿ ಕಾಣಿಸಿದುದೊಯ್ಯನೆ
ಭಾಸುರಶ್ರೀಮೂರ್ತಿಯೊಂದು ವಿ
ಳಾಸ ನಿರಹಂಕಾರಸುಜ್ಞಾನಿಗಳ ಮನದೊಳಗೆ ॥ ೨೦ ॥

ಕಂಡರೇಕೋಭಾವದ[೪]ಲಿ ನಿಷ್[೪]
ಖಂಡ ಮಹಿಮನನಖಿಳಭವಭಯ
ಖಂಡನ[೫]ನನಾದ್ಯಂತರಹಿತನನಪ್ರಮೇಯ[೫]ನನು
ಚಂಡಕರ[೬]ಕೋಟಿ[೭]ಪ್ರಕಾಶೋ
ದ್ದಂಡಮಯ[೮]ನ ಸುಹೃನ್ಮನೋಂಬುಜ[೯]
ಮಂಡಿತನನಾ ದಂಪತಿಗಳೊಲಿದಂತರಂಗದಲಿ ॥ ೨೧ ॥

೧. ದಿನದ (ಇ, ಖ.)

೨. ಗಳು ಬೆಂಬಿಡೆ (ಉ)

೩. ಳಿರ್ದರು ನಿಜ (ಇ.)

೪. ಲ್ಲಿಯು (ಉ.); ಲಿಚಿದ (ಇ.)

೫. ನು ತೆರಹಿಲ್ಲದುಪಮೆಗೆ ಬಾರದಭವ (ಇ.)

೬–೯. ಕರಕೋಟಿಗಳಿಗುದ್ದಂಡಪ್ರಭೆಯನನಂತರೂಪನ (ಜ.)

೬–೭. ತೇಜ (ಇ.)

೮–೯. ಹೃತ್ಕಮಲಪೀಠದಿ (ಇ.)

ಕರಣಗಳು ಕಾಲಿಡಲು ನೇತ್ರದ
ಬಿರಿಮುಗುಳು ಬಿಚ್ಚಿದುವು ನಾಡಿ[1]ಯು
ಹೊರಳಿ ಹುರಿಗೊಳಿಸಿದುವು ಚೇಷ್ಟಿಸಿ[1] ಬಾಹಿರಂಗದಲಿ
ಅರಳಿದುದು ಮನ[2]ದಱಿಕೆ[2] ಭೋಂಕನೆ
ಹೊರೆಯಲಿಹ ಬಾಲಕನ ಕಂಡರು
ಪರಮನಿರಹಂಕಾರಸುಜ್ಞಾನಿಗಳು ಹರುಷದಲಿ || ೨೨ ||

ಬಿಸಿಲ [3]ಬೇಱೊಟ್ಟೆಳೆಗಿಳಿದು ಶೋ
ಭಿಸು[3]ವ ಸೂರ್ಯನೊ ಹಿಮವನತಿಗಳೆ
ದೆಸೆವ ಚಂದ್ರನೊ ನೆಟ್ಟನಾಶ್ರಿತಭಕ್ತಗುಣವಳಿದು
ವಿಸು[4]ಗುವಗ್ನಿ[4]ಯೊ ಪೇಳೆನಲು ರಂ
ಜಿಸುವ [5]ತೇಜೋಮಯದ[5] ಬಾಲಕ
ನೆಸೆದನಾ ಸುಜ್ಞಾನಿನಿರಹಂಕಾರರಿದಿರಿನಲಿ || ೨೩ ||

ಹೊಗಳಿ ಹೋರುವ ವೇದಶಾಸ್ತ್ರದ
ಬಗೆಗೆ ಬಾರದ ಹರಿವಿರಿಂಚಾ
ದಿಗಳು ಸಾ[6]ಧಿಸಿ ಕಾಣಲಱಿಯದ ಪರಮಮುನಿನಿಕರ
ಮೊಗಸಿ ಮಾಡುವ ತಪಕೆ ನಿಲುಕದ
ಸಗುಣನಿರ್ಗುಣಮೂರ್ತಿಯಲ್ಲದ
ವಿಗಡ-ಶಿಶುವನು ಕಂಡರಾ ದಂಪತಿಗಳಳ್ತಿಯಲಿ || ೨೪ ||

ಸುರರು ಹೂಮಳೆಗಱೆದರಾಗಳು
ನೆರೆದು ನುಡಿದುವು ದೇವದುಂದುಭಿ
ಪರಮಮುನಿಜನದಂತರಂಗದಲಾದುದುತ್ಸಾಹ
ಕೊರಡುಗಳು ಕೊನರಿದುವು ಕಱೆಯದ
ಬರಡುಗಳು ಹಯನನಾದುವೆಮ್ಮಯೆ
ಗುರು ಗುಹೇಶ್ವರನಿಳೆಗೆ ರೂ[7]ಹಿಸಿ [8]ಮೆಱೆ[8]ದ ಕತದಿಂದೆ || ೨೫ ||

೧. ಯು। ಸರಿಗೊಳಿಸಿದುದು ಚೇಷ್ಟಿಸಿಯು ತಾ(ಜ.) ೨. ದೆಱಿಕ(ಉ.); ವಱಿದು (ಜ.) ೩. ಬಿಟ್ಟೆಳೆಗಿಳಿದು ಶೋಭಿಸು। ತೆಸೆ (ಇ, ಎ, ಜ.) ೪. ಪ ವಹ್ನಿ(ಇ, ಉ) ೫. ಪ। ಬೊಮ್ಮದ ಸು(ಜ.) ೬. ಸಂ (ಜ.) ೭. ಮೋ(ಮ.) ೮. ಬಂ (ಇ, ಕ, ಜ.)

ಭಾಪು ಘನಗುರುಲಿಂಗಮೂರ್ತಿಯೆ
ಭಾಪು ಜಂಗಮಲಿಂಗಮೂರ್ತಿಯೆ
ಭಾಪು ಶಿವಲಿಂಗ [1]ಪ್ರಕಾಶ[1]ವ್ಯೋಮಮೂರುತಿಯೇ
ಭಾಪುರೇ ಎಂದೆನುತಲಾ ಚಿ
ದ್ರೂಪಶಿಶುವನು ಕಂಡು ಹಿಗ್ಗಿದ
ನಾ ಪುರಾತನನೆನಿಪ ನಿರಹಂಕಾರನಕ್ತಿಯಲಿ || ೩೬ ||

ಹಾರವಿಸಿ [2]ನಲಿ[2]ದೆತ್ತೆ ಕಿಂಚಿತು
ಭಾರವಿಲ್ಲದೆ ಕೈಗೆ ಸೋಂಕದೆ
ಸಾರತೇಜಃಪುಂಜತನು ಶಿಶು ತನ್ನ ಕೈಯೊಳಗೆ
ಪೂರವಿಸಿಕೊಂಡಿರಲು ಬಳಿಕಾ
ನಾರಿ ವಿಸ್ಮಯವಾಗಿ ನಿರಹಂ
ಕಾರನನು ಕೇಳಿದಳಿದೇನೆನುತಾತ್ಮಜನ ಪರಿಯ || ೩೭ ||

ಈತನಾರೆಂಬೊಡೆ ಸದಾ ಸಾ
ಕ್ಷಾತವವನಿಜಲಾನಲಾನಿಲ
ಭೂತತತ್ವವಿದೂರ ಪರಮಾನಂದರಸಭರಿತ
ಜಾತನಲ್ಲ ವಿಚಾರಿಸುವೊಡೆಯ
ಜಾತನ[3]ಲ್ಲೆಂದೆನುತಲು[3]ಪಮಾ
ತೀತ[4]ನೀ ಶಿಶುವೆಂದ ನಿರಹಂಕಾರ ನಿಜಸತಿಗೆ[4] || ೩೮ ||

ಬಲ್ಲೊಡೀ ಶಿಶುವೇತಜ[5]ೊಳಗಿಹ
ನಲ್ಲ ಹೊಱಗಹನಲ್ಲ ಭಾವಿಸ
ಲಿಲ್ಲದಿರುತಿಹನಲ್ಲವೆನುತಾ ತಂದೆತಾಯಿಗಳು
ಎಲ್ಲ ಜಾಡ್ಯದ [5]ಜಂಜಡ[5]ಂಗಳ
ನಲ್ಲವೆನಿಸುವ ಬಾಲಕಗೆ ಬಳಿ
ಕಲ್ಲಮಪ್ರಭುವೆಂದು [6]ಹೆಸರನು[6] [7]ಕೊಟ್ಟ[7]ರಕ್ತಿಯಲಿ || ೩೯ ||

೧. ಪ್ರಸಾದ (ಮು.); ಸ್ವರೂಪ (ಇ, ಒ) ೨. ಹಿಡಿ (ಇ.) ೩ ಲ್ಲಿಪ ಖಂಡನು (ಇ.)
೪. ನೆನಿಸುವೆನೆಂದು ನಿರಹಂಕಾರ ಸತಿಗೊರೆದ (ಇ.) ೫. ಭಂಜನ (ಜ.) ೬. ನಾ
ಮವ (ಅ.) ೭. ಕರೆದ (ಇ.); ಇಟ್ಟ (ಜ.)

ಗಳಿಗೆ ಸಂಖ್ಯೆಗೆ ನುಡಿಯ ಕಲಿತನು
ಗಳಿಗೆ ಸಂಖ್ಯೆಗೆ ನಡೆಯ ಕಲಿತನು
ಗಳಿಗೆ ಸಂಖ್ಯೆಗೆ ಬಳೆದನವರ ಮನೋ[೧]ರಥದ ಕೂಡೆ[೧]
ಗಳಿಗೆ ಸಂಖ್ಯೆಗೆ ಬಾಲಲೀಲೆಯ
ನಳವಡಿಸಿ ಕೊಂಡಾಡುತಿಹ ಮ
ಕ್ಕಳಲಿ [೨]ಮೆಚ್ಚಿ[೨]ಯುತಲಿರ್ದನಲ್ಲವು ತನ್ನ ಲೀಲೆಯಲಿ ‖ ೩೦ ‖

ಚ[೩]ಂಡಭ[೪]ವದಲಿ ಬಗೆದು ಭಾವಿಸಿ[೪]
ಖಂಡವಿಧಿಯಲಿ ಸುಖವ ಬಯಸುವ
ಭಂಡ ಭವಿ ಭರದಿಂದ ಭೂಮಿ ಸ್ವರ್ಗವನು ತಾಗಿ
ಕಂಡು ಉಂಡೆಡೆ[೫]ಯಾಡುವನು ಮೂ[೫]
ಚಂಡಿಯೀ ಪರಿಯೆನುತಲಾ ಹೊಡೆ
ಚಂಡನಲ್ಲವುನಾಡುತಿರ್ದನು ಬಾಲಲೀಲೆಯಲಿ ‖ ೩೧ ‖

ವಾಯುಸೂತ್ರದಲಿಂದುರವಿಚ
ಕ್ರಾಯುತಂಗಳು ತಿರುಗುತಿರ್ದೊಡೆ
ಬೀಯುವಹುವವ ನಿಲಿಸಲಜ್ಞಿಯದ ಭವಿಗಳಾಯುಷ್ಯ
ಈಯವಸ್ಥೆಯಲೆನುತೆ ಶಿಕ್ಷೋ
ಪಾಯದಿಂದಿಕ್ಕೈಯಲಾ ಪ್ರಭು
ರಾಯ ಚಕ್ರವ ತಿರುಹುತಿರ್ದನು ಬಾಲಲೀಲೆಯಲಿ ‖ ೩೨ ‖

ಆತನೋದದ ವೇದಶಾಸ್ತ್ರಸ
ಮೇತವಾತನ ನಾಲಗೆಯ ತುದಿ
ಗಾತು ಬೆಸನನು ಬೇಡುತಿಹುವಾತನ ಪದಾಬ್ಜದಲಿ
ಓತು ಸತ್ಕೃತಿನಿಕರಗಳು ಕೈ
ಯಾತು ನೇಮವ ಹಾರುತಿಪ್ಪವು
ಭೂತಳದೊಳಲ್ಲಮನ ಬೆಳವಿಗೆ [೬]ಬೆಳಸಿತಚ್ಚರಿಯಾ[೬] ‖ ೩೩ ‖

೧. ಸುರಾಗದಲಿ(ಗ.) ೨. ಬೆಳೆ(ಜ.) ೩. ಭಂ(ಉ) ೪. ರದಲಿಭಾವಿಸಲು ನವ (ಗ.)
೫. ಯಲ್ಲಿಯಾಡುವ (ಖ.); ಯಾಡಿನೋಡುವ (ಇ.) ೬. ಲಿರುತ(ಜ.) ೭. ಶಾಸ್ತ್ರ
ಶ್ರುತಿಯೆ। ಲ್ಲಾತನೊಲವನು ಹಾರುತಿರ್ದವು। ಆತು ಬೆಸನನು ಬೇಡುತಿರ್ದವು
ಪ್ರ. ಲಿ. ೫ [ ಸಕಲವಿದ್ಯೆಗಳು (ಇ.) ೮. ಬೀರಿತಾಶ್ಚರ್ಯ (ಗ, ಜ.)

ರೂಢಿಗಚ್ಚರಿಯಾದ ಬಾಲ
ಕ್ರೀಡೆಗಕ್ಕಜಗೊಂಡು ಕಂಡವ
ರಾಡಿಕೊಳುತಿರೆ [1]ಕಣ್ಣಿಗಿಸುಱಿಹುದೆಂದು ಮೋಹ[1]ದಲಿ
ನೋಡಿ ತೂಪಿಱಿದಕ್ಕಱಿಂ ಕೊಂ
ಡಾಡಿ ಕ[2]ರ[2]ಸಂತೋಷದಲಿ ಕೈ
ಗೂಡಿ ಬಣ್ಣಿಸಿ ಜನನಿಜನಕರು ಕರೆದರಲ್ಲಮನ ॥ ೩೪ ॥

ವಿಮಲಮುನಿಗಳ ವರಸಮಾಧಿಗೆ
ಸಮಯವಿಲ್ಲದ ದೇವ ಬಾರೈ
ದ್ಯುಮಣಿಶಿಶಿರಕೋಟಿತೇಜೋಮೂರ್ತಿಮಯ ಬಾರೈ
ಕಮಲಸಂಭವ–ವಿಷ್ಣು ಮೊದಲಾ
ದಮರರಱಿವಿಗೆ ನಿಲುಕದಿಹ ನಿರು
ಪಮನೆ ಬಾರೆನುತವರು ಬಣ್ಣಿಸಿ ಕರೆದರಲ್ಲಮನ ॥ ೩೫ ॥

ಹರುಷದಿಂದಲಿ ಜನನಿಜನಕರು
ಕರೆಯುತಿರಲಾ ಬಾಲಭಾವದ
ಪರಿಯನಾಗಳೆ ಬಿಸುಟು ಸಾಕೆ[3]ನ್ನೆನುತೆ ನಡೆತ[3]ಂದು
ವರಗುರುಶ್ರೀಮೂರ್ತಿಯಾಗಿಯೆ
ಪರಮತತ್ವನಿರೂಪಣೆಯ ವಿ
ಸ್ತರಿಸಲುದ್ಯೋಗಿಸಿದನಲ್ಲಮ ತನ್ನ ಲೀಲೆಯಲಿ ॥ ೩೬ ॥

ಕೇಳಿರೇ ನಿಮ್ಮಯ ಸಮಾಧಿಯ
ಕೇಳಿಗೋಸುಗವಾನು [4]ರೂಹಿ[4]ಸಿ
ಬಾಲಭಾವ[5]ಚ್ಛ[5]ವಿಯ ತೋಱಿದೆ[6]ನಿಸ್ನ[6] ಸಾಕೆ[7]ನಗೆ[7]
ಲೀಲೆಯಿಂದಾನೆನ್ನ ನಿಜದ ನಿ
ರಾಳನಿಶ್ಚಲನಿತ್ಯಸುಖಸ
ಮ್ಮೇಳದಲಿ ನಾನಾಡುತಿಹೆನೆನುತಿರ್ದನಲ್ಲಮನು ॥ ೩೭ ॥

೧. ತಂದೆ ತಾಯ್ಗಳು ಕಂಡು ಹರುಷ (ಇ.) ೨. ಡು (ಬ.) ೩. ಸ್ನೇಕೆ ನಮಗೆ (ಇ.) ೪. ಭಾವಿ (ಉ.) ೫. ದ ಸ (ಜ.) ; ದ ರೂಪ (ಬ.) ೬. ನಿಮಗೆ (ಜ.) ೭. ನುತ (ಇ.)

ಆವ [೧]ತೆಱದಿ[೧]ಂದಾದೊಡೆಯು[೨]ಮುತ್
ಸೇವೆಗೊಲಿದೀ ಪರಿಯಲಾ ಪರ
ದೈವವೇ[೨] ಪ್ರತ್ಯಕ್ಷವಾಗಿಯೆ ತೋಱುಯಗಲಿ[೩]ದೊಡೆ[೩]
ನಾವು ನಮ್ಮಯೆ ಸದುಗತಿಯ ಸಂ
ಭಾವಿಸುವೆವೆಂದೆನುತಲಲ್ಲಮ
ದೇವಗೊಲಿದಾ ಜನನಿಜನಕರು ನುಡಿದ[೪]ರಭಿಮತವ[೪] ॥ ೩೮ ॥

ಬಗೆಯೆ ನಿರಹಂಕಾರಸುಜ್ಞಾ
ನಿಗಳ ಮೇಳವನೊಲ್ಲ[೫]ದಾ[೫] ಪ್ರಭು
ಪಗಲಿ ತಾನಿರಬಲ್ಲನೇ ಬೇಕಾದೊಡೀ ಹದನ
ನಿಗಮದಲಿ ಶಾಸ್ತ್ರದಲಿಯನು[೬]ಭಾ
ವಿಗಳ ನುಡಿಯಲಿ[೬] ಕೇಳುವುದು ನಾ
ನಗಲೆ ನಿಮ್ಮವನೆಂದನಲ್ಲಮ ಜನನಿ-ಜನಕರಿಗೆ ॥ ೩೯ ॥

ಬಳಿಕ ತತ್ವವಿವೇಕವೆಲ್ಲವ
ನಳವಡಿಸಿ ಕೊ[೭]ಟ್ಟೈಕ್ಯಭಾವ[೭]
ಸ್ಥಳವ [೮]ಕಾಣಿ[೮]ಸಿ ದೃಷ್ಟದಲಿ ಪರಿಪೂರ್ಣಮಯ[೯]ರೆ[೯]ನಿಸಿ
ಇಳೆಯೊಳಾ ಸುಜ್ಞಾನಿದೇವಿಗೆ
ನಲಿದು ನಿರಹಂಕಾರದೇವಗೆ
ತಿಳುಹಿ ನಿತ್ಯವನಿತ್ತನಲ್ಲಮ [೧೦]ತನ್ನ[೧೦] ಲೀಲೆಯಲಿ ॥ ೪೦ ॥

ಪಡೆವೊಡೀ ಪರಿ ಬೇಹ ಮಕ್ಕಳ
ಪಡೆದು ಪರಿಣಮಿಸುವುದು [೧೧]ತಪ[೧೧]ದಲಿ
ನಡೆವುದೀ ಪರಿ ನಿಜಸಮಾಧಿಯ ನಿಲವ ನಿಲುಕುವುದು
ಹಿಡಿವೊಡೀ ಪರಿ ವಾಯು-ಮನಗಳ
ಹಿಡಿದು ಸುಖದಲಿ ಸುಳಿವುದೆನುತಲಿ
ಪೊಡವಿ ನಿರಹಂಕಾರ-ಸುಜ್ಞಾನಿಗಳ ಪೊಗಳಿದುದು ॥ ೪೧ ॥

೧. ಪರಿಯಿಂ (ಇ.) ೨. ಸುಖ। ಸೇವೆಗೋಸುಗವೊಲಿದು ಬಂದಾ। ದೇವನೇ (ಇ.) ೩. ರಪೆ (ಉ) ೪. ರೊಲವಿನಲಿ (ಜ.) ೫. ದೇಂ (ಉ.) ೬. ಭವ। ವಗಲದನು ವನು (ಇ.) ೭. ಟ್ಟೊಲವಿನಿಂದಲಿ (ಇ.) ೮. ಸಱುಹಿ (ಇ.) ೯. ನೆ (ಇ. ಗ.) ೧೦. ಲಿಂಗ (ಅ, ಇ, ಕ, ಗ.) ೧೧. ಪಥ (ಇ.)

ಅದು ನಿಮಿತ್ತದಲ್ಲಮನ ಕರು
ಣದಲಿ ಪಡೆವುದು ಸಚ್ಚಿದಾನಂ
ದದ ನಿರಾಕುಳ ನಿತ್ಯಪದವನು ಗಿರಿಜೆ ಕೇಳೆಂದು
ಮುದದಲೀಶ್ವರನೊರೆದನಂದಾ
ನದನು ಕೇಳಿದು ಬಲ್ಲೆನೆಂದಾ
ಹದನ ಮಾಯೆಗೆ ಹೇಳುತಿರ್ದಳು ವಿಮಳೆ ವಿ[೧]ಸ್ತರಿಸಿ[೧] ‖ ೪೨ ‖

ಎಳ್ಳಿನೊಳಗೆ[೨]ಂತೆ[೨]ಣ್ಣೆಯಿಹ ಪರಿ
ಯಲ್ಲಿ ಕಾಷ್ಟದೊಳನಲನಿಹ ಪರಿ
ಯಲ್ಲಿ ಹಾಲೊಳು ಬೆಣ್ಣೆಯೆಂತಿಹುದಂತೆ ಭಾವಿ[೩]ಸಲು[೩]
ಬಲ್ಲೊಡೆಮ್ಮಯ ದೇವನಿರುತಿಹ
ನೆಲ್ಲರೆಡೆಗಳಲನುವ[೪]ನಱಿದೊಡೆ
ಯ[೪]ಲ್ಲಮಪ್ರಭು ಗುರು ಗುಹೇಶ್ವರಲಿಂಗಲೀಲೆಯಲಿ ‖ ೪೩ ‖

**ಅಂತು ಗತಿ ೬ಕ್ಕಂ ಪದ ೨೮೬ಕ್ಕಂ ಮಂಗಳಂ**

೧. ನಯುಪಲಿ (ಗ.) ೨. ಯು ಎ (ಇ.) ೩. ಪ್ರದು (ಇ.) ೪. ಬಲ್ಲನಾವ (ಇ.)

# ೭. ಪ್ರಭು ಮಾಯೆಗೆ ಸಿಕ್ಕದೆ ಹೋದ ಗತಿ

**ಸೂಚನೆ:**

ವಿಮಳೆ ವಿಸ್ತರಿಸಿದೊಡೆ ಕಾರ್ಯ
ಕ್ರಮವನಾಲಿಸಿ ಮಾಯೆ ತಾನ
ಲ್ಲಮನ ಸಂಗಱಿದಿಹೆಗೆಸೆಸಲು ಹೋದನು ನಿಜವ ತೋಱಿಸದೆ

ಮಾಯೆಯನು ಮನ್ನಿಸದೆ ನೂಕಿ ನಿ
ರಾಯಸದಲಾನಂದಮೂರ್ತಿ
ಶ್ರೀಯನಾಳುವ ಲಿಂಗಸಂಗಿಗಳೆಲ್ಲ ಕೇಳುವುದು
ಮಾಯೆ ಮೋಹಿಸಿ ಮುಟ್ಟಬಂದ ವಿ
ಡಾಯವನು ಮುಱಿದಲ್ಲಮಪ್ರಭು
ರಾಯನಾಡುತಲಿರ್ದ ಪರಿಯನು ಲಿಂಗಲೀಲೆಯಲಿ ‖ ೧ ‖

ಗಿರಿಜೆಗೀಶ್ವರನೊರೆ[2]ದೊಡದನಾ
ದರಿಸಿ[2] ಬಂದಾ ವಿಮಳೆ ನೆಱೆ[1] ವಿ
ಸ್ತರಿಸಿ ಹೇಳಲು ಕೇಳಿಯಲ್ಲಮನಾದೊಡಿನ್ನೆಮಗೆ
ದೊರಕಿ ನಮ್ಮಿಷ್ಟಾರ್ಥವನು ಸ
ತ್ಕರಿಸಿ ಸಲಿಸಲು [3]ಸುಲಭ[3]ದಲಿ ಗೋ
ಚ[4]ರವೆನಿಸಿ ಕಾಣಿಸುವನೇ[4] ಹೇಳೆಂದಳಾ ಮಾಯೆ ‖ ೨ ‖

ಹರನ ಭಕ್ತಿಯ ಮಾಡಿದೊಡೆ ಗೋ
ಚರಿಸಿ ತೋಱುವನಲ್ಲಮಪ್ರಭು
ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದಾ
[5]ಪರಮನೋರಥ[5]ಸಿದ್ಧಿಯನು ಪತಿ
ಕರಿಸಿ ಪಡೆವು[6]ದು ಕೇಳೆನುತಲಾ
ದರಿಸಿ ಮಾಯೆಗೆ[6] ಹೇಳುತಿರ್ದಳು ವಿಮಳೆ ವಿನಯದಲಿ ‖ ೩ ‖

೧. ಱಸುವೆ (ಇ.) ೨. ದ ಹದನವ ಧರೆಗೆ (ಇ.) ೩. ಭಾವ (ಇ.) ೪. ರಿಸಿ ಕಾಣಿಸುವಂಡವನು (ಇ.) ೫. ಪರಮಭಕ್ತಿಯ (ಇ.) ೬. ದೆನುತ್ತ ಪ್ರಭುವಿನ ಪರಿಯನೆಲ್ಲವ (ಇ.)

ಸುದತಿ ನೀನಱುಹಿಸಿದ ಮುನ್ನವೆ
ಮುದದಲೀಶ್ವರಭಕ್ತಿಯಿಂದಲಿ
ಮಧುಕನಾಥನ ನಿಚ್ಚ ಪೂಜಿಸುವೆನು ವಿಧಾನದಲಿ
ತುದಿಗೆ ನಾನಿನ್ನೇನ ಮಾಡುವೆ
ನದಱಿಲಾದೊಡೆ ಕಾಣೆನೇನುವ
ನಿದಕೆ ನಾ ಬೇಸತ್ತೆನೌ ಕೇಳೆಂದಳಾ ಮಾಯೆ || ೪ ||

ಶಿವ ಶಿವಾ ನಿಷ್ಪುಣ್ಯವಚನ
ಶ್ರವಣ ಸಂಭಾವಿಸಿತೆಯಾದೊಡೆ
ಶಿವನ ಭಕ್ತಿ ನಿರರ್ಥವೆಂದಾ ಮೂಢೆ ತಿಳಿವಂತೆ
ವಿವರಿಸುವೆನಾ ಶಿವಪದಾಚಾ
ರವನು೧ನಾ ಬಲ್ಲನಿತನೆನುತಲಿ೧
ಯುವತಿ ಮಾಯೆಗೆ ಹೇಳಲುದ್ಯೋಗಿಸಿದಳಾ ವಿಮಳೆ || ೫ ||

ಆಗಮಂಗಳನೆಲ್ಲವನು ಚೆ
ನ್ನಾಗಿ ಶೋಧಿಸಿ ತಿಳಿದು ಸಲೆ ೨ಶೈ
ವಾ೨ಗಮವೆ ಮಿಗಿಲೆಂದು ೩ಭಾವಿಸಿ ಭಕ್ತಿರತನಾದಾ೩
ಶ್ರೀಗುರುವಿನುಪದೇಶವಿಲ್ಲದೆ
ಹೋಗಿ ದೇವಾರ್ಚನೆಯ ಮಾಡಿದೊ
ಡೇಗುವುದು ಬಱುಮಾಟ ನಿಷ್ಫಲವೆಂದಳಾ ವಿಮಳೆ || ೬ ||

ಕೊಬ್ಬಿ ಕೋಮಲವಾದ ನಿಗುರಿದ
ನಿಬ್ಬರದ ನಿಡುಗೆಣ್ಣುಗಳ ಕಾ
ಗಬ್ಬನಱಿಯದೆ ಕಬ್ಬಿನಿಚ್ಛೆಗೆ ೪ಮೆಲುವ ಮರುಳ೪ಂತೆ
ಮಬ್ಬುದೋಱುವ ಮದದ ಡಂಬಿನ
ಹಬ್ಬುಗೆಯಲಿಹ ಗುರುನಿರೂಪ೫ದ
ಲು೫ಬ್ಬಿ ಮಾಡುವ ಮಾಟ ನಿಷ್ಫಲವೆಂದಳಾ ವಿಮಳೆ || ೭ ||

೧. ಬಲ್ಲೆಂದಪಲಿಯೆನುತಾ (ಇ.) ೨. ನಿಗಮಾ (ಇ.) ೩. ಭಕ್ತಿಯ ಮಾಡುತಿರ ಲೊಲಿಪ (ಇ.) ೪. ಬಿದಿರ ಮೆಲುವ (ಇ, ಮು.) ೫. ಪ ತ (ಇ.)

ಕಣ್ಣುಗಾಣದ ಕುರುಡನೊಳ್ಳಿಹ
ಕನ್ನಡಿಯು ಹಿಡಿದಂತೆ ಸಲೆ ಸಂ
ಪನ್ನ ಸದ್ಗುರುದೀಕ್ಷೆ ೧ಕೈಸಾರದೊಡೆ೧ ನೋಡು೨ತಲಿ೨
ಚೆನ್ನ ಚಿತ್ತದ ಕಣ್ಣ ತೆರೆಯದೆ
ಯನ್ಯವಿಧಿಯಲಿ ಭಜಿಸಿ ಭಾವಿಸಿ
ಬನ್ನಬಟ್ಟರೆ ತುದಿಗೆ ನಿಷ್ಫಲವೆಂದಳಾ ವಿಮಳೆ　|| ೮ ||

ಮೂಗರಾದವರೇನ ನೋಡಿದೊ
ಡೇಗುವರು ೩ದಿಟವಾ೩ ಪ್ರಕಾರದ
ಲಾಗಮಾಚಾರಿಯನ ಮಂತ್ರಗ್ರಹಣ ೪ನೆಲಸಿರದೆ೪
ಹೋಗಿ ದೇವಾರ್ಚನೆಯ ಮಾಡಿದೊ
ಡಾಗುದೋರಸಲರಿಯದಿಚ್ಛಾ
ಭೋಗದವರಿಗೆ ತುದಿಗೆ ನಿಷ್ಫಲವೆಂದಳಾ ವಿಮಳೆ　|| ೯ ||

ತಿಳಿಯೆ ಶೋಧಿಸಿ ಹರಗಿ ಹಸನಾ
ದಿಳೆಯೊಳೊಳ್ಳಿಹ ೫ಬೆದೆಯುಲೊಯ್ಯನೆ೫
ಹುಳುಕುಹುರಿಕರಿಯಾದ ಬೀಜವ ಬಿತ್ತುವವರಂತೆ
ಲಲಿತದೇವಾರ್ಚನೆಯ ಕಾಲಂ
ಗಳಲಿ ಮೊಸಲುಗೆಟ್ಟ ಸಾಧನ
ಗಳಲಿ ಪೂಜೆಯ ಮಾಡೆ ನಿಷ್ಫಲವೆಂದಳಾ ವಿಮಳೆ　|| ೧೦ ||

ಕಿವಿಗೆ ಕಂಪನು ಮೈಗೆ ರೂಪನು
ಸವಿಯನಕ್ಷಿಗೆ ನಾಸಿಕಕೆ ಶ
ಬ್ದವನು ಸಲಿಸುವ ಮರುಳತನದಲಿ ದೇವ೬ತಾಮುಖದ೬
ವಿವರಗಳನೇನುವನು ತಿಳಿಯದೆ
ತವಕ ಮಿಗೆಯನ್ಯೋನ್ಯವಸ್ತು
ಪ್ರವರದಲಿ ಪೂಜಿಸಲು ನಿಷ್ಫಲವೆಂದಳಾ ವಿಮಳೆ　|| ೧೧ ||

೧. ಗೊಳ್ಳದೆ ನೀನು ಬುದ್ಧಿಯುಳಿ (ಜ.) ೨. ನೆನೆವ (ಬ.) ೩. ನೋಡಾ (ಇ.) ೪. ನೆಲಸಿದೊಡೆ (ಅ, ಉ, ಕ, ಗ.) ; ನೋಂಕದಿರೆ (ಇ.) ೫. ಬೆಳೆಯು ಬಿತ್ತದೆ. [ (ಜ.) ೬. ಗಪಿ ನುಪ (ಜ.)
ಪ್ರ. ೮. ೫. ೬

ಊನವಿಲ್ಲದೆ ತೀವಿ ಚೆಲುವೆನಿ
ತಾನುವಿರುತಿರೆ ಜೀವವೆಂಬ ನಿ
ಧಾನವಿಲ್ಲದದೊಪ್ಪುವುದೆ ಕೇಳಾ ಪ್ರಕಾರದಲಿ
ಏನ ಮಾಡಿದೊಡೇನು ಮನದವ
ಧಾನಭಕ್ತಿಯಲಿರದೆ ವಿಷಯ
ಶ್ವಾ[೧]ನಗಳನಪ್ಪಿದೊಡೆ ನಿಷ್ಫಲವೆಂದಳಾ ವಿಮಳೆ || ೧೨ ||

ತರುಣಿ ನಿನಗುಪದೇಶವಿಲ್ಲವೊ
ನಿರುತ ಮಂತ್ರವಿಹೀನವೋ ಮೇಣ್
ಪರಮತಂತ್ರ [೨]ಕ್ರಿಯೆ ಕಳಾಪಗಳೂನವೋ ಬಱದೆ[೨]
ಹರನ ಭಕ್ತಿ ನಿರರ್ಥವೆಂ[೩]ದು
ಚ್ಚರಿಸಲ[೩]ಹುದೇ ಮಾಯೆ ನಿನ್ನಯೆ
ಮರುಳುತನಗಳ ಮಱೆದು ಕಳೆ ಸಾಕೆಂದಳಾ ವಿಮಳೆ || ೧೩ ||

ಎನಲದೆಲ್ಲವ ಕೇಳಿ [೪]ತನ್ನಯೆ[೪]
ಮನಕೆ ಸೊಗಸದೆ ಬಳಕ ನಾನಿ
ನ್ನಿನಿತು [೫]ಕುಶಲದ[೫] ಗೊಡವೆಗಾಱನು ಬಲ್ಲ ಪರಿಯಿಂದೆ
ನೆನೆದು ನನ್ನಿಚ್ಛೆಯಲಿ ದೇವಾ
ರ್ಚನೆಯ ಮಾಡಿದೆನಿನ್ನು ಸಾಕೆಂ
ದೆನುತೆ ಬೇಸಱಕೆಯಲಿ ನುಡಿದಳು ವಿಮಳೆಗಾ ಮಾಯೆ || ೧೪ ||

ಆದೊಡ[೬]ವಳಂತಸ್ಥ[೬]ವೇ ವಿಧಿ
ಯಾದುದೋ ನಾನಿವಳನೇ ಹರಿ
[೭]ಬೋಧಿ[೭]ಸುವೆನೋ ಶಿವಶಿವಾ ಎಂದೆನುತೆ ತನ್ನೊಳಗೆ
ಆದರಿಸುತಿವಳೊಳಗಿದೊಂದು ವಿ
ನೋದಗೋಷ್ಠಿಯ ಮಾಡಿ ಮೆಲ್ಲನೆ
ಭೇದದಿಂದಲಿ ಕೇಳಿ ನೋಡುವೆನೆಂದಳಾ ವಿಮಳೆ † || ೧೫ ||

೧. ಧ್ಯಾ (ಬ. ; ಶ್ವಾ (ಅ, ಕ, ಗ, ಜ.) ೨. ಕಳಾಪಗಳು ತಾನಿಲ್ಲವೋ ಮೇಣು (ಬ.) ೩. ಪಾ ಚರಿಸಲು (ಬ) ೪. ಕನ್ನೆಯು (ಉ. ೫. ಘಸಡೆಯು ಬ.) ೬. ಖಿನ್ನ ಕಳಂಕ (ಜ.) ೭. ಘೇಬಿ (ಉ.) † ಈ ಪದ್ಯ (ಬ) ಪ್ರತಿಯಲ್ಲಿಲ್ಲ.

ವನಿತೆ ನಾನಿನ್ನೊಂದ ಕೇಳುವೆ
ನೆನಗೆ [೧]ಮಾಜ[೧]ದೆ ಹೇಳು ಹುಸಿ[೨]ಯದೆ[೨]
ನಿನಗೆ ಪಾರ್ವತಿಯಾಣೆ ನಿನ್ನಯ ಕೋಮಲಾಂಗದಲಿ
ಮನಸಿಜನ ಕೈಮುಸಕ ಮಿಗೆ ವೇ
ದನಿಸಿ ನೋಯಿಸುತಿರ್ದುವೆಂದೆಂ
ಬಸಿತು ಕುಱುಹಿರಲೇನು ಕಾರಣವೆಂದಳಾ ವಿಮಳೆ ॥ ೧೬ ॥

ಆಣೆಗಂಜುವೆನವ್ವ ಕಾಮನ
ಬಾಣದಲಿ ಭಯಬಟ್ಟು ಬಳಿಕಾ
ಪ್ರಾಣಪರಿಯಂತರ ದಶಾವಸ್ಥೆಯಲಿ ನೆಱೆ[೩]ನೊಂದು
ಮಾಣದುತ್ತಮವಾದ್ಯವಿದ್ಯಾ
ಜಾಣನಲ್ಲಮನೆಂಬ [೪]ಚೆಲುವ[೪]ನ
ಕಾಣುತವೆ ಕಂಗೆಟ್ಟು ಕರಗಿದೆನೆಂದಳಾ ಮಾಯೆ ॥ ೧೭ ॥

ಅಲ್ಲಮನು ತಾನೆಂಬ ಹೆಸರವ
ನಲ್ಲಮಪ್ರಭುವಾಗಲಾಪನು
ಭುಲ್ಲವಣೆಯಲಿ ನಿನ್ನ ಜವ್ವನಗೊಬ್ಬಿನಲಿ ಮಱೆದು
[೫]ಪಲ್ಲವಿ[೫]ಸಿ ನೀ ಕಾಮಿಸಿರ್ದೊಡೆ
ಖುಲ್ಲತನದಲಿ ವಿಕೃತವೇಷದ
ಲಲ್ಲಮನು ತಾ ಬಂದನೈಸಲೆ ಎಂದಳಾ ವಿಮಳೆ ॥ ೧೮ ॥

ಎಂದೊಡಾನೇನಱಿಯೆನಕಟಾ
ಮುಂದಮತಿಯೇ ಅಲ್ಲಮಪ್ರಭು
ವೆಂದೆನಿಸಿಕೊಂಬವನು ತಾ[೫] ಪ್ರತ್ಯಕ್ಷ ಪರಬೊಮ್ಮ
ಎಂದು ಹೇಳುವರೆಲ್ಲರಿವನೇಂ
ಸಂದ ಮದ್ದಳೆಯಲ್ಲಮನು ಬಿಡು
ಪೊಂದದಾ ನೀ ಹೇಳುವುದು ಹುಸಿಯೆಂದಳಾ ಮಾಯೆ ॥ ೧೯ ॥

೧. ಮುಚ್ಚು (ಅ, ಆ, ಕ, ಗ.) ೨. ಪರಿ (ಅ, ಕ, ಗ, ಜ.) ೩. ಚಪಲ (..) ೪. ತಲ್ಲಿ
ಣಿ (ಇ.) ೫. ಬನು ಕಣಾ (ಜ.)

ಅಕಟ ಮರುಳೇ ಅಲ್ಲಮಪ್ರಭು
ಸಕಳರಿಗೆ ಸಾ[೧]ಕಾರ[೧]ನಾಗಿಹ
ಸುಕರನಿರ್ಮಳಮತಿಗೆ ನಿರ್ಗುಣರೂಪನಾಗಿಹನು
ಪ್ರಕಟಿಸುವ ನೀ ನಿನ್ನ ವಿಷಯದ
ವಿಕಳತನವನು [೨]ಬಿಟ್ಟು[೨] ಸಲೆ ಸಾ
ತ್ವಿಕವ ಬುದ್ಧಿಯಲೀಕ್ಷಿಸೆಂದಳು ಮಾಯೆಗಾ ವಿಮಳೆ || ೨೦ ||

ಆದೊ[೩]ಡದನಾನಱಿಯೆನೌ ಬೇ
ಕಾದೊಡಾ ಮದ್ದಳಿಗನನು ದಿಟ
ಭೇದಿಸಲು ನೀ ಬಲ್ಲೆಯಾದೊಡೆ ತೋಱುವೆ[೩]ನವನ
ವಾದವೇತಕೆ ನಿನ್ನ ಮನಸಿಗೆ
ವೇದಿಸುವ ದಿಟವಲ್ಲಮನೆಯುವ
ನಾದನಾದೊಡೆ ಬಳಿಕ ನೋಡುವೆನೆಂದಳಾ ಮಾಯೆ || ೨೧ ||

ಎನುತೆ ವಿಮಳೆಯ ಕೂಡಿಕೊಳುತಾ
ವನಿತೆ ನಿತ್ಯಸ್ಥಿತಿಯ ದೇವಾ
ರ್ಚನೆಗೆ ದೇವಾಲಯಕೆ ಹೋದಳು ಸಕಲವಿಭವದಲಿ
ಮನವೊಲಿದು ಮಧುಕೇಶ್ವರನ ಮಂ
ದನೆಯನೆಲ್ಲವ ಮಾಡಿ ಮಾಯಾಂ
ಗನೆ ವಿರಾಜಿಸಿ ಬಂದು ನಿಂದಳು ನೃತ್ಯರಂಗದಲಿ || ೨೨ ||

[೪]ಹೂಡಿ ಹಣ್ಣಿದ[೪] ಜಗದ ಜಂತ್ರವ
ನಾಡಿಸುವ ಮಾಯಾಂಗನೆಯು ತಾ
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ
ಆಡಿಸುವ ಮದ್ದಳೆಯ ಜೋಕೆಯ
ಜೋಡಿಸುವನಲ್ಲಮನು ಪಾತ್ರವ
ನಾಡುವವಳಾ ಮಾಯೆ ಲೋಕವ ಮರುಳ ಮಾಡುತಲಿ || ೨೩ ||

೧. ಮಾನ್ಯ (ಜ.) ೨. ಮಾಸು (ಮು.) ೩. ಡೇನೌ ವಾದವೇತಕೆ ಭೇದಿಸಲು ನಾ ನಱಿಸಿ ದಿಟ ಬೇ| ಕಾದೊಡೆಯು ತೋಱುವೆನು ನೋಡುವುದಿಂದು ಪ? (ಜ.)
೪. ಕೂಡಿ ಹಣ್ಣಿ (ಜ.)

ನೋಟವತ್ತಲಿ ಮನದ ಬೆಸುಗೆಯ
ಬೇಟವಿತ್ತಲು ಕಾಯ-ಕರಣಗ
ಳಾಟವತ್ತಲುವಂತರಂಗದ ಬಯಕೆಗಳ ಬಗೆಯೂ
ಕೂಟವಿತ್ತಲೆ ಕವಲುಗೊಂಡುದು
ನಾಟಿ ಲಿಂಗದೊಳಲ್ಲಮನೊಳದು
ನೋಟಕರಿಗರಿದಾಯ್ತು ಭಾವಿಸೆ ಬೆಡಗು ಮಾಯೆಯಲಿ    || ೨೪ ||

ಲಲಿತನಿರ್ಮಳಚಂದ್ರಕಾಂತದ
ಶಿಲೆಯ ಹತ್ತಿರೆ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ
ತಿಳಿಯಲಱಿಯದ ಜನಕೆ ಮಾಯೆಯ
ತಳಿತ ಕಾಮಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ    || ೨೫ ||

ಶೂಲಿಯೊಳು [೧]ತಾ ಹೂಣಿಸಿದ ಹೇ
ಹಾ[೧]ಳಿಯನು ಮಱುಕೊಳಿಸಿ ಕಾಮನ
ದಾಳಿಯಲಿ ತಾ ಸಿಕ್ಕಿದುದ ನೆಱೆ[೩] ನೆನೆವ [೨]ವೇದೆಯ[೨]ಲಿ
ತಾಳಮೇಳದ ಗತಿಯ ಗಮಕದ
ಕೇಲಣೆಯ ಕಾ[೩]ಳಾಸ[೩] ವಿಘಟಿಸಿ
ಜಾಳಿಯಲಿ ತಬ್ಬಿಬ್ಬ[೪]ವೋಗು[೪]ತಲಿರ್ದಳಾ ಮಾಯೆ    *|| ೨೬ ||

ಈತ [೫]ತಾ[೫] ದಿಟದಲ್ಲಮನೊ ಮೋ
ಹೀತ ಮದ್ದಳೆಯಲ್ಲಮನೊ ನಾ
ನೀ ತರುಣಿಗೀತನನು ತೋಱಿಸಿ ತಿಳಿಯಬೇಕೆನುತೆ
ಪ್ರೀತಿಯಿಂದಲಿ ತನ್ನ ಮನದೊಂ
ದಾತುರತೆಯನು ಸೈರಿಸುತೆ ಬಳಿ
ಕೋತು ಮಿಗೆ ತನ್ನೊಳಗೆ ತಾನಿಂತೆಂದಳಾ ಮಾಯೆ    || ೨೭ ||

೧. ಹೂಣಿಸಿದ ಸೋಹದ ರಾ (ಜ.) ೨. ವೇಷೆಯ (ಪ.; ನೋಹದ (ಜ.) ೩. ಲಾಟ (ಅ.) ೪. ಪೆನಿಸು (ಜ.) ೫. ನೆ: (ಅ, ಕ, ಗ.) * ಈ ಪದ್ಯ (ಇ.) ಪ್ರತಿಯಲಿಲ್ಲ.

ಸಂದಣಿಸುತಿಟ್ಟಣಿಸಿ ೧ನೆರೆ೧ದಿಹ
ಮಂದಿಯಲಿ ನಾಸಿವನನನುಚಿತ
ದಿಂದಲಿವಳಿಗೆ ನುಡಿದು ತೋಱುವು೨ದೆಗ್ಗ೨ತನವೆನುತೆ
ಅಂದು ವಿಮಳೆಗೆ ಜಾತಿಜಾಣಿಕೆ
ಯಿಂದಲಭಿನ೩ಯ೩ ಪಾಡು ನೋಟಗ
ಳಿಂದೆ ಬಳಿಕಲ್ಲಮನ ತೋಱುಸುತಿರ್ದಳಾ ಮಾಯೆ ॥ ೨೮ ॥

ಆಕೆ ಕಡೆಗಣ್ಣಿನಲಿ ತೋಱುದೊ
ಡೀಕೆ ನಡುಗಣ್ಣಿನಲಿ ನೋಡುತ
ಲಾ ಕಳಾವಿದನಾಗಿ ಕಾಣಿಸುವಾತ೪ನಿಂಗಿತ೪ವ
ಲೋಕದೊಳಗಿಂತಪ್ಪ ಮಾನವ
ರಾಕೃತಿಯ ನಾ ಕಾಣೆನೆನುತಾ
ಳೋಕಿಸಿದಳನಿಮಿಷತೆಯಿಂದಾ ವಿಮಳೆಯಲ್ಲಮನ ॥ ೨೯ ॥

ಊಹಿಸುವೊಡಾ ದೇವ ಮಾನವ
ಚೋಹವನು ೫ತೊಟ್ಟಿ೫ರ್ದನೋ ಮೇಣ್
ಮೋಹದಿಂದಾವೀಕ್ಷಿಸಲು ದಿಟವೆಮ್ಮ ಕಣ್ಣಿಂಗೆ
ರೂಹಿನಂದದೊಳಿರ್ದನೋ ಸಂ
ದೇಹವಾಗಿದೆ ತಿಳಿವೊಡೀತನ
ಗಾ೬ಹು ನಮಗಱಿದಾದುದೆಂದಳು ವಿಮಳೆ ಮನದೊಳಗೆ ॥ ೩೦ ॥

ದಿಟಕೆ ಭಾವಿಸಲಾರ ಭಾವನೆ
ಘಟಿಸಿದಂತಿರೆ ತನ್ನ ರೂಪನು
ನಟಿಸಿ ತೋಱುವನಾವ ಕಾರಣ ವಿಮಳೆಯಱಿವಿಂಗೆ
ಅಟಮಟದಲಹುದಲ್ಲವೆಂಬೀ
ನಟನೆಯನೆ ನೆಲೆಗೊಳಿಸುತಿರ್ದನು
ಪಟುತರಸ್ವಾತಂತ್ರ್ಯಮಹಿಮೆಯ ಮೂರ್ತಿಯಲ್ಲಮ೭ನು೭ ॥ ೩೧ ॥

೧. ನೆಱೆ (ಜ.) ೨. ದಗಡು (ಇ.) ೩. ವ (ಅ, ಇ, ಕ, ಜ.) ೪. ನಳಬಳ (ಜ.) ೫. ತೋಱಿ (ಮು.) ೬. ರೂ (ಇ.) ೭. ನಾ (ಸಿ.)

ತುಡುಕಿ ಮಂ[೧]ದಿ[೧]ಸಿ ನೋಡಲಳುಪಿನ
ತೊಡಕು ತೊಲಗಿಸಿ ಬಳಿಕಲೀತನ
ಬೆಡಗುಬಿನ್ನಾಣವನು ಕಾಣಲಿಬಹುದು ನಾವೆನುತೆ
ನುಡಿದು ತೋಱದೆ ಕಣ್ಣ ಕಾಂತಿಯ
ಕಡೆಗಳಲಿ ಕಾಣಿಸುತಲಿರ್ದಳು
ಮಡದಿ ಮಾಯೆಗೆಯಲ್ಲಮನ ವರಮೂರ್ತಿಯನು ವಿಮಳೆ ॥ ೩೨ ॥

ಕಂಗಳಲಿ ಮಾತುಗಳು ತಿಳಿವೊಡೆ
ಕಂಗಳಲಿ [೨]ಮಾಟ[೨]ಗಳು ಬಗೆವೊಡೆ
ಕಂಗಳಲಿ [೩]ಸಮ್ಮೋಹ[೩]ಗಳು ಕಂಗಳಲಿ ನೇಹಗಳು
ಕಂಗಳಲಿ ಸರ್ವಪ್ರಪಂಚಗ
ಳಂಗನೆಯರಿಗೆ ಸಹಜವೆಂದೆನೆ
ಕಂಗಳಿಂದಾ ವಿಮಳೆ ಸೂಚಿಸಲಱಿದಳಾ ಮಾಯೆ ॥ ೩೩ ॥

ಬಳಿಕಲೊಯ್ಯನೆ ಬಱಿಯ ಬೇಟದ
ಬಳಕೆ ಬಳಲಿತು ತನ್ನ ಪೈಜೆಯ
ನೆಳಲು ನೆಲಸಿತು ಹೇವ ಹೆಚ್ಚಿತು ಕಾಂಕ್ಷೆ ಕವಲಾಯ್ತು
[೪]ತಿಳಿವು ತಿರುಗಿತು ಲಾಸ್ಯಲೀಲೆಯ
ಚಳತೆ ಚಂಡಿಸಿ ಹಿಂಗಿ ಹೋಯಿತು
ಹೊಳೆದುದಲ್ಲಮನಳಬಳವನಱಿವಾಸೆ ಮಾಯೆಯಲಿ[೪] ॥ ೩೪ ॥

ಮು[೫]ರಿ[೫]ದುದಾ ಮನವದಱ ಸಂಗಡ
ಮು[೬]ರಿ[೬]ದುದಾ ನಸುನೋಟವಾಗಳೆ
ಮು[೭]ರಿ[೭]ದುದಾ ಮುಖ ಮುತ್ತಿನೋಲೆಯ ಬೆಳಗ ಪಸರಿಸುತೆ
ತಿರುಗಿ ತೀವಿತು ಲಾಸ್ಯ ಮಧುಕೇ
ಶ್ವರನ ಸಮ್ಮುಖದಿಂದಲೊಯ್ಯನೆ
ಸರಿಸಗೊಂಡಿತು ಮತ್ತೆ ಮಾಯೆಯ ಮಾಟವಲ್ಲಮನಾ ॥ ೩೫ ॥

೧. ಚಿ (ಇ.) ೨. ಕೂಟ (ಬಿ.); ಪ್ರೀತಿ (ಇ.): ನೋಟ (ಬ.) ೩. ಕಡುಕೊಂಕು (ಇ.) ೪. ಹೊಳೆದುದಲ್ಲಮನಳಬಳವು ತಾ। ತಿಳುಹು ತಿರುಗಿತು ಹಾಸ್ಯ ಲೀಲೆಯ। ಚಳತೆ ಚಂಡಿಸಿ ಹಿಂಗಿ ಹೋಯಿತು ಮಾಯೆಮನದೊಳಗೆ (ಇ.) ೫,೬,೭. ಱು (ಅ,ಕ,ಗ.)

ನೋಟವೆಸೆದುದು ಮುನ್ನ ಮು[1]ಟ್ಟ[1]ದ
ಬೇಟವಲ್ಲದೆ ಬೇಱೆ ಬುದ್ಧಿಯ
ಕೂ[2]ಟದಿಂದೆ ಲತಾಂಗ ಲಂಬಿಸಿ[3]ತಾನತಸ್ಥಿತಿ[3]ಯ
ನಾಟಿ ನಲಿದುದು ಚಿತ್ತ[4]ವೀ ನಟ[4]
ನಾಟಕನ ಸಿಕ್ಕಿಸುವ ಬಗೆಯಲಿ
ಮಾಟ ಮಕರಿಸಿ ಕಾಣಲಾಯಿತು ಮತ್ತೆ ಮಾಯೆಯಲಿ || ೩೬ ||

ಈಕೆಯಂ[5]ಗ[5]ವನಱಿದು ನಾವಿ
ನ್ನೇಕೆ ಸದಮಲಸತ್ಸ್ವರೂಪವ
ಲೋಕರಿಗೆ ಕಾಣಿಸುವುದನುಚಿತವೆನುತೆ ತನ್ನೊಳಗೆ
ಸಾಕೆನುತೆ ನಟ್ಟು[6]ವಿಗತನವನು
ನೂಕುತಲಿ[6] ಮದ್ದಳೆಯ ತಾನೊಡ
ಹಾಕಿ ನಗುತಲಿ ಪೋದನಲ್ಲಮನಖಿಳಜಗವಱಿಯೆ || ೩೭ ||

ಹೊಸತಿದೇನಿರ್ದಿರ್ದು ಸುಮ್ಮನೆ
ಗಸಣೆಯಿಲ್ಲದಿದೇಕೆಯಲ್ಲಮ
ಬಿಸುಟು ಹೋದನು ಮದ್ದಳೆಯನೆಂದೆನುತಲಲ್ಲಿರ್ದ
ಶಶಿಮುಖಿಯರಾ ಮೇಳದವರಾ
ಮುಸುಱ ನೋಡುವ ನೋಟಕರು[7]ಕಾ
ಣಿಸದ ಕಾರ್ಯಕೆ[7] ಬೆ[8]ಗಡುಗೊಂಡ[8]ರು ಕೂಡೆ ತಮತಮಗೆ || ೩೮ ||

ಆಯಿತೇ ಕಡೆ[9]ಯಾ[9]ಟ ಹೂಣಿಕೆ
ಹೋಯಿತೇ ಹುಸಿಯಾಗಿ ಕಾಮನ
ಬಾಯ ಬಾರಿಗೆ ಬಿದ್ದನೇ ನಗುವವರಿಗೆಡೆಯಾಗಿ
ಹಾಯೆನುತೆ ಹಮ್ಮೈಸಿ ಹಲುಬುತೆ
ಬಾಯ ಬಿಡುತಲಿ ಮಱುಗುತಿರ್ದಳು
ಮಾಯೆ ಮಾಣದೆಯಲ್ಲಮಪ್ರಭುರಾಯನಗಲಿದೊಡೆ || ೩೯ ||

೧. ಟ್ಟ (ಅ.) ೨. ಮಾ (ಜ.) ೩. ತಾತನಸ್ಥಿ (ಬ.); ತಾನವಸ್ಥಿ (ಗ.); ತನ್ನ ಸ್ಥಿತಿಗ (ಇ.) ೪. ಪೀಕೆಯ ಜ.); ಪಿಸಿ ಸವ (ಅ.) ೫. ದ (ಕ.) ೬. ವತನವನಸದ ನೋಕರಿಸಿ (ಇ.) ೭. ಶಂಕಿಸುವ ಮನಸೊಳು (ಗ.) ೮. ಱಗು ಪಿಡಿದ (ಗ.); ಱಗು ವಟ್ಟ (ಇ.) ೯. ಯುಕ (ಗ, ಚ.)

ಬಾಲೆ ಹಂಬಲಿಸಿದರೆ ಫಲವೇ
ನೇಳು ತಡೆ[೧]ದಿರದ[೧]ಲ್ಲಮನನೀ
ರೇಳು ಲೋಕದಲಱಿಸಿ ನೋಡುವೆವೆನುತಲಾ ವಿಮಳೆ
ಹೇಳಿದೊಡೆಯಹುದೆನುತೆ ಚಿ[೨]ತ್ತವ[೨]
ತಾಳಿ ತರಹರಗೊಂಡು ಬಳಿಕಲಿ
ಕಾಲ ನಡೆಯಲಿ ಮಾಯೆ ನಡೆದಳು ಕೆಳದಿಯರು ಸಹಿತ ॥ ೪೦ ॥

ನೆ[೩]ರೆದು ನೆಱೆ[೩] ಬೆಱಗಾಗಿ ನೋ[೪]ಡಿರೆ[೪]
ಧರಣಿಪತಿಯ ಕುಮಾರಿ ಕಾಮಾ
ತುರದಲಲ್ಲಮನೆಂಬ ಮದ್ದಳಿಗಂಗೆ ಮನಸೋತು
ಮರುಳುಗೊಂಡಕಟವನ ಬೆನ್ನಲಿ
ಹರಿದು ಹೋಗುತ[೫]ಲಿಹಳೆಯೆ[೫]ನುತಲಿ
ಪುರದೊಳಗೆ ನೋಟಕರು ಸಂದಣಿಸಿದರು ಬೀದಿಯಲಿ ॥ ೪೧ ॥

ಹೋಗುತಿರ್ದಳು ಹೊಲಬ ಕೇಳುತೆ
ಬೇಗ ಬೇಗದಲಲ್ಲಮನನಾ
ವಾಗ ಕಾಂಬೆನೊ ಎಂಬ [೬]ಮನದಾ[೬]ತುರದ ತವಕದಲಿ
ಆಗಲಡವಿಯ ಬಿದ್ದು ನೆಱೆ ಭೂ
ಭಾಗದಲಿ ವನಚರಿಯರೆಂಬವೊ
ಲಾಗಿ ಮಾಯಾದೇವಿ ವಿಮಳೆ ಸಮಸ್ತಸಖಿನಿವಹ ॥ ೪೨ ॥

ಕಲ್ಲು ಕೊರಡುಗಳುರಿವ ಹುಡಿ ಜಡಿ
ಮುಳ್ಳು ಗಿಡ ಮಡು ತೆವರು ಮೆಳೆಗಳು
ಹಳ್ಳ ಹಾವಸೆ ಹಾವು ಹುಲಿ ಕಾಡಾನೆ ಕೋಣಗಳು
ಕೊಳ್ಳ ಕುತ್ತುಱು ಹೆಮ್ಮರಂಗಳು
ಪಲ್ಲವಿಸಿ ಜೀರೆಂಬ ಕಾನನ
ದಲ್ಲಿಯಱಸುತೆ ಬರುತಲಿರ್ದಳು ಮಾಯೆಯಲ್ಲಮನ ॥ ೪೩ ॥

೧. ಯದಿರ (ಇ.) ೨. ೦ತ್ರೆಯ (ಇ.) ೩. ರೆದ ಜನ (ಗ.) ; ರವಿ ನೆಱೆ (ಇ.)
೪. ಡುತ (ಇ.) ೫. ಲೈಪಳೆ (ಗ, ಮು.) ೬. ಕಾಮಾ (ಅ.)

ಬಿಸಿಲು ಸುಟ್ಟುರಗಾಳಿ ದೆಸೆಗಳ
ಮುಸುಗುತಿಹ ಕೆಂದೂಳಿ ಕಾಳ್ಗಿ
ಚ್ಚೆಸೆವ ನಟ್ಟಡವಿಯಲಿ ನಡೆ[1]ದೈತರುತೆ[1] ಕಾಲೊಡೆದು
ಬಸವಳಿದು ಬೀಳುತ್ತಲೇಳುತೆ
ಹಸಿವು ತೃಷೆ ಬಳಲಿಕೆಗಳಲಿ ಧೂ
ಪಿಸುತೆ ಬಂದಳು ಮಾಯೆ ತಾನಲ್ಲಮನನಜಸುತಲಿ || ೪೪ ||

ಸೂಡುತಲಿ ಬಿಡುಜೆಡೆಗಳನು ಕೈ
ಗೂಡತಲಿ ಕಡವಸವ ಭೂತಿಯು
ಗೂಡ ಸಂವರಿಸುತ್ತೆ ಲಾಕುಳ ಜೋಗವಟ್ಟಿಗೆಯು
ಜೋಡಿಸುತೆ ಜಪತಪಸಮಾಧಿಯು
ಮಾಡುವವರಾ ಮಾಯೆ ಬರಲೆ
ದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ ದೆಸೆದೆಸೆಗೆ || ೪೫ ||

ಕರುಣಿಗಳ ಬಲ್ಲಹನು ಬೋಳೆಯ
ರರಸ ಭಜಕರ ಬಂಧುವೆನಿಸುವ
ಪರಮಪಾವನನಲ್ಲಮಪ್ರಭು [2]ತಾನೆ ತನ್ನೊ[2]ಳಗೆ
ವರತಪೋಧನರಂಜಿಕೆಯನಾ
ತರುಣಿಯುರ ಬಳಲಿಕೆಯನಾನೇ
ಪರಿಹರಿಸಬೇಕೆನುತ[3]ಲಾಕ್ಷಣ ಸುಳು[3]ಹುದೋಱಿದನು || ೪೬ ||

ನಿಲಿಸಿ ಭಯ ಬೇಡೆಂದು ತಾಪಸ
ಕುಲಕೆಯುಭಯವ [4]ಕೊಟ್ಟು[4] ಕರುಣದ
ಬಳಕೆಯಲಿ ತಾನವರಿಗೊಬ್ಬ ತಪಸ್ವಿಯಂದದಲಿ
[5]ನಲಿದು ಹರಿತಹ ಮಾಯೆಯನು[5] ಮೂ
ದಲಿಸಿ ಮುಱಿದೋಡಿಸುವೆನೆನುತಲಿ
ಸುಳುಹುದೋಱಿದನಾಕೆಗಲ್ಲಮ ಮುನ್ನಿನಂದದಲಿ || ೪೭ ||

೧. ಪರೆ ತರುಣಿ (ಜ.) ೨. ತನ್ನ ಮನದೊ (ಇ, ಎ, ಬ.) ೩. ಲಲ್ಲನು ಕಂಡು (ಮು.) ೪. ನಿತ್ತು (ಕ.) ೫ ಹಳಿಹಳಿದು ಮಾಯೆಯನು ತಾ (ಅ)

ತೃಷೆಗಳಡಿತುವು ಕಾಣುತಲಿ ಕಡು
ಹಸುಗಳಡಗಿದುವಡವಿಯಲಿ ಕಂ
ಪಿಸುತೆ ಮುಗ್ಗುತೆ ಕೆಡೆಯುತಲಿ ಮಿಗೆ ಬಂದ ಬಳಲಿಕೆಯಾ
ಮುಸಕ ಮಾದುದು ವಿಶ್ರಮಿಸಿದರು
ಶಶಿಮುಖಿಯರೈತಂದು ಕಾಣುತೆ
ಮುಸುಜಿ ಮುತ್ತಿದರಲ್ಲಮನ ಶ್ರೀಪಾದಪಂಕಜವ || ೪೮ ||

ಲೇಸುಮಾಡಿದೆಯಯ್ಯ ಮಾಯೆಯ
ನೀಸುದಿನ [೧]ಮನವೊಲಿಸಿ[೧] ಕಡೆಯಲಿ
ಗಾಸಿ ಮಾಡುವುದುಚಿತವೇ ನಿನಗೆನುತೆ ಕೆಳದಿಯರು
ಆ ಸದಾನಂದೈಕಮೂರ್ತಿ ವಿ
ಲಾಸಿಯಲ್ಲಮಲಿಂಗನಿದಿರಲಿ
ಸೂಸಿದರು ತಮ್ಮೊಡತಿಯಾಸಜು–ಬೇಸಜ[೩]ಲ್ಲವನು || ೪೯ ||

ಆರು ಮೊದಲಲಿ ಬಯಸ ಹೇಳಿದ
ರಾರು ಕಾಣುತೆ ಕರೆಸ ಹೇಳಿದ
ರಾರು ತನ್ನನು ಬಳಿಕು[೨]ದಾಸಿನ ಮಾಡ ಹೇಳಿದರು[೨]
ನಾರಿಯರಿಗಿದು ಸಹಜ ಸಂಚಲ
ಕಾರ[೩]ಣಿಕತನ[೩] ತನ್ನ ತಾನೇ
ದೂರಿಸದೊಡಾನೇನ ಮಾಡುವೆನೆಂದನಲ್ಲಮನು || ೫೦ ||

ಹೇಳ[೪]ಬಾರದೆ[೪] ನೀನು ಮಾಡಿದ
ಬೇಳುವೆಯ ಬೇಗೆಯನು ಲೋಗರ
ನಾಳವಾಡಿಯೆ ನುಡಿದೆಯಲ್ಲದೆ ನೀನು ಕುಹಕದಲಿ
[೫]ಕೀಳಲಲಿ ಬಾಯ್ವಿ[೫]ಟ್ಟು ಮಾಯೆಯ
ವೇಳೆಯನು ಕಾದಿರ್ದು ಕಡೆಯಲಿ
[೬]ಕೀಳು[೬]ಮಾಡಿಯೆ ನುಡಿದೆಯೆಂದರು ಸತಿಯರಲ್ಲಮ[೭]ನ[೭] || ೫೧ ||

೧. ಹೊಂದಿದರ್ು(ಅ.); ನೀನೊಲಿದು(ಗ.) ೨. ಪೇಕ್ಷೆಯ ಮಾಡಹೇಳಿದರು (ಇ.); ದಾಸಿಸ ಹೇಳಿದವರಾರು (ಅ, ಕ, ಗ.) ೩. ಣೀಕರು (ಇ.) ೪. ಬಹುದೇ (ಅ, ಇ.); ಬಾರದು(ಕ, ಗ, ಜ.) ೫. ಮೇಳವಸಿ ಭಯುವ (ಇ.) ೬. ಗಾಳ(ಇ.) ೭. ಗೆ(ಇ, ಗ, ಜ.)

ತಾನೆ ಕಂಗೆಟ್ಟಿರಲು ಕರುಣಿಸಿ
ನಾನು ಸುಳಿದರೆ ನನ್ನ ನಾರೆಂ
ದೇನುವನು ಭಾವಿಸದೆ ಬೆಬ್ಬನೆ ಬೆಱತಹಂಕರಿಸಿ
ತಾನೆ ತನ್ನ ವಿಕಾರದಿಂದಿರ
ಲೇನ ಮಾಡುವೆ ಬಳಿಕ ಸಾಕೆಂ
ದಾನು ಬಂದೆನು ಬಿಟ್ಟು ತಪ್ಪೇನೆಂದನಲ್ಲಮನು ‖ ೫೨ ‖

ಎಂದ ಮಾತನು ಕೇಳಿ ಕಡುಖತಿ
ಯಿಂದಲಹುದೈ ಧೂರ್ತ ನೀ ಗತಿ
ಯೆಂದು ನಂಬಿದೊಡೊಳ್ಳಿತಾಯಿತು ಬಳಿಕ [1]ಮತ್ತೇ[1]ನು
ಸಂದ ಸತಿ ಕುತ್ಸಿತ ಕುಮಂತ್ರದ
ಬಂದಿಕಾಱನು [2]ಚಾಟು ಚಪಳಿಗ[2]
ನೆಂದು ನಾ ಮುನ್ನಱಯೆನೆಂದಳು ಮಾಯೆಯಲ್ಲಮನ ‖ ೫೩ ‖

ಕುಟಿಲ ಕುತ್ಸಿತ ಧೂರ್ತ ದುರ್ಜನ
ವಟಮುಟಗತನ ಕಪಟ ಕಳವಳ
ಸಟೆ ವಿಕಾರ[3]ಗಳಲ್ಲಮನವೋ[3] ತಿಳಿಯೆ ಮಾಯೆಯವೋ
ದಿಟ[4]ಕೆ ಬಲ್ಲ[4] ವಿರಂಚಿ ಹರಿ ಸುರ
ಕಟಕ ವರಮುನಿ ಸಿದ್ಧ ಸಾಧಕ
ಪಟುಗಳೆಲ್ಲರ ಕೇಳಿ ನೋಡೆನುತಿರ್ದನಲ್ಲಮನು ‖ ೫೪ ‖

ಒಳ್ಳಿಹವರೈ ನೀನು ತೋಱದ
ರೆಲ್ಲರೆನ್ನಾಧೀನಪಕ್ಷದ
ಬಲ್ಲಿದರು ಕೇಳವ[5]ರುಗಳ ಬಲ್ಲವಿಕೆ[6]ಗಳ [7]ಕೇಡ[7]
ಎಲ್ಲವನು ಹೇಳುವೆನು ನಿನ್ನ ಯೆ
ಸೊಲ್ಲ ಸೋಲಿಸಿ ಸಿಕ್ಕಿಸುವೆನೆನು
ತಲ್ಲಿ ಮಾಯೆ ನಿಜಪ್ರತಾಪವನಾಡ ತೊಡಗಿದಳು ‖ ೫೫ ‖

೧. ಮಾತೇ (ಇ.) ೨. ಚಪಳ ಚತುರಿಕ (ಇ.) ೩. ಗಳ್ಲವೆಮ್ಮವೊ (ಇ.) ೪. ವಸಱಾವ (ಗ.) ೫. ಕೋ (ಉ, ಚ, ಜ) ೬. ರ ಬಲ್ಲವಿವೇಕ (ಕ, ಗ, ಜ.) ೭. ಹರಿಯ (ಇ.)

ಹರಿಯಯೆದೆಯನು ಮೆಟ್ಟಿದೆನು ಶಂ
ಕರನನರ್ಧಾಂಗದೊಳು ನೆಟ್ಟನೆ
ಹರಿಸುಟಿಕೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ
ಸುರನರೋರಗರೆಂಬ ಮಱುವೆಯ
ಮರುಳ ತಂಡವನೆನ್ನ ತೊತ್ತಿರ
ಶರಣುವೊಗಿಸಿದೆನೇನ ಕೇಳುವೆಯೆಂದಳಾ ಮಾಯೆ || ೫೬ ||

ಜಿನುಗುಮತಿಗಳ ಸಿದ್ಧಸಾಧಕ
ಮುನಿಗಳೆಂಬವದಿರುಗಳನು ನಾ
ಮುನಿದು ಕಚ್ಚುಟ ಕಂತೆ ಬತ್ತಲೆ ಜೋಳು ಜೆಡೆ ಲೋಚು
ಅನಶನವ್ರತ ನಾರು ಬೇರೆಂ
ಬನಿತಱಲಿ ದಂಡಿಸುವೆನಾ ಕಾ
ನನದ [1]ಮರುಳಗ[1]ರನೇನ ಕೇ[2]ಳುವೆಯೆಂದಳಾ ಮಾಯೆ || ೫೭ ||

ಆದಿಯಂತ್ಯವನಱಿಯದೆಲ್ಲರ
ವೇದಿಸಿದೆನೆಂದಕಟ ಗರ್ವಿಸಿ
ಹೋದೆ ನಿನ್ನ ನಿಜಸ್ವ[3]ಭಾವದ ಮತ್ತ[3]ತನದಿಂದೆ
ಆದೊಡವರಂತಿರಲಿ [4]ಮಿಕ್ಕಿ[4]ನ
ವೇದ–ಶಾಸ್ತ್ರ–ಪುರಾಣವಾಗಮ
ವಾದಿಯಾ[5]ದವರಿಂದೆ[5] ಕೇಳಿಸುತಿರ್ದನಲ್ಲಮನು || ೫೮ ||

ಬಿಟ್ಟು ಕಳೆ ಬಱುಮಾತ ಶಬ್ದಗ
ಳೊಟ್ಟ[6]ಲೆಂಬುವು ತನ್ನ[6] ಪಾದದ
ಘಟ್ಟಣೆಯ ಧ್ವನಿ[7]ಯುವಜಲಾನಿ[7]ನ್ನೇನ ಕೇಳುವೆನು
ಮುಟ್ಟಿ ತೀವೊಡೆ ಕೇಳು ನಿನ್ನಯೆ
ಕಟ್ಟಳೆಯತನವೈಸೆ ಎನುತಾ
ದಿಟ್ಟ ಮಾಯಾದೇವಿ ನುಡಿದಳು ಮತ್ತೆಯಲ್ಲಮ[8]ಗೆ[8] || ೫೯ ||

೧. ಪಥಿಕ (ಅ,ಬ.) ೨. ಹೇ(ಉ.) ೩. ರೂಪದ ಮದಡ (ಇ.) ೪. ಮುನ್ನಿ (ಜ.) ೫. ಗಿರ್ದರಲಿ (ಇ.) ೬. ಲಾಗಿಹವೆನ್ನ (ಇ.) ೭. ಯಾನಿವರಲಿ (ಗ.) ಯೆಂಸಲಿ ಕಾನಿ (ಜ.) ೮. ನಾ (ಅ, ಉ, ಕ.)

ಎಲ್ಲರನು ನೀ ಜಱಿದು ಝಾಡಿಸಿ
ಹೊಳ್ಳುಗಳೆದೊಡೆ ನಿನ್ನಲೆನ್ನಲಿ
ಹೊಲ್ಲ-ವೊಳ್ಳಿತನಱಿವ ಮಾತಂತಿರಲಿ [1]ಹೇಳೊಂದ[1]
ಬಲ್ಲೆಯಾದೊಡೆ ನೀನು ನಿನ್ನಯ
ಖುಲ್ಲತನವನು ಬಿಟ್ಟು ನಿರ್ಮಳ
ದಲ್ಲಿ ಮಾತಾಡೆಂದು ನುಡಿದನು ಮಾಯೆಗಲ್ಲಮನು || ೬೦ ||

ಹರಿಹರಬ್ರಹ್ಮಾದಿಗಳನೆ
ಲ್ಲರನು ನಿನ್ನಾಧೀನವೃತ್ತಿಯ
ಲಿರಿಸಿ ಮಿಗೆ[2] ಈೊಡಾ[2]ಡಿ ಕಾಡುಪೆನೆಂದು ನೀ ನುಡಿದೆ
ಮರುಳೆ ನಿನ್ನನದಾರು ನಾನಾ
ಪರಿಯಲಾಡಿಸುವವರು ನೀನಿದ
ಪರಿಕಿಸದೆ ಗರ್ವದಲಿ ನುಡಿವರೆ ಮಾಯೆ ಕೇಳೆಂದ || ೬೧ ||

ಆರನಾರಾಡಿಸುವರೆಂಬುದ
ನಾರು ಬಲ್ಲರು ಸಾಕು ಬಱಿಯ ವಿ
ಚಾರವಂತಿರಲೆನ್ನದೇ ಹಱಿ ಮಾತನಾಡಿದರೆ
ಸಾರಲಱಿವುವೆ ನಮಗೆ ನಮ್ಮ ಮ
ನೋರಥಂಗಳು ನಿನ್ನ ಧೂರ್ತವಿ
ಕಾರವೆಲ್ಲವ ಬಿಟ್ಟು ಕೃಪೆಮಾಡೆಂದಳಾ ಮಾಯೆ || ೬೨ ||

ಮಾಡಿದನಿತಱ ಕರ್ಮಫಲ ಕೈ
ಗೂ[3]ಡಿತು[4]ಳ್ಳುದು [5]ನಿನಗ[5]ದೇನನು
ಬೇಡುತಿಹೆ ಬೇಸಱದೆ ಬಱಿಪೆಗೆ [6]ಬಂದು[7] ಬೆಂಬಿಡದೆ
ಕಾಡಬೇಡಿನ್ನೇಳು ಸಖಿಯರ
ಕೂಡಿಕೊಳುತುಂ ಮರಳಿ ನಿನ್ನಯ
ಬೀಡ ಸಾರುಪಡೊಳ್ಳಿತೆಂದನು ಮಾಯೆಗಲ್ಲಮನು || ೬೩ ||

೧. ಕೇಳಿನ್ನು (ಇ.) ೨. ಯೊಡನಾ (ಗ.) ೩-೪. ಡಲು (ಇ.) ೫. ನೀನ (ಉ.) ೬-೭. ಬಂಪೆ (ಇ.) ೩-೭. ಡಿಪೆಯಿಂತರೆ ನಮಗದನೇನ ಮಾಡಹೇಳುವೆ ನೀನು ಬಂದದ್ದೇನು (ಜ.)

ಭಾಷೆ ಸಲ್ಲದೆ ಹೋಯಿತೆನ್ನಯ
ವಾಸಿ ವರ್ಧಿಸಿ ಹೊತ್ತುತಿದೆ ಕೈ
ಲಾಸದವರಿದ ಕೇಳಿ [೧]ನಗು[೧]ವಂತಾಯಿ[೨]ತೇ ಎ[೨]ನಗೆ
ಈಸು ಧಾವತಿಯಿಂದೆ ನಾ ಕಡು
ಗಾಸಿಯಾದೆನು ಬೆಂದ ಹುಣ್ಣನು
ಕೀಸುವರೆ ಕಂಬಿಯಲಿ [೩]ಕೇಳಕಟಿ[೩]ಂದಳಾ ಮಾಯೆ

ಮಿಕ್ಕು ಮಿಗೆ ಸಾಸುವೆಯ ರಾಶಿಯ
ನೊಕ್ಕಿದೆತ್ತಿಗೆ ಮೇದು ಮೆಲುಕಿಱ
[೪]ವಕ್ಕರು[೪]ಂಟೇ ಮರುಳೆ ನೀನಾ ವಿಧಿಯ ಪರಿಗಳಲಿ
ಹೊಕ್ಕು ಹೋರಟಿಗೊಂಡು ಕಾಮದ
ಲುಕ್ಕಿ ಬಳಿಕಿ[೫]ನ್ನೇನ[೫] ಕೃಪೆಯನು
ಲೆಕ್ಕಿಸಲು ಕೈಸಾರಬಲ್ಲುದೆ ಮಾಯೆ ಕೇಳೆಂದ ॥ ೬೫ ॥

ಆವ ಪರಿಯಿಂದಾದೊಡೇನೈ
ದೇವಪೂಜೆಯ ಮಾಡಿದೊಡೆ ಸಂ
ಭಾವಿಸಲು ಬೇಡಿವೆ [೬]ಮದೀ[೬]ಯಮನೋರಥಾದಿಗ[೭]ಳ[೭]
ಭಾವಿಸಲು ಬರುತಿದೆ ನಿರರ್ಥಕೆ
ದಾವತಿಯೆ ಕಡೆತನಕ ದಿಟಕೆಯ
ದಾವ ಕೊಱತೆಯ ನಾನು ಮಾಡಿದೆನೆಂದಳಾ ಮಾಯೆ ॥ ೬೬ ॥

ತರಳೆ ತನ್ನಯ ಹೊನ್ನು ಸಲ್ಲದೆ
ತಿರುಗಿ ಬಂದೊಡೆಯಕ್ಕಸಾಲೆಯ
ದುರುಳತನದಲಿ ಬಯ್ಯಬಹುದೇ ನೀನು ಮತಿಗೆಟ್ಟು
ಹರನನರ್ಚಿಸುವಂಗಭೇದಾಂ
ತರವನಱಯದೆ ಸಟೆಯ ಭಕ್ತಿಯ
ಭರದಲೇತಕೆ ಫಲವ ಬಯಸುವೆ ಮಾಯೆ [೮]ಕೇಳೆ[೮]ಂದ ॥ ೬೭ ॥

೧. ನುಡಿ (ಇ.) ೨. ತಿಂದೆ (ಇ.) ೩. ಕೃಪೆಯಾಗೆ (ಅ.) ೪. ದಿಕ್ಕಲು (ಐ.) ೫. ನ್ನೆನ್ನ (ಅ.) ೬. ಮಂದಿ (ಐ.) ೭. ಳೂ (ಐ.) ೮. ಹೋಗೆ (ಅ.)

ನಾನು ನಿನ್ನಲಿ ಸು[೧]ಖವ ಸು[೧]ಱಿದು ಸು
ಮಾನದಲಿ ನಿನ್ನಿಂದೆ ಶಿವತ
ತ್ತ್ವಾನುಭಾವದ ನಿಜವಸಱಿದೆನ್ನಯ ಪ್ರತಿಜ್ಞೆಯನು
ಊನವಿಲ್ಲದೆ ಸಲಿಸಿ ಶಿವನಾ
ಸ್ಥಾನದಲಿ ನಾ ಮೆಱೆ[೨]ವೆನೆಂಬ[೨]ಭಿ
ಮಾ[೨]ನದಲಿ ನಂಬಿರ್ದೆನೆಂದಳು ಮಾಯೆಯಲ್ಲಮನ ॥ ೧೮ ॥

ಹಡೆವ ಸೂಳೆಗೆ ಸೋ[೩]ಗಸು[೩] ಹುಟ್ಟದೆ
ಗುಡಿ[೪]ಲ[೪] ಸುಡುವಂದದಲಿ ನಿಜಜಂ
ಜಡದಲಿಮ್ಮನವಾಗಿ ಭಕ್ತಿಯ ಮಾಡಿ ಸ[೫]ಂಫಲ[೫]ವ
ಹಡೆಯಲಿಲ್ಲದೆ ಬಂದು ನೀ [೬]ಬ[೬]ಱು
ನುಡಿಗಳಿಂದಲಿ ನಮ್ಮ ಮೆಲ್ಲನೆ
ತೊಡಕಿಕೊಂಡೊಡೆ ಸಿಕ್ಕನಲ್ಲಮ ಮಾಯೆ ಕೇಳೆಂದ ॥ ೧೯ ॥

ನಮ್ಮನೊಲ್ಲದುದಲ್ಲದೀ ಪರಿ
ನಮ್ಮನೆಲ್ಲರ ಮುಂದೆ ಭಂಗಿಸಿ
ಹೆಮ್ಮೆಗೆಡಿಸುವ ಪರಿಯ ನೋಡಾ ಎನುತೆ ಮನ ಮಱುಗಿ
ಇಮ್ಮೆ ಬೆಂದವಳಿದ್ದಲಂತಿರೆ
ಹಮ್ಮೈ[೭]ವಿ[೭]ಸಿಯೊಱಗುತಲಿ ವಿಮಳೆಯ
ನೆಮ್ಮಿದಳು ನಿಲಲಾಱದಾಳಾಪಿಸುತಲಾ ಮಾಯೆ ॥ ೨೦ ॥

ಬೆಱಗುಹೊಡೆದಿರೆ ನೆಯ್ದಿಲೆಗೆ ನೇ
ಸಱ ನೆಮ್ಮುಗೆಯಾದ ತೆಱನಲಿ
ಮುಱವಡೆದ ಮಾಯಾಂಗನೆಯ ಮುಖಭಂಗವನೆ ಕಂಡು
ಮಱುಗುತಿರ್ದರು ಕೂಡೆ ಕೆಳದಿಯ
ರುಱುಬಿ ಸುಮ್ಮನೆ ಮಾಱು-ಮಾತಿಗೆ
ಹಱವನೆಣಿಸುತೆ ವಿಮಳೆ ಬಳಿಕಿಂತೆಂದಳಲ್ಲಮನ ॥ ೨೧ ॥

೧. ಳುಹನ (ಅ.) ೨. ಭಿದಾ (ಐ.); ವಿಧಾ (ಗ.) ೩. ಬಗು (ಇ, ಉ, ಕ, ಜ.)
೪. ಯ (ಅ, ಕ, ಮ.) ೫. ತ್ಪಥ (ಇ.) ೬. ಬಿ (ಇ.); ದು (ಉ.) ೭. ದಿ (ಐ.)

ಶರಣಜನರಕ್ಷಾಮಣಿಯೆ ಕಿಂ
ಕರಚಕೋರಸುಧಾಕರನೆ ಭಾ
ಸುರದಯಾಂಭೋನಿಧಿಯೆ ನೀನೀ ಸ್ತ್ರೀಯ ತನುಮನವ
[1]ಒರೆದು[1] ನೋಡಿದೊಡಲ್ಲಿ ಭಾವಿಸೆ
ಹುರುಳು ಬಳಿಕೇನುಂಟು ನಿನ್ನಯೆ
ಕರುಣವಾಕೆಯ ಹರಣವೆಂದಳು ವಿಮಳೆ ವಿನಯದಲಿ ॥ ೭೨ ॥

ಬಾಲೆ ನೀರಿಗೆ ಹೆಪ್ಪ[2]ನೆಱೆದರೆ
ಹಾಲಿನಂತಿರೆ[2] ಹೆತ್ತು ಭುಂಜಿಸಿ
ಬಾಳಿದವರಾರುಂಟು [3]ಭಾವಿಸಲಾ[3] ಪ್ರಕಾರದಲಿ
ಕಾಳುಮತಿಗಳಿ[4]ಗಿನಿ[4]ತು ಬುದ್ಧಿಯ
ಹೇಳಿದರೆ ಫಲವೇನು ಸಾಕೀ
ಖೂಳೆಗಾನಿನ್ನೇನ ಮಾಡುವೆ ವಿಮಳೆ ಕೇಳೆಂದ ॥ ೭೩ ॥

[5]ಕೇಳುಗಬ್ಬುನ[6]ವೆಣ್ಣ[7] ಕೋಪಿಸಿ
ಕಾಲಲೊದೆದೊಡೆ ಮೇಣು ಕರುಣಿಸಿ
ತೋಳಲಪ್ಪಿದೊಡೇನು ಪರುಷದ ಗಂಡನದಱಂತೆ
ಬಾಲೆಗೆಂತಾದೊಡೆಯು ನಿನ್ನ ಸ
ಮೇಳ ಘಟಿಸಿದ ಬಳಿಕ ಮಾಯೆಯ
ಪಾಲಿಸಲು ಬೇಕೆನುತೆ ನುಡಿದಳು ವಿಮಳೆಯಲ್ಲಮಗೆ ॥ ೭೪ ॥

ವನಿತೆ ನಿನ್ನಯೆ ಮಾತಹುದು ಕ
ಬ್ಬುನವದಾದೊಡೆ ಪರುಷ ಮುಟ್ಟಲು
ಕನಕವಹುದಲ್ಲದೆ ವೃಥಾ ಹಳೆ ಹಂಚು ಹೊನ್ನಹುದೆ
ಮನಸು [8]ಸಂಚ[8]ಲವಾದ ಮಾಯಾಂ
ಗನೆಯುದೇನನು ಮುಟ್ಟಿ ಮಾಡಿದೊ
ಡಿನಿತು [9]ಸಂಫ[9]ಲವಾಗಲಱಿಯದು ವಿಮಳೆ ಕೇಳೆಂದ ॥ ೭೫ ॥

೧. ಒರಿಸಿ (ಕ.); ಅಱಿಸಿ (ಇ.) ೨. ನಿತ್ತರೆ। ಹಾಲದಪ್ಪುದೆ (ಅ.) ೩. ದಿಟವಿನ್ನಾ (ಜ.) ೪. ಗೆಂ (ಬ.) ೫–೭. ಕೇಳು ದೇವರೆ ನೀನು (ಗ.) ೬–೭. ವೆಂದು (ಜ.) ೮. ಚ (ಅ.) ೯. ನಿಶ್ಚ (ಇ.); ಸತ್ಫ (ಅ, ಇ, ಗ.)

ದೇವ ತಪ್ಪಿದೊಡೇನು ನೀನು ಕೃ
ಪಾವಲೋಕನದಲಿ ನಿರೀಕ್ಷಿಸಿ
ದೇವಿಯರ ಹೊಣಿಕೆಯು ಸಲಿಸಿವರೇನು ಕುಂದಹುದೆ
ದೇವತನಕೂಣೆಯವೆ ಬಱುದೆ ವೃ
ಥಾವಿಳಾಸದ ಮಾತ ಬೀಱದೆ
ಕಾವುದೈ ಕರುಣದಲಿ ಮಾಯೆಯನೆಂದಳಾ ವಿಮಳೆ ॥ ೭೬ ॥

ಒಂದು ಬೀಜವ ಬಿತ್ತಿ ಮೇಣ್ ಮ
ತ್ತೊಂದು ಫಲವನು ಬಯಸಿ ಬಾತೊಡೆ
ಬಂದುದಹುದೇ ತನಗೆ ದಿಟ ನೀ ಮಾಯೆ ಮರುಳಾಗಿ
ಮುಂದುಗಾಣದೆ ಮದದ ತಾಮಸ
ದಿಂದೆ ಸಂಚಲಭಕ್ತಿಭರದಲಿ
ಬಂದೊಡುಂಟೇ [1]ಸತ್[1]ಫಲಂಗಳು ವಿಮಳೆ ಕೇಳೆಂದ ॥ ೭೭ ॥

ಆದೊಡೆಲೆ ಘನಮಹಿಮ ನಿನ್ನಯ
ಪಾದಗಳನೆಂತಾದೊಡೆಯು ಸಂ
ಪಾದಿಸಿದ ಬಳಿಕಿನ್ನು ನಿನ್ನಯ ಕರುಣವಿದ್ದಂತೆ
ಕಾದು ರಕ್ಷಿಸು ಮನಸು ಬಂದೋ
ಪಾದಿಯಲಿಯೆಂದೆನುತೆ ಮಧುರಾ
ಮೋದವಚನವ [2]ಸುರಿಸು[2]ತಿರ್ದಳು ವಿಮಳೆಯಲ್ಲಮಗೆ ॥ ೭೮ ॥

ವಿಮಳೆ ವಿಮಳೆಯೆನಿಪ್ಪ ಹೆಸರನು
ಕಮಳಸಂಭವ ನಿನಗೆ ಸಲಿಸಿದ
ಸಮಳಮತಿ[3]ಯವ[3]ನಹುದು ಚಾಗುರೆ ಎನುತೆ ಪರಿಣಮಿಸಿ
ಕ್ರಮದಲಿನ್ನಾದೊಡೆಯು ಮಿಗೆ ವಿ
ಶ್ರಮಿಸಬೇಕೆಂದೆನುತೆ ಬಳಿಕ
ಲ್ಲಮನು ಮಿಗೆ ವಿನಯದಲಿ ಮಾಯಾದೇವಿಗಿಂತೆಂದ ॥ ೭೯ ॥

೧. ಸಂ (ಕ, ಚ.) ೨. ನಾಡು (ಗ.); ನುಡಿವು (ಬ.) ೩. ನೀ (ಇ.)

ಕಾಮವೆತ್ತಲು ಪರಮತತ್ವದ
ಸೀಮೆಯೆತ್ತಲು ತಿಮಿರವೆತ್ತಲು
ತಾಮರಸಸಖನೆತ್ತ[೧]ಲ[೧]ರಿಸಿನವೆತ್ತ ಬಿಸಿಲೆತ್ತ
ಭ್ರಾಮಕದ ನುಡಿ ಸಾಕು ನೀನೆ
ತ್ತಾ ಮಹಾಘನವೆತ್ತ ಮರುಳೇ
ಕ್ಷೇಮದಲಿ ನೀ ಬಂದ ಬಟ್ಟೆಯಲಬಲೆ [೨]ಹೋಗೆ[೨]ಂದ ॥ ೮೦ ॥



ಕನಸು ಮನಸಿನೊಳಾಗಳೆನ್ನಯ
ತನುವಿನಲಿ ನೀ ಸುಳಿದು ಮುಚ್ಚಿಸಿ
ಯಿನಿತು ಧಾವತಿಗೊಳಿಸಿ ನಿ[೩]ಷ್ಕರುಣದಲಿ[೩] ನೀನೆನ್ನ
ಕನಲಿ ನುಡಿದೊಡೆ ನಾನು ಬಿಡುವೆನೆ
ತನಗೆ ತತ್ತಡೆ ಭಾವಿಸಲು ಸಾ
ವನಿತು ಬಂದೊಡೆ ಬರಲಿ ಬಿಡೆನಾನೆಂದಳಾ ಮಾಯೆ * ॥ ೮೧ ॥



ಕನಸಿನಲಿ ಚೇಳೂಱಿದೊಡೆ ವೇ
ದನಿಸಿತೆಂದಿ[೪]ರದೆ[೪]ದ್ದು ನರಳುವ
ಮನುಜರುಂಟೇ ಮರುಳೆ ನಿನ್ನ ಮನೋವಿಕಾರಗಳು
ನಿನಗೆ ತೋಱಿದೊಡೆಮ್ಮೊಳೇತಕೆ
ಮನ[೫]ಕತವ[೫] ನೀ ಮಾಡುತಿಹೆ ನಾ
ವಿನಿತು [೬]ಗಸಣೆಯ[೬] ಗೊಡೆವೆಗಾಱಿವು ಮಾಯೆ ಕೇಳೆಂದ ॥ ೮೨ ॥

ವಾಸಿ ಹುಟ್ಟಿದ ಬಳಿಕ ನಾಸಿ
ನ್ನೇಸುದಿನವಿದ್ದಾದೊಡೆನ್ನಯ
ಭಾಷೆಯನು ನಾನುತ್ತರಿಸಬೇಕಲ್ಲದುಳಿದಂತೆ
ಆಸೆಯಿಲ್ಲದೆ ತಿರಿಗಿದೊಡೆ ಹೆಂ
ಗೂಸುತನಕದು ಹಾನಿ[೭]ಯಾ[೭] ಕೈ
ಲಾಸಕಾನೆಂತೈದುವೆನು ಕೇಳೆಂದಳಾ ಮಾಯೆ † ॥ ೮೩

೧. ವ (ಎ.) ೨. ಸಾರೆ (ಇ.) ೩. ಷ್ಕುರದಲ್ಲಿ (ಗ.) ೪. ರುಳೆ (ಇ.) ೫. ತವಕ
೬. ಬೇಟದ (ಜ.) ೭. ಯ್ಯೊ (ಅ.)

* ಈ ಪದ್ಯ (ಉ.) ಪ್ರತಿಯಲ್ಲಿ ಇಲ್ಲ. † ಈ ಪದ್ಯ (ಇ.) ಪ್ರತಿಯಲ್ಲಿಲ್ಲ.

ಕಡಲ ನೀರುಗಳೆಲ್ಲವಮೃತದ
ಮಡುಗಳಾದರೆಯಹುವು ಸುರಗಿರಿ
ಕುಡಿವಿಡಿದು ಹಬ್ಬಿದೊಡೆ ಹಬ್ಬುವುದವನಿಮಂಡಲದಾ
ಗಿಡುಗಳೆಲ್ಲವು ಕಲ್ಪತರುವಾ
ದೊಡೆಯಹುವು [೧]ತತ್ತದನುಗಾ[೧]ಲಕೆ
ಮಡದಿ ಮಾಯೆಗೆ ಪರಮತತ್ವಜ್ಞಾನವಿಲ್ಲೆಂದ || ೮೪ ||

ನುಡಿದು ನುಣ್ಣನೆ ನೀನು ಮೆಲ್ಲನೆ
ಸಡಿಲಿ [೨]ಹೋದರೆ ನಾನು ನಿನ್ನನು[೨]
ಬಿಡುವೆನೇ ಕೇಳೆನ್ನ ಪೈಜೆಯ ಸಲಿಸಿದನ್ನಬರ
ಒಡಲು ನಿನಗಿಲ್ಲೆಂಬ ಬಿಂಕದ
ಬೆಡಗು ಬೇಡಿನ್ನೇನ ಮಾಡಿಯು
ತುಡುಕಿದಲ್ಲದೆ ಮಾಣೆನೆಂದಂಗೈಸಿದಳು ಮಾಯೆ || ೮೫ ||

ಬಯಲ ಬಂಧಿಸಲೆಂದು ಕೃತನಿ
ಶ್ಚಯವ ಮಾಡಲು ಸಿಕ್ಕಬಲ್ಲುದೆ
ನಿಯತವೆನ್ನನು ಹಿಡಿದುಕೊಂಬೊಡೆ ನೋಡು ನೀನೆನುತೆ
ಪ್ರಿಯದಲಾಗಳೆ ತನ್ನ ನಿಜನಿ
ರ್ಣಯವ ನಿರ್ಮಿಸಿ ನಿಮಿಷದಲಿ ನಿ
ರ್ಣಯಲಜಾಲವ ಬೀಸಿ ಹೋದನು ಮಾಯೆಗಲ್ಲಮನು || ೮೬ ||

ಜಾಱಿದನು ಬಳಿಕಾತನೀಕೆಗೆ
ಹೇಱಿದುದು [೩]ಕಡು[೩]ದುಗುಡ ಸಖಿಯರು
ನೀಱೆಯನು ಸಂತೈಸಿದರು ನಾನಾಪ್ರಕಾರದಲಿ
ಗಾಱುದೂಱನ ಮಾಯೆ[೪]ಗೀಯೆಗೆ[೪]
ತೋಱುಸುವನೇ ತನ್ನ ನಿಜ[೫]ವನು[೫]
ಮೀಱಿ ಮೀಸಲನಲ್ಲಮಪ್ರಭು ಗುರು ಗುಹೇಶ್ವರನು || ೮೭ ||

**ಅಂತು ಗತಿ ೭ಕ್ಕಂ ಪದ ೩೭೪ಕ್ಕಂ ಮಂಗಳಂ**

೧, ಎತ್ತಾನುಕಾ (ಉ, ಓ.) ; ಪೊಂದಾನುಕಾ (ಇ, ಜ.) ೨. ಹೋಗುವೆನೆಂಪಡೆಯು ನಾ ೩. ಬಲು (ಅ.) ೪. ನಿನಗೆಯು (ಗ.) ೫. ಜಲಿ (ಉ, ಬ, ಕ.)

# ೮ ಬಸವಾದಿ ಪ್ರಮಥರು ಧರೆಗಿಳಿದ ಗತಿ

**ಸೂಚನೆ:**

ಗಿರಿಸುತೆಯು ಸಾತ್ವಿಕದ ಕಳೆಯುನು
ವರವೃಷೇಂದ್ರಪ್ರಮುಥಗಣವನು
ಧರೆಗೆ ಕಳುಹಿದನೀಶನೊಲಿದಲ್ಲಮುನಸಜ್ಜುಯುಲಿಕೆ

ಲಿಂಗಭಕ್ತರು ತಿಳಿವುದೀ ಪ್ರಭು
ಲಿಂಗಲೀಲೆಯೊಳಿನ್ನು ಮಾಯೆಯ
ಭಂಗಿಸಿದ ಸಿರ್ಲೇಪಸಿಧಿಯಲ್ಲಮುನ ಕೃಪೆಯಿಂದೆ
ಹಿಂಗದವನೀತಳದ ಸಕಲಜ
ನಂಗಳನು ಪಾವನವ ಮಾಡಲ
ನಂಗರಿಪು ನಿಜಗಣವ ಕಳುಹಿದ ಕಥನ[೧]ಕಾರಣ[೧]ವ || ೧ ||

ಮಂದಮತಿಯಲಿ ನಿಜವ ಸಾಧಿಸ
ಲೆಂದು ಕಳವಳಗೊಂಡು [೨]ಹೂಣಿ[೨]ಸಿ
ಬಂದೊಡಲ್ಲಮುಲಿಂಗ ಸಿಕ್ಕದೆ ಹೋದ ಭೇದದಲಿ
ಮುಂದುಗಾಣದೆ ಮೂರ್ಛೆ[೩]ವೋಗುತ್ತೆ[೩]
ವೃಂದಮಧ್ಯದೊಳಾ ವಿಳಾಸಿನಿ
ವೃಂದಸಹಿತ ಮಹಾ ಪ್ರಲಾಪಿಸುತಿರ್ದಳಾ ಮಾಯೆ || ೨ ||

ಮಗಳು ಮದ್ದಳೆಯವನ [೪]ಬೆನ್ನಲಿ[೪]
ಜಗುಳಿ ಹೋದುದ ಕೇಳಿ ಹರಿತಂ
ದಗಣಿತವ್ಯಾಮೋಹದಲಿ ಮಾಯಾಂಗನೆಯ ಕಂಡು
ನಗೆಗೆಡೆಯ ಮಾ[೫]ಡಿದೆಯೆಲಾ ದೇ
ಸಿಗನ ಸಂಗವ ಮಾಡಿ ಕೆಡಿಸಿದೆ[೫]
ಮಗಳೆ ಎನುತಲಿ ಮುಳುಗಿದನು ಮಮಕಾರ ಭೂಪಾಲ || ೩ ||

೧. ಕೌತುಕ (ಅ.) ೨. ಹುರುಡಿ (ಇ.) ೩. ಯುಲಿ ತದ್ (ಇ.) ೪. ಸಂಗಡ (ಅ.) ೫. ಮಾಡುವರೆ ಪರದೇಸಿಗನ ಸಂಗಡ ಸಿಕ್ಕಟಿ ಎಲೆ (ಅ.)

ಪ್ರ. ಲಿ. ೬. ಅ.

ಬೇಡ ಬೇಡೆಂದಾದಿಕಾಲದೊ
ಕಾಡಿ ತೋ[೧]ಱಿಸೆ[೧] ನಗಳ [೨]ತುದಿ[೨]ಯಲಿ
ಕೇಡು ಬಹುದಿದಱಿಂದಲೆಂದಾನೇಸ[೩]ನೊದಱಿ[೩]ದೊಡೆ
ಕೇಡುಗೊಳಿಸಿದೆ ಕಡೆಯುಲಡವಿಯು
ಕೂಡಿದಾ ನೀನೆನುತೆ[೪] ಖತಿಯಲಿ
ನೂ[೪]ಡಿ ಮುಳುಗುತೆ ಮಿಡಿಕುತಿರ್ದಳು ಮೋಹಿನೀದೇವಿ ॥ ೪ ॥

ಉಮೆಯ ನೇಮವ ಕೊಂಡು ತಾನ
ಲ್ಲಮನ ಸಾಧಿಸಲೆಂದು ಬಂದಳು
ನಿಮಗೆ ಹೇಳುವೆ ನಾನು ಚಿಂತಿಸ[೫]ಬೇಡ[೫] ನೀವಿದಕೆ
ದ್ಯುಮಣಿಯಲ್ಲಮ ಸಿಕ್ಕದಾದನು
ತಮದ ಮಾಯೆಗೆಯದಱ ಚಿಂತಾ
ಭ್ರಮೆಯುಲಡವಿಗೆ ಬಂದಳೆಂದಳು ವಿಮಳೆ[೬]ಯರಸಂಗೆ[೬] ॥ ೫ ॥

ಹುಸಿಯನಾಡಳು ವಿಮಳೆ ನಾನಾ
ಶಶಿಧರಗೆ ಪೈಜೆಯನು ಮಿಗೆ ಪಸ
ರಿಸಿದೆ ಕೈಲಾಸದಲಿ ಬಂದೆನು ತನ್ನಿಮಿತ್ತವಲಿ
ಅಸಮನಲ್ಲಮ ಸಿಕ್ಕ[೭]ದೀ ಪರಿ[೭]
ನುಸುಳಿ ಹೋದನು ನೀವು ನಮ್ಮಯ
ದೆಸೆಗೆ ಚಿಂತಿಸಬೇಡೆನುತಲಿಂತೆಂದಳಾ ಮಾಯೆ ॥ ೬ ॥

ಕಾರಣವ ಕೈಕೊಂಡು ನಿಮ್ಮ ಕು
ಮಾರಿಯಾದೆನು ಬ[೮]ಂದು ನ[೮]ಮ್ಮಯ
ಕಾರಿಯವು ಕೈಗೂಡದಾಯಿತ್ತೆನು[೯]ತೆ ಪಿತರ[೯]ರಿಗೆ
ಹಾರಬೇಡಿನ್ನೆಮ್ಮನೆನುತಲಿ
ಭೋರನೆದ್ದಾ ಮಾಯೆ ವಿಮಳಾ
ನಾರಿ ಸಹಿತವೆ ಹೋಗುತಿರ್ದಳು ರಜತಪರ್ವತಕೆ ॥ ೭ ॥

೧. ಱಿಸೆ (ಅ, ಇ.) ೨. ಕಡೆ (ಅ, ಉ.) ೩. ನೋಡಿ (ಉ.) ೪. ಖಾತಿಯು। ಲಾ (ಇ.) ೫. ಬೇಕೆ (ಮ.); ಲಿಲ್ಲ (ಅ, ಕ, ಗ.) ೬. ಮೋಹಿನಿಗೆ (ಗ.) ೭. ದಾದನು (ಇ.) ೮. ಳಕಲೆ (ಗ.) ೯. ತ ಪಿತೃ (ಅ, ಇ, ಗ.); ತ ಲಿಲ್ಲ (ಅ.)

ಅಳಲಿದರು ಮಗಳಗಲಿದರೆ ಮಿಗೆ
ಬಳಲಿದರು ಭಾರಂಕದಲಿ [೧]ಕಡು
ಗಳಲಿದರು ಕಂದಿದರು ಕಳವಳಿಸಿದರು[೧] ಮೋಹದಲಿ
ತೊಳಲಿದರು ಕಾನನದೊಳಗೆ [೨]ಹಂ
ಬ[೨]ಲಿಸಿದರು ಹವ್ಮ್ಯೃಸಿದರು ಕೋ
ಮಳೆಯ ಕಾಣದೆ ಮೋಹಿನಿಯು ಮಮಕಾರಭೂಮಿಪ[೩]ನು[೩] ॥ ೮ ॥

ಕೇಳಿ ಬಂದನು ಬಳಿಕ ಭೂಮೀ
ಪಾಲಕನ ಗುರು ತಾನೆನುತ್ತಾ
ವೇಳೆಯುಲಹಂಕಾರನಾ ಮಱುಕವನು ಮಾಣಿ[೪]ಸುತೆ[೪]
ಹೇಳೆನೇ ನಾನಂದು ಕಾರಣ
ಬಾಲಿಕೆಯ ಪರಿಗಳನು ಕಾಣುತೆ
ಕಾಲದಲಿ ನಿಮಗಱಿಯಬಾರದೆ ಭೂಪ ಕೇಳೆಂದ ॥ ೯ ॥

ಏನು ಕಾರಣ ಬಂದಳೋ ಬಳಿ
ಕೇನು ಕಾರಣ ಹೋದಳೋ ನಾ
ವೇನ ಬಲ್ಲೆವು ಬಱಿದೆ ಚಿಂತಿಸಬೇಡ ಸಾಕೇಳು
ನೀನು ನಿಜಪುರಕೆನುತಲೊಡಗೊಂ
ಡಾ ನರೇಂದ್ರನ ಸತಿಸಹಿತ ದು
ಮ್ಮಾನವನು ಪರಿಹರಿ[೫]ಸಿ ತಂದ[೫]ನು ಬಳಿಕಹಂಕಾರ ॥ ೧೦ ॥

ಜನಪ ಕೇಳ್ಳೈ ತಥ್ಯವನು ಮೋ
ಹಿನಿಗೆ ಮಮಕಾರಗೆಯಹಂಕಾ
ರನ ಮಹಾಕೃಪೆಯುಳ್ಳೊಡಂತಾ ಮಾಯೆ ತಾನೆನಿಪ
ತನುಜೆಯರು ಹುಟ್ಟುವುದಪೂರ್ವ[೬]ವೆ[೬]
ಎನುತಲಾಪ್ತರು ಮಂತ್ರಿಗಳು [೭]ತ
ಜ್ಞ[೭]ನಪತಿಯ ಸಂತೈಸಿ ಸುಖದಿಂದಿರ್ದ[೮]ರವನಿಯ[೮]ಲಿ ॥ ೧೧ ॥

೧. ಕಳ। ವಳಿಸಿದರು ಕಡುದುಃಖದಿಂದಾತ್ಮಜೆಯ (ಅ.) ೨. ಬಲು। ಜ್ವ (ಇ.) ೩. ರು (ಐ.) ೪. ಸಲು (ಇ.) ೫. ಸುತಿರ್ದ (ಇ.) ೬. ತೆ (ಐ.) ೭. ಮಿಗೆ। ಜ (ಇ.) ೮. ರೊಲವಿನ (ಅ, ಬ.)

ವಿಮಳೆಸಹಿತವೆ ಹೋಗಿ ತನಗ
ಲ್ಲಮನು ಸಿಕ್ಕದೆ ಹೋದ ಕಾರ್ಯ
ಕ್ರಮವನಾಗಳೆ ಮಾಯೆ ಹೇಳಿದಳತ್ತ ವಿಸ್ತರಿಸಿ
ಉಮೆಯುದೆಲ್ಲವ ಕೇಳಿ ಚಿಂತಾ
ಭ್ರಮೆಯಲಿರುತಿರಲಜುದು ಬಂದಾ
ರಮಣಿಯನು ಸಂತೈಸಿ ನುಡಿದನು ನಗುತೆ ಶಶಿಮೌಳಿ || ೧೨ ||

ಸಿಡಿಲುವಕ್ಕಿಯ ಪಕ್ಕವನು ಕಿ
ತ್ತಡಬಳದ ಬಾಣಸವ ಮಾಡುವ
ಕಡುಗಲಿಗಳಾರುಂಟು ಕಾಳೋರಗನ ನಿದ್ರೆಯನು
ಕೆಡಿಸಿ ಬದುಕುವ ಕೀಲಣದ ಗಾ
ರುಡಿಗರಾರುಂಟೆನ್ನ ತತ್ವದ
ತೊಡಕು ದುರ್ಘಟ ಚಿಂತೆಯೇತಕೆ ಗಿರಿಜೆ ಕೇಳೆಂದ || ೧೩ ||

ಅಲ್ಲಮನ ಮುಖದಿಂದಲೀಕೆಯ
ನಲ್ಲವೆನಿಸಿದೆ ನೀನೆ೧ಯ್ಯೆಸಲೆ
ಅ೧ಲ್ಲದೆನ್ನ ಸಮಾನ ಮಾಯೆಯ ಜಜುದು ಜಾಡಿಸುವ
ಬಲ್ಲಿದರದಾರುಂಟು ನಮ್ಮಯೆ
ಸೊಲ್ಲಿಗಾಯಿತು ಸೋಲವೆನುತಾ
ವಲ್ಲಭಗೆ ದುರ್ಲಭಗೆ ಸುಲಭಗೆ ನುಡಿದಳಾ ಗಿರಿಜೆ || ೧೪ ||

ನೀನೆ ನಿನ್ನಯೆ ಗರ್ವತನದ
ಜ್ಞಾನದಲಿ ಮಾಯೆಯನು ಕಳುಹಿದೊ
ಡಾ ನಿರೂಪನು ಸಚ್ಚಿದಾನಂದೈಕರಸಮಯನು
ತಾನು ಸಿಕ್ಕುವನೇ ವೃಥಾ ದು
ಮ್ಮಾನವೇಕೆಂದೆನುತಲೀಶ್ವರ
ಮಾನಿನಿಯ ಮೂದಲಿಸಿ ನುಡಿದನು ನಗುತೆ ವಿನಯದಲಿ || ೧೫ ||

೧. ಬಳಿಕೇನ (ಇ, ಕ, ಗ, ಜ.)

ಎಲೆ ಸದಾಶಿವ ನಿನ್ನೊಳಾದೊಡೆ
ಛಲಕೆ ನಾನಂಜುವೆನು ನಿನ್ನಯ
ಬಲುಹಿಗಾನಿದಿರಲ್ಲ ನಿನ್ನಯ ಕರುಣ[೧]ವಿದ್ದ[೧]ಂತೆ
ಸಲಹಿ ನಿನ್ನ ನಿಜಸ್ವರೂಪದ
ನಿಲವನಱುಹಿಸಿಯೆನ್ನ ಸಲುಗೆಯ
ಸಲಿಸಬೇಕೆಂದಗಜೆ ನುಡಿದಳು ಮತ್ತೆ ಪಶುಪತಿಗೆ ॥ ೧೬ ॥

ಆ ನುಡಿಯ ಕೇಳುತ್ತೆ ಕರುಣಾಂ
ಭೋನಿಧಾನನು ಮೆಚ್ಚಿಯಾದೊಡೆ
ನೀನು ಮುನ್ನಲಿ ನಿನ್ನ ತಾಮಸಗುಣದ ಮಾಯೆಯನು
ಏನು ಕಾರಣ ಕಳುಹಿ ಭಾಷೆಗೆ
ಹೀನವನು ನೀ ಹಡೆದೆ ನಾವಿದ
ಕೇನ ಮಾಡಲಿಬೇಕು ಬೆಸನನು ಗಿರಿಜೆ ಹೇಳೆಂದ ॥ ೧೭ ॥

ಮೂಗು ಹೋಗಿಹ ಮು[೨]ಸುಡಿನವ[೨]ಗಿದಿ
ರಾಗಿ ಕನ್ನಡಿದೋಱು ಲಜ್ಜೆಯ
ಬೇಗೆಯಲಿ ಬೇಯಿಸುವನಂತಿರೆ ಮೂದಲಿಸಲೇಕೆ
ತಾಗಿ ತಲೆಯೊಡೆದವರು ಭಾವಿಸೆ
ಬಾಗದಿಹರೇನಂತುಕಾರಣ
ಹೋಗಲಿನ್ನಾ ಮಾತೆನುತಲಿಂತೆಂದಳಾ ಗಿರಿಜೆ ॥ ೧೮ ॥

ಆವ ಪರಿಯಿಂದಱುವೆನಾದೊಡೆ
ದೇವ ನಿನ್ನ ನಿಜಸ್ವರೂಪದ
ಭಾವವನು ಪ್ರಜ್ವಲಿಸಿ ತಿಳಿವಂತೆನಗೆ ಕೃಪೆಮಾಡಿ
ಕಾವುದೆನೆ ಪಾರ್ವತಿಗೆ ದೇವರ
ದೇವನೀಕೆಯನಿ[೩]ನ್ನು[೩] ಕರುಣಿಸಿ
ಪಾವನವ ಮಾಡುವೆನು ನಾನೆನುತಭವನಿಂತೆಂದ ॥ ೧೯ ॥

೧. ಬಂದ (ಅ.) ೨. ಖದವರಿ (ಖ.) ೩. ೦ತು (ಉ.)

ನಿನ್ನ ನಿರ್ಮಳಸಾತ್ವಿಕದ ಸಂ
ಪನ್ನಕಳೆಯನು ಕಳುಹಿ ಧರೆಯೊಳು
ಚೆನ್ನೆಯಾಗಿರೆ ಜನಿಸಿ [1]ನೆಱೆ ನಿಷ್ಕಾಮ[1]ಭಕ್ತಿಯಲಿ
ಮುನ್ನಲಿರುತಿರಲಲ್ಲಮಪ್ರಭು
ತನ್ನ ತಾನೇ ನಿಜವ ತೋಱುವ
ನಿನ್ನ ಸಂಶಯವಿಲ್ಲ ದಿಟವಿದು ಗಿರಿಜೆ ಕೇಳೆಂದ ॥ ೨೦॥

ಎನೆ ಹಸಾದವ [2]ಸಲಿಸಿ[2] ಬದುಕಿದೆ
ನೆನುತೆ ಬಂಜೆಗೆ ಬೇಹ ಬಯಕೆಯ
ತನುಜನಾದಂತಾಕೆಯಾ ನುಡಿಗೇಳಿ ಪರಿಣಮಿಸಿ
ಮನದೊಳುತ್ಸಾಹಿಸುತೆ ತನ್ನಯೆ
ವಿನುತಸತ್ವಗುಣಸ್ವರೂಪವ
ನನುವಿನಲಿ ಸಂಜನಿಸ ಕಳುಹಿದಳುಮೆ ಧರಾತಳಕೆ ॥ ೨೧ ॥

ಬಳಿಕ ಸಂತೋಷದಲಿ ತನ್ನಯೆ
ಸಲುಗೆ ಬಿನ್ನಹವೆಂಬ ಬೀಜದ
ಬೆಳೆಗೆ ಹದವಳೆ ಹಣ್ಣೆ ಹಸರಿಸಿತೆನುತೆ ಹರುಷದಲಿ
ನಲಿದು ನಗುತಲಿ ಪರಮಪಾವನ
ಸುಲಭ ಕರುಣಾ[3]ಕಾರ[3] ಶಿವನಿ
ನ್ನೊಲವಿನಿಂದಾನಿನ್ನು ಬದುಕಿದೆನೆಂದಳಾ ಗಿರಿಜೆ ॥ ೨೨ ॥

ಆ ನುಡಿಯ [4]ನಾಕರ್ಣಿ[4]ಂಡು ಶಿವ ಶಿವ
ದೇನನಾಡಿದೆ ತಾಯೆ ನೀವೆಂ
ದೂ ನಿಧಾನಿಸಲಚಲಸುಖಿಗಳು ಶಿವನ ಕರುಣದಲಿ
ಹಾನಿಯಾವುದು ಮುನ್ನಲೀಗಲಿ
ದೇನು ಬಂದುದು ತಾವು ಹೊಳ್ದ ನೀ
ಧಾನ ತನಗಪುದೇನು [5]ವಿಸ್ಮಯ[5]ವೆಂದ ವೃಷಭೇಂದ್ರ ॥ ೨೩ ॥

೧. ನಿಶ್ಚಲಭಾವ (ಇ.) ೨. ಹಾಯ್ದು (ಅ, ಕ; ಗ, ಜ.) ೩. ಕರನೆ (ಇ.) ೪. ನೊಳಕೊ (ಬ.); ಕೈಕೊ (ಚ.) ೫. ಸೋಜಿಗ (ಬ, ಜ.)

ಇಲ್ಲದುದು ಬಹುದಿಲ್ಲ ದಿಟ ಮು
ನ್ನುಳ್ಳುದೇ ಬಹುದಂತು [೧]ಮುಂದಣಿ
ಗು[೧]ಳ್ಳ ಸಿದ್ಧಿಗೆಯವರ ವಾಸನೆ ನೀಡಿ [೨]ನಿಲುಕು[೨]ವುದು
ಬಲ್ಲೆ ನೀನದ ನಿನ್ನ ಭಾವನೆ
ಯೊಳ್ಳಿತೈ ಎಂದೆನುತೆ ಗೌರೀ
ವಲ್ಲಭನು ವರವೃಷಭರಾಜನ ಹೊಗಳುತಿಂತೆಂದ




ಹೂಳಿದರ್ಥವನಱಿಸಿ ಹ[೩]ಡೆವನ[೩]
ಕಾಲು ಕೊಂಡೊಯ್ವಂತೆ ನಿನ್ನಯೆ
ನಾಲಗೆಯೆ ತಾ ನುಡಿವುತಿದೆ ಶುಭಸೂಚನಾರ್ಥವನು
ಹೇಳಲೇನಿನ್ನಲ್ಲಮನ ಸ
ಮ್ಮೇಳದಲಿ ಸುಖಿಯಾಗು ಹೋಗಿ
ನ್ನೇಳೆನುತಲಾ ವೃಷಭರಾಜಂಗಭವನಿಂತೆಂದ

ನೀನು ಧರೆಯಲಿ ಮೆಱೆ[೪]ಯದಿ[೪]ರ್ದೊಡೆ
ತಾನು [೫]ಸಿಕ್ಕ[೫]ವನಲ್ಲ[೬]ವಲ್ಲಮ[೬]
ನೀನು ಭಕ್ತಿಯ ಮಾಡಿ ಕಾಣಿ[೭]ಸೆ[೭] ನಿನ್ನ ಕತದಿಂದೆ
ಸ್ವಾನುಭಾವಸುಖಸ್ವರೂಪನಿ
ಧಾನವನು ಸಾಧಿಸಲಿ ಸರ್ವರು
ಮಾನನಿಧಿ ಕೇಳೆನುತೆ ಬೆಸಸಿದನೀಶ ವೃಷಭಂಗೆ || ೨೬ ||

ಈತನೇ ಬಳಿಕಿನ್ನು ದಿಟವಾ
ಭೂತಳದೊಳಲ್ಲಮನನಱಿವ ಮ
ಹಾತಿಶಯವಹ ಭಕ್ತಿಯನು ನೆಱೆ ಮಾಡಿ ಮೆಱೆವವ[೮]ನು[೮]
ಏತಕೀ ಭ್ರಮೆಯೆನುತೆ ಮದಮತಿ
ಗೋತು ವೃಷಭನನಣಕವಾಡುತೆ
ಮಾತನಾಡಿದರಲ್ಲಿ ಕೆಲಬರು ಶಿವನ ಸಭೆಯೊಳಗೆ || ೨೭ ||

೧. ಕಾರಣ। ವು (ಇ, ಉ.) ೨. ನಿಲ್ಲು (ಅ.) ೩. ವಣಿಸಿ (ಇ.) ೪. ಯುತಿ (ಇ.) ೫. ಬೆಸಸು (ಇ.) ೬. ಮಪ್ರಭು (ಇ.) ೭. ಸು (ಅ, ಜ.) ೮. ನೇ (ಉ, ಗ, ಜ.)

ದೂಷಕರ ನುಡಿಗೇಳಿ ಮನದಲಿ
ರೋಷವನು ತಾಳಿದನೆ [೧]ಮುದದಲಿ[೧]
ವಾಸಿಯನು ಮಾಡಿ[೨]ದನೆ[೨] ಮಾಱುತ್ತರವನುಸುರಿದನೇ
ಈಸು ಶಮೆ ದಮೆ ಸಮತೆಯುಳ್ಳ ಸ
ದಾಶುಚಿಗಳಾರೆನುತೆ ವೃಷಭನ
ನಾ ಸದಾಶಿವ ಪೊಗುಳುತಿರ್ದನು [೩]ಪಂಚವದನ[೩]ದಲಿ ॥ ೨೮ ॥

ಮರುಳರಿವದಿರು ವೃಷಭರಾಜನ
ಪರಿಯನಱಿಯದೆ ನುಡಿದರಾದೊಡೆ
ಧರೆಯೊಳುದಯಿಸಿ ನೋಡಲಾತನ ಭಕ್ತಿಯುನ್ನತಿಯ
ಹಿರಿದು ತಮ್ಮಯ ಮನದ [೪]ಮುದ[೪]ಮು
ತ್ಸರವನೀಗಲಿಯೆನುತಲಾ ಶಂ
ಕರನು ಬಳಿಕವರುಗಳನಟ್ಟಿದನಂದಿಳಾತಳಕೆ ॥ ೨೯ ॥

ಮೆಱೆ[೫]ದು ಭೂಮೀತಳದೊಳುದಯಿಸಿ
ನೆಱೆ[೫] ವಿಚಾರಿಸಿ [೫]ನಿಮ್ಮ[೫] ನಿಮ್ಮಯ
ಕೊಱತೆಗಳನಲ್ಲಲ್ಲಿ ಸಾಧಿಸಿ ಮನಸು ದಣಿವಂತೆ
ನೆಱತೆಯೆನಿ[೬]ಸುವುದ[೬]ಚಲಪದವಿಯ
ನಱಿವುದೆನುತಲಿ ಕಳುಹಿದನು ಜಗ
ದೆಱೆ[೫]ಯ ಪಶುಪತಿ ವೃಷಭಮೊದಲಾಗಿರ್ದ ಶಿವಗಣವ ॥ ೩೦ ॥

ಬೀಳುಕೊಂಡುದು ಪ್ರಮಥಗಣದೊಳ
ಗೇಳುನೂರೆಪ್ಪತ್ತು ಗ[೭]ಡಣಕೆ[೭]
ಮೇಳವಾಯಿತು ರುದ್ರಕನ್ನೆಯರಲ್ಲಿ ಕೆಲಕೆಲರು
ಹೇಳಲೇನಾ ಚಂದ್ರಧರನ ಕೃ
ಪಾಳುತನವನು ಶಿವಗಣದ ಸುಖ
ದೇಳಿಗೆಯನವರವರ ಹರುಷದ ಮನದ ಹರವರಿಯ ॥ ೩೧ ॥

೧. ಶಿವಶಿವ (ಗ.) ೨. ದೊಡೆ (ಅ, ಉ, ಗ.) ೩. ಭಟ್ಟರಂಪ (ಉ, ಕ.) ೪. ಲಿಹ (ಅ.) ೫. ನೋಡಿ (ಅ.); ನೀವು (ಗ, ಮು.) ೬. ಸಿರ್ದ (ಜ.) ೭. ಣಕೆ ಸ (ಕ.)

ಹರಿ-ವಿರಿಂಚಿ-ಸುರೇಂದ್ರ-ಸುರಮುನಿ
ವರರು ಹರುಷಿತರಾಗಿ ದೇವಾ
ಪರಮಪಾವನವಾಯ್ತು ಧಾರುಣಿ ಹಲವು ಮಾತೇನು
ನಿರುಪಮದ ಗುರುಲಿಂಗಜಂಗಮ
ದಿರವನಱಿವೊಡೆ [1]ಸಾಧ್ಯವಿನ್ನಾ
ವರವೃಷೇಂದ್ರನ ಕತದಲೆಂದುದು[1] ಕೂಡೆ ತಮತಮಗೆ ॥ ೩೨ ॥

ಅಲ್ಲಮಪ್ರಭುಪಾದಪಂಕಜ
ದಲ್ಲಿ ಮಧುಕರವಾಗಿ ಮಂಡಿಸಿ
ಯೊಳ್ಳಿತೆನಿಪ ಶಿವಾನುಭಾವಾಮೃತದ ಬಂಡುಂಡು
ಬಲ್ಲಿತಹ ಬಗೆಯೆಂಬ ಹಸಿವಿನ
[2]ಹೊಲ್ಲವೆಯ ನೆಱೆ ನೀಗ[2]ಬೇಕೆಂ
ದೆಲ್ಲ ಬಂದರು ಬಳಿಕ ವೃಷಭಪ್ರಮಥಗಣವಿಳೆಗೆ ॥ ೩೩ ॥

**ಅಂತು ಗತಿ ೮ಕ್ಕಂ ಪದ ೪೦೭ಕ್ಕ ಮಂಗಳಂ**

೧. ವರವೃಷೇಂದ್ರನ। ಕರುಣಸಂಗದ ಕೆತದಲೆಂದರು (ಗ, ಜ.) ೨. ಗಲ್ಲಣೆಯ ನೀಡಾಡ (ಅ.)

## ೯ ಬಸವಾದಿ ಪ್ರಮಥರು ಜನಿಸಿದ ಗತಿ

ಸೂಚನೆ:

ವಸುಧೆಯೊಳು ಮಹದೇವಿಯಕ್ಕನು
ಬಸವರಾಜಪ್ರಮಥಗಣವಾ
ವಿಷಮ[೧]ವಾ[೧]ದಿಗಳೆಲ್ಲರುದಯಿಸಿ ಬಳೆದರೊಲವಿನಲಿ

ಪ್ರೇಮದಿಂದಲಿ ಕೇಳುವುದು ನಿ
ಸ್ಸೀಮರೆನಿಸುವ ವೀರಶೈವ
ಸ್ತೋಮ[೨]ರೆಲ್ಲರು[೨] ಮಿಗೆ ಪುರಾತನ[೩]ರಾವ ಪರಿಯಿ[೩]ಂದೆ
ಭೂಮಿಯಲಿ ಸಂ[೪]ಜನಿಸಿ ಬಳೆದ ಮ
ಹಾಮ[೫]ನೋಹ[೫]ರಚಾರುಚರಿತ್ರೋ
ದ್ದಾಮತೆಯ ಸಂಗತಿಯನೀ ಪ್ರಭುಲಿಂಗಲೀಲೆಯಲಿ ॥ ೧ ॥

ಇಳಿಯೊಳುಡುತಡಿಯೆಂಬ ಪಟ್ಟಣ
ದೊಳಗೆ ವೀರಶಿವಾಗಮಿಕ ನಿ
ರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭಶುಕ್ತಿಯಲಿ
ಚೆಲುವೆಯಾದ ಕುಮಾರಿಯೆಂಬ
ಗ್ಗಳದ ಮುತ್ತುದಯಿಸಿತು ಧರಣೀ
ತಳದೊಳಗೆ ಪಾರ್ವತಿಯ [೬]ಸಾತ್ವಿಕ[೬] [೭]ಗುಣವೆ[೭] ರೂಪಾಗಿ ॥ ೨ ॥

ಹೆಟ್ಟುಗೆಗೆ ಶಿವಯೋಗರಾಜ್ಯದ
ಪಟ್ಟಗಟ್ಟುವರಂತೆ ನೊಸಲಿನೊ
ಳಿಟ್ಟರಮಲವಿಭೂತಿಯನು ಭವಭವದ ಸೋಂಕುಗಳು
ಮುಟ್ಟದಂತಿರೆ ರಕ್ಷೆಯೆ[೮]ಂದೆನೆ[೮]
ಕಟ್ಟಿದರು ಕಂಠದಲಿ ಲಿಂಗವ
ನೊಟ್ಟಜೆಯಲಾ ಸುಮತಿ–ನಿರ್ಮಳರಾ ಕುಮಾರಿತಿಗೆ ॥ ೩ ॥

೧. ದಾ (ಐ.) ೨. ವೆಲ್ಲವು (ಅ, ಇ, ಕ.) ೩. ಪರಿಯನೊಲವಿ (ಕ.) ೪. ಸಲೆ (ಕ.)
೫. ಹಂತ (ಬ.) ೬. ಪಾವನ (ಖ.) ೭. ಕಳೆಯೆ (ಜ.) ೮. ನುತಲಿ (ಗ.)

ಪರಮಸಿಕ್ಕೆಯ ಮುಟ್ಟ ತೋಱುವ
ಪರಿಯಲಾತ್ಮಜೆಯುತ್ತಮಾಂಗದೊ
ಳಿರಿಸಿ ಹಸ್ತವನಲ್ಲಿ ಬೆರಸುವುದೆನುತೆ ಕಿವಿಯೊಳಗೆ
ನೆರಹುವಂತಿರೆ ಶೈವಪಂಚಾ
ಕ್ಷರಿಯನುಪದೇಶಿಸಿ ವಿನೂತನ
ಹರುಷದಲಿ [೧]ಹರಸಿ[೨]ದನು ನಿರ್ಮಳ ಮತ್ತೆ[೩] ನಿಜಸುತೆಯ ॥ ೪ ॥

ತೀವಿ ತನುವಿನಲತಿಮಹತ್ತರ
ದೇವತಾಕಳೆಯಿರಲು ವಿಗೆ ಮಾ
ದೇವಿಯೆಂಬೀ ಹೆಸರನಿಟ್ಟರು ನಿಜಕುಮಾರಿತಿಗೆ
ಭಾವೆ ಬಳೆವುತ್ತಿರಲು ನಿರ್ಮಳ
ದೇವ ಸುಮತಿಯ[೪]ರೀಪ್ಸಿತಾರ್ಥವ[೪]
ನೀವುತಿಹ ನಡೆ-ನುಡಿಯಲೊಪ್ಪುವ ಕಲ್ಪಲತೆಯಂತೆ ॥ ೫ ॥

ಈಕೆ ಭಕ್ತಿಯ ಬಳ್ಳಿಯಂತೆಯ
ನೇಕಪರಿಯಲಿ ಬಳೆವುತಿರ್ದಳು
ಲೋಕದೊಳು ತಾನಲ್ಲದಿಲ್ಲೆನಲ[೫]ತುಳ[೬]ಮಹಿಮೆ[೬]ಯ[೭]ಲಿ
ಆಕೆಯಂತಿರಲಿತ್ತಲೊಲಿದು ಪಿ
ನಾಕಿ ಕಳುಹಿದ ಮಹಿಮರೆಲ್ಲರು
ಬೇ[೮]ಕೆ[೮]ಂಬೆಡೆಗಳಲಿ ಸಂಜನಿಸತೊಡಗಿದರು ॥ ೬ ॥

ಶುದ್ಧಭಕ್ತಿಯ ಭರದ ಮೊಱಡಿಯ
ಮುದ್ದ[೯]ಯನ ಸತಿಯುದರ[೯]ನಿಧಿಯಲಿ
ಸಿದ್ಧರಾಮಶಶಾಂಕನೆಂಬ ಮಹಾಮನೋಹರನು
ಉದ್ಧರಿಸ ಹುಟ್ಟಿದನು ಯೋಗಿ[೧೦] ಸ
ಮೃದ್ಧ [೧೦]ಸೊನ್ನಲಪುರದೊಳೊಪ್ಪಿರು
ತಿರ್ದನಾತನನೇಕವಿಭವದಲಖಿಳಜಗವಱಿಯೆ ॥ ೭ ॥

೧–೨. ನೋಡಿ (ಬ, ಕ.) ೧–೩. ನೋಡಿದರು ನಿರ್ಮಳ ಸುಮತಿ (ಇ.) ೪. ರಿಂಗೆ ಪ್ರೇಮವ (ಇ.); ರಿಚ್ಛಿತಾರ್ಥವ (ಗ.); ರಿಷ್ಟಸಿದ್ಧಿಯ (ಜ.) ೫–೭. ಖಿಳವಿಭವದ (ಇ.) ೬. ಭಕ್ತಿ (ಆ); ಭಾಗ್ಯ (ಬ.) ೮. ಡೆ (ಇ, ಗ, ಜ.) ೯. ವೆಯ ಜಠರಾಂಬು (ಬ, ಗ, ಜ.) ೧೦. ಪ್ರಬುದ್ಧ (ಅ, ಜ.)

ಗೋಚರಿಸಂದಂತುಪಮದ ಭಕ್ತಿಯ
ನಾಚರಿಸಬೇಕೆಂದು ಮಡಿವಳ
ಮಾಚಿದೇವನು ಹುಟ್ಟಿದನು ಶಿವಭಕ್ತರುದರದಲಿ
ಈ ಚತುರ್ದಶಭುವನದೊಳು ಸಚ
ರಾಚರವ ಪಾವನವ ಮಾಡುವ
ಸೂಚನೆಯ ಶಿವಲಿಂಗಭಕ್ತಿಯ ಮಾಡುತಿರುತಿರ್ದ ॥ ೮ ॥

ಒಳ್ಳಿತಾಗಿ ಯಥಾಕ್ರಮಕ್ರಮ
ದಲ್ಲಿ ಪ್ರಮಥರು ರುದ್ರಕನ್ನೆಯ
ರೆಲ್ಲರುದುಭವಿಸಿದರು ಶುದ್ಧಶಿವೈಕ್ಯರುದರದಲಿ
ಮೆಲ್ಲಮೆಲ್ಲನೆ ಬಳೆದು ತಮತಮ
ಗುಳ್ಳ ಕಾಯಕವಿಡಿದು ಭೂತಳ
ದಲ್ಲಿ ಮೆಱೆವುತ್ತಿರ್ದರೀಶ್ವರಭಾವಭಕ್ತಿಯಲಿ ॥ ೯ ॥

ದಾನ-ಧರ್ಮಪರೋಪಕಾರವಿ
ಧಾನ ಗುರು-ಶಿವಭಕ್ತಿಯುಕ್ತಿಯ
ನೂನರೀತಿಯಲಿಂಗಳೀಶ್ವರಜಾಗವಾಡಿಯಲಿ
ಮಾನನಿಧಿಗಳು ಸುಕೃತಿಗಳು ಮಹಿ
ಮಾನತೆಯಲಿರುತಿಪ್ಪರದನಾ
ನೇನ ಹೇಳುವೆ ಮಾದರಸ ಮಾದಾಂಬಿಕೆಯರಿರವ ॥ ೧೦ ॥

ಆಕೆ ತಾನು ಪತಿವ್ರತಾಶೀ
ಲೈಕೆ ಮಾದರಸಾಂಕನಾದೊಡೆ
ಯೇಕಪತ್ನೀವ್ರತಗುಣಾನ್ವಿತನವರ ಜಠರದಲಿ
ಲೋಕದೊಳು ಗುರುಶಿಷ್ಯಸಂಗನಿ
ರಾಕುಳಿಕೆ ಸುಜ್ಞಾನವುದಯಿಸು
ವಾಕೃತಿಯ ಸುಕುಮಾರ ಸಂಜನಿಸಿದನು ಜಗವಱಿಯೆ ॥ ೧೧ ॥

೧. ಲ (ಇ.) ೨. ಲಿಂಗದ ನಿಷ್ಠೆಯುತನಾಗ (ಜ.) ೩. ವ ತಾನುಂಟುಮಾಡುವ, ಆ (ಇ.)

ಅಳನು ಮಿಡುಕನು ಮಿನುಗಿಸನು ಕಣ್
ಗಳನಿದೇನೆಂದವರು ಕಂಡು
ಮ್ಮಳಿಸಿ [೧]ಪಿತರುಗಳಱಿವು ಮಱಹಿನಲಿ[೧]ರಲು ಶಿವನೊಲಿದು
ತೊಳಗಿ ಬೆಳಗುತೆ ಬಂದು ಮಿಗೆ ಮನೆ
ಯೊಳಗೆ ಕುಳ್ಳಿತು ಶಿಶುವ ನಿಜಕರ
ತಳದೊಳೆತ್ತಿದನೊಲವಿನಿಂದಲಿ ಭಕ್ತವತ್ಸಲನು ॥ ೧೨ ॥

ಪರಮ ನೀನಹೆಯೆಂದು ನೊಸಲಲಿ
[೨]ಬರೆವನಂತಿರಲಿಟ್ಟ[೨] ಭೂತಿಯ
ನಿರುತ ನಿನ್ನುವನಗಲಿ ನಾನಿರೆನೆಂದು ಕುಱುಹಾಗಿ
ನೆರಹುವಂತಿರೆ ದಿವ್ಯಲಿಂಗವ
[೩]ಕೊರಳಿನಲಿಯವ[೩] ಧರಿಸಿ ಕರುಣಾ
ಕರ ಸದಾಶಿವನಾ ಮಹಾತ್ಮಗೆ ತಾನೆ ಗುರುವಾದ ॥ ೧೩ ॥

ನಂಬುಗೆಯ ಕೊಡುವಂತೆ [೪]ಹಸ್ತವ
ನಿಂಬಿನಲಿ ಮಸ್ತಕದೊಳಿರಿ[೪]ಸುತ
[೫]ಲುಂಬ ತಾಣವಿದೆಂದು ಕಿವಿಯಲಿ [೬]ಪ[೬]ಚ್ಚಿ ಪೇಳ್ವಂತೆ[೭]
ಶಂಭು ಪಂಚಾಕ್ಷರಿಯ ನೇಮಿಸಿ
ತುಂಬಿ ತನುವಿಗೆ ಬಸವ ನೀನೆಂ
ದೆಂಬ ನಾಮವನಿಟ್ಟು ಹೋದನು [೮]ದೇವ[೮] ನಿಮಿಷದಲಿ ॥ ೧೪ ॥

೧. ಮಾತಾಪಿತರುಗಳು ಮಲಗಿ (ಇ.)

೨. ಭರವಸದಲಿಟ್ಟನು ವಿ (ಗ.)

೩. ಪುರಹರನು ತಾ (ಗ.)

೪. ಮಸ್ತಕ। ದಿಂಬಿನಲಿ ಶುಭಕರನ ನಿಲಿ (ಆ.)

೫–೭. ಬೆಂಬಳಿಗೆ ಶಿವ ಬಂದು ಕರ್ಣಕೆ ಮಂತ್ರವನು ಪೇಳಿ (ಗ.)

೬. ಮು (ಇ.); ಮ (ಖ.); ಪೆ (ಆ, ಉ.)

೮. ಶಿವನು (ಜ.)

ಮಗನು [೧]ನಿಶ್ಚೈ[೧]ತನ್ಯದಿಂದಿರೆ
ಬೆಗಡುಗೊಂಡಳವಳಿದು ಮಱವೆಯ
ತ[೨]ಗಹು ತೆಗೆದೆಚ್ಚಱಕೆ ತೋಱತು ಜನನಿಜನಕರಿಗೆ
ಬಗೆವೊಡಿದು ಕನಸಲ್ಲ ಕರಸೋ
ಜಿಗವಲಾ ಪ್ರತ್ಯಕ್ಷವೆನುತವ
ರುಗಳು ಲಿಂಗವಿಭೂತಿಸಹಿತಿಹ [೩]ಸುತನ[೩] ನೋಡಿದರು ॥ ೧೫ ॥

ನೋಡಿಯುಪದೇಶವನು ಶಂಭುವೆ
ಮಾಡಿ [೪]ಹೆಸರನು ಬಸವನೆಂ[೫]ದೇ[೬]
ಕೂಡಿ ಕೊಟ್ಟನಲಾ ಶಿವಾ ನಮ್ಮಯ ಸಭಾಗ್ಯ[೭]ತೆಗೆ
ನೋಡಲೆಣೆಯಾ[೭]ರುಂಟೆನುತೆ ಕೈ
ಗೂಡಿ ಪುತ್ರೋತ್ಸಾಹ[೮]ಧರ್ಮ[೮]ವ
ಮಾಡಿ ಮಾದರಸಾಂಕ ಮೈವೆಚ್ಚಿದನು ಹರುಷದಲಿ ॥ ೧೬ ॥

ಆದುವಾತಗೆ ನಾಮಕರಣಗ
ಳಾದಿಯಾದ ಸಮಸ್ತವಿಭವವಿ
ನೋದವಾತಗೆ ಮಱೆದ ಮಾತನು ನೆನಸಿಕೊಟ್ಟಂತೆ
ವೇದ-ಶಾಸ್ತ್ರ-ಪುರಾಣವಾಗಮ
ವಾದಿಯಾಗಿಹ ಕರ್ಮಕಳೆಗಳು
ವೇದಿಸಿದುವೊಮ್ಮಿಂಗೆ ಕೇಳಲು ಬಸವರಾಜಂಗೆ ॥ ೧೭ ॥

ಉಪನಯನ[೯]ಲಕ್ಷವನು[೯] ಮುಂದಾ
ವಿಪುಲಮತಿ[೧೦]ಗ[೧೦]ಲ್ಲಮನು ತೋಱಸು
ವುಪಮೆಯನು ಸೂಚಿಸುವ ಪರಿಯಲಿ ಬಸವರಾಜಂಗೆ
ಉಪನಯನವಾಯಿತ್ತು ವಿಭವದೆ
ತ್ರಿಪುರವೈರಿಯ ಭಕ್ತಿಭಾವದ
ಲಪರಿಮಿತಮಹಿಮೆಯನು ತೋಱದನಾ ಮಹಾತ್ಮಕನು ॥ ೧೮ ॥

೧. ನಿಜ ಚೈ (ಖ.) ೨. ತೆ (ಒ, ಖ) ೩. ಶಿಶುವ (ಒ, ಖ, ಜ) ೪–೬. ಬಸವಾ ಎಂಬ ನಾಮವ (ಅ.) ೫–೬. ಬುದ (ಜ.) ೭. ವನು। ನೋಡಲಿನ್ನು (ಇ.) ೮. ವೆಲ್ಲ (ಜ.) ೯. ಲಕ್ಷಣವ (ಅ, ಖ.); ವನು ಮುಪದಿ (ಕ.) ೧೦. ಯು (ಅ, ಖ.)

ಇತ್ತಲಿವರಿರುತಿರ್ದರಾಗಳೆ
ಯತ್ತ ಪರವಾದಿಗಳು ಜನಿಯಿಸಿ
ಮತ್ತೆಯವರೊಳಗೊಬ್ಬನತಿಬಳವೀರಬಿಜ್ಜಳನು
ಉತ್ತಮದ ಕಲ್ಯಾಣದಲಿ ನೃಪ
ವೃತ್ತಿಯಿಂ[೧]ದಿರುತಿರ್ದ[೧]ನೇಕ
ಚ್ಛತ್ರದಲಿ ಭೂಮಿಯನು ಪಾಲಿಸುತಿರ್ದನೊಲವಿನಲಿ ‖ ೧೯ ‖

ಜನಪನಿರುತಿರಲತ್ತಲಿತ್ತಲು
ಜನನಿ-ಜನಕರ ಬೀಳುಕೊಂಡನು
ವಿನಯದಲಿ ತಮ್ಮಕ್ಕ ನಾಗಾಯಿಗಳ ಸಹವಾಗಿ
ಅನುಕರಿಸಿ ನಡೆತಂದು ತನ್ನಯ
ಮನವೊಲಿದು ಬಸವಣ್ಣ ಹೊಕ್ಕನು
ಜನಪ ಬಿಜ್ಜಳನಾಳುತಿಹ ಕಲ್ಯಾಣ[೨]ಪುರವರ[೨]ವ ‖ ೨೦

ಆ ನರೇಂದ್ರನ ಕಂಡು ಬಳಿಕಾ
ಸ್ಥಾನಮಧ್ಯದೊಳೊಂದು ದಿವಸವ
ನೂನಕಾರಣ ಲಿಖಿತ ಬಿದ್ದಿರಲದನು [೩]ತಿಳಿ[೩]ದೋದಿ
ಆ ನರೇಂದ್ರಂಗಪರಿಮಿತದ ನಿ
ಧಾನವನು ತಾ ತೆಗೆಸಿ [೪]ಸಲಿಸಿ[೪]ದ
ನೇನನೆಂಬೆನು ಬಸವರಾಜನ [೫]ಘನಮಹೋ[೬]ನ್ನತಿಯಾ[೬] ‖ ೨೧ ‖

ಭೂತಳಾಧೀಶ್ವರನ ಮನದೊಳ
ಗೀತ ಕಾರಣಪುರುಷನಹ [೭]ಸಂ
ಕೇ[೭]ತ [೮]ಮಿನುಗಲು[೮] ಕೊಟ್ಟನಂದು ಮಹಾಪ್ರಧಾನಿಕೆಯಾ
ಪ್ರೀತಿಯಿಂದೆ ವಿವಾಹವನು ವಿ
ಖ್ಯಾತಿ ಮಿಗೆ ವಿಭವದಲಿ ಮಾಡಿದ
ನೋತು ಬಿಜ್ಜಳರಾಯನೆಮ್ಮಯ ಬಸವರಾಜಂಗೆ ‖ ೨೨ ‖

೧. ದಾ ಭೂಪ (ಅ.) ೨. ಪಟ್ಟಣ (ಇ.) ೩. ತೆಗೆ (ಜ.) ೪. ತೋಱು (ಅ, ಬ.) ೫–೬. ಮಹಿಮೆಯು (ಅ.); ೫–೬. ಘನಮಹಾತ್ಮೆಯನು (ಇ, ಜ.) ೭. ನೆಂ। ದಾ (ಅ. ೮. ಹರುಷದಿ (ಅ.); ವೆನುತಲು (ಉ, ಕ.)

ಮಿಕ್ಕು ಭಕ್ತಿಯಲೊಂದು ದಿವಸದ
ಲಕ್ಕ ನಾಗಾಯಿಗಳು ಬಸವನ
ಲೊ[೧]ಕ್ಕುಮಿಕ್ಕ ಮಹಾಪ್ರಸಾದವನುಣಲು [೨]ಕ್ಷಣ[೨]ದೊಳಗೆ
ತಕ್ಕ ಶಿವತತ್ವಸ್ವರೂಪವೆ
ಸಿಕ್ಕಿ ಬೆಳೆದುದಯಿಸಲು ಕಾಣುತ
ಲಕ್ಕ[೩]ನಾ[೪] ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ[೫] ॥ ೨೩ ॥

ಧಾರುಣೀವಳಯದಲಿ ಕೀರ್ತಿಯು
ದಾರದಿಂದಿರುತಿರ್ದನುಮೆಯ ಕು
ಮಾರ ಷಣ್ಮುಖನಂತೆ ಸಕಳಕಳಾವಿ[೬]ಶಾರದನು[೬]
ವೀರಶೈವಾಗಮದ ವಿವಿಧವಿ
ಚಾರ[೭]ಪರ[೭] ಗುರುಲಿಂಗಜಂಗಮ
ಸಾರ ಪರಮಾರಾಧ್ಯನೆಮ್ಮಯ ಚೆನ್ನಬಸವಣ್ಣ ॥ ೨೪ ॥

ಪರಮಪೂರ್ವಾಚಾರ್ಯ ಬಸವೇ
ಶ್ವರನಿಗೊಬ್ಬ ಕುಮಾರನಾದನು
ಧರಣಿಯೊಳಗಪ್ರತಿಮಗುಣಗಣ[೮]ನಿಲಯ[೮]ನಾತಂಗೆ
ವರದ ಕೂಡಲ ಸಂಗಮೇಶನ
ನಿರುತ[೯]ನಾಮವನಿ[೯]ಟ್ಟು ಸುಖದಿಂ
ದಿರುತಲಿರ್ದನು ಬಸವದಂಡಾಧೀಶನೊಲವಿನಲಿ ॥ ೨೫ ॥

ಆದಿಯಲಿ ಕೈಲಾಸದೊಳು ಸಂ
ವಾ[೧೦]ದವನು ಮಾಡಿದವ[೧೦]ರೆಲ್ಲರ
ಮೂದಲಿಸಿ ಸತ್ತವರನೆತ್ತಿಯನೇಕಮಹಿಮೆಯನು
ಮೇದಿನಿಗೆ ತಾ ಮೆಱೆದು ನೆಱೆ ಪರ
ವಾದಿಗಳು ತಲೆ[೧೧]ದೂ[೧೧]ಗೆ ತನ್ನ ವಿ
ನೋದದಿಂದಿರುತಿರ್ದನೆಮ್ಮಯ ಬಸವದಂಡೇಶ ॥ ೨೬ ॥

೧. ವೊ (ಇ,ಗ.) ೨. ಮನ (ಜ.) ೩–೪. ರಿಂ (ಇ.) ೩–೫. ಬಸವೇಶ್ವರನ ಹೆಸರನುಯಿಟ್ಟಳತಿರ್ದಯಲಿ (ಜ.) ೬. ಳಾಸದಲಿ (ಅ.); ಸೋದದಲಿ (ಇ.) ೭. ಶ್ರೀ (ಆ.) ೮. ವಿಭವ (ಇ.) ೯. ವಹ ಹೆಸರಿ (ಇ.) ೧೦. ದಿಸಿದ ಮಹಮಹಿಮ (ಜ.) ೧೧. ವಾ (ಉ.)

ರೂಢಿ [1]ಮೆಚ್ಚ[1]ಲು ಹಲವು ಪರಿಯ ಪ
ವಾಡಗಳ ಮೆಱೆವುತೆ ನಿರಂತರ
ನೀಡುತಿರ್ದನು ನಿ[2]ಷ್ಠೆಯಿಂದಲಿ[2] ಲಿಂಗಜಂಗಮಕೆ
ಬೇಡಿದವರಿಗೆ ಬೇಡಿತನು ಕೈ
ಗೂಡಿ[3]ಸುತೆ[3] ದಾಸೋಹ[4]ತನದಲಿ[4]
ಮಾಡುತಿರ್ದನು ಬಸವದಂಡಾಧೀಶ ಭಕ್ತಿಯಲಿ ॥ ೨೭ ॥

[5]ನರ-ಶಿಲಾ-ಪಶುದೇಹ[6]-ಗೇಹ[7]-ದೊ
ಳಿ[8]ರಲು ನಾವಿ[9]ನ್ನಾಱೆವೆ[9]ನುತಲಿ
ಸುರತರುವೆ ಕೈಯಾಗಿ ಚಿಂತಾಮಣಿಯೆ ಮನವಾಗಿ
ಸುರರ ಧೇನುವೆ ಶಬ್ದವಾಗಿಯೆ
ನೆರೆದು ನೆಲಸಿದುವೆನಲು ಬಸವನ
ಕರ-ಮನೋ-[10]ವಚನಂಗಳಿತ್ತು[10]ವು ಸುಖವನಖಿಳರಿಗೆ ॥ ೨೮ ॥

ಸೋಕು-ಸುಯಿ-ನುಡಿ-ನೋಟ-ಮನವೇ
ಕೈಕ ಪರುಷಗಳಾಗಿ ವೇದಿಸಿ
ಬೇಕು ಬೇ[11]ಕೆ[11]ಂಬುದ ನಿರಂತರ ಲಿಂಗಜಂಗಮಕೆ
ಸಾಕು ಸಾಕೆನೆ ದಣಿಯೆ ನೀಡುತ
ನೇಕವಸ್ತುವ ನಿಚ್ಚನಿಚ್ಚಲಿ
ಲೋಕವನು ಪಾವನವ ಮಾಡಿದ ಬಸವ ಭಕ್ತಿಯಲಿ ॥ ೨೯ ॥

ಬಗೆವೊಡೀ ಪರಿ ಭಕ್ತಿಯಾ ಕೃತ
ಯುಗದಲಿಲ್ಲೆನೆ ಮಿಕ್ಕ ಡಕ್ಕಿನ
ಯುಗದಲೆಂದೂ ಇಲ್ಲವಿದು ಪೊಸತೆನುತೆ ಜಗದೊಳಗೆ
ನೆಗಳಿ ನಿರ್ವಂಚನೆಯ ಭಕ್ತಿಯ
ಮೊಗೆದು ಗಣತಿಂತಿಣಿಗಳಿರ್ದರು
ಜಗದೊಳಚ್ಚರಿಯಾಗಿ ನಿರ್ಮಳಭಾವ[12]ಶುದ್ಧಿ[12]ಯಲಿ ॥ ೩೦ ॥

೧. ಯಱಿಯು (ಜ.) ೨. ಚ್ಚ ನಿಚ್ಚ (ಜ.) ೩. ಸಲೆ (ಉ, ಕ, ಗ, ಜ.) ೪. ವಸುತಾ (ಜ.) ೫-೭. ಪರುಷ ಪಶು ತರುದೇವಲೋಕ (ಗ.) ೬-೮. ದೊಳಗಿರುತಿ (ಬ.) ೯. ನ್ನೀಕೆಯೆ (ಇ.) ೧೦. ವಾಕ್ಕೀವುತಿರ್ಪ (ಇ.) ೧೧. ಡೆ (ಇ, ಖ, ಜ.) ೧೨. ಭಕ್ತಿ (ಜ.)

ಮಲಯಜದ [೧]ಮರ[೧]ಗಾಳಿಸೋಂಕಿನ
ಉಳಿದ ಮರ ಪರಿಮಳಿಸುವಂತಿರೆ
ತಿಳಿಯಲೆಂದಲ್ಲಮನ ಕಾರಣ ಬಸವನುದಯಿಸಲು
ಇಳೆಯೊಳಾ ಮಹಿಮನ ಪದಾಂಬುಜ
ಗಳ ರಜಸ್ಸಿನ ರೇಣುಸಂಗದ
ಬಲುಹಿನಲಿ ಶಿವಭಕ್ತರಾದರು ನರರು ತಮತಮಗೆ ॥ ೩೧ ॥

ಭಕ್ತರಿಲ್ಲದ ರಾಜ್ಯವಿಲ್ಲೆನೆ
ಭಕ್ತರಿಲ್ಲದ ದೇಶವಿಲ್ಲೆನೆ
ಭಕ್ತರಿಲ್ಲದ ಗ್ರಾಮ ಗೃಹವೊಂದಿಲ್ಲವೆಂದೆನಲು
ಭಕ್ತಿ ಮಿಗೆ [೨]ಪೂರೈ[೨]ಸಿ ಭಾವಿಸಿ
ಭಕ್ತಿ[೩]ಯುಗ[೩]ವಾಗಿರ್ದುದಿಳೆ ಶಿವ
ಭಕ್ತಿಸೃಷ್ಟಿಯದೆನಲು ಬಸವನ ಘನದ ಮಹಿಮೆಯಲಿ ॥ ೩೨ ॥

ಒಂದು ಕಲ್ಯಾಣದ ಶಿವೈಕ್ಯ[೪]ರ[೪]
ನಿಂದ ನಿಲವಿನ ಮಹಿಮೆಯಂತಿಂ
ತೆಂದು[೫] ಹೇಳಲಿಕಱಿಯೆನ[೫]ಱಿದುದನೊಂದ ಹೇಳುವೆನು
ಇಂದುಮೌಳಿಯ ಸಗುಣಮೂರ್ತಿಯ
ತಂದುಮಾಡುವರುಡಿಸುವರು ಮಿಗೆ
ಬಂಧುತನವೊದಲಾದ ನಾನಾಪರಿಯಲೊಲಿಸುವರು ॥ ೩೩ ॥

ಮಿಕ್ಕ ಠಾವಿನ ಶಿವನ ಭಕ್ತರ
ಲೆಕ್ಕವನು ಹೇಳುವರೆಯಗಣಿತ
ಮುಕ್ಕುತಿರ್ದುದು ಧರಣಿ ಭಕ್ತಿರಸಾಬ್ಧಿಯೆಂಬಂತೆ
ಹೊಕ್ಕು ನೋಡಿದೊಡಾವ ಕಡೆಯಲಿ
ತಕ್ಕ ತಕ್ಕಂದದಲಿ ಶಿವನನು
ಸಿ[೬]ಕ್ಕಿಸುವ ಶಿವಭಕ್ತರಿರ್ದರು ಕೂಡೆ ಧಾತ್ರಿಯಲಿ ॥ ೩೪ ॥

೧. ತಂ (ಇ.) ೨. ಪ್ರಜ್ವಲಿ (ಇ.) ೩. ಮಯ (ಇ, ಖ.) ೪ ರು (ಚ.) ೫. ಬಲ್ಲವ ರಾರುವ (ಅ.) ೬. ಲೆ (ಚ.)

ಸ್ವಾತಿ ನಕ್ಷತ್ರದ ಸುವೃಷ್ಟಿಗೆ
ಯೋತು ಬಾಯ್ಗಳ ಬಿಟ್ಟು ಚಿಪ್ಪುಗ
ಳಾತುಕೊಂಡಿಪ್ಪಂತೆ ನಮ್ಮಯ ಗುರು ಗುಹೇಶ್ವರನ
ಖ್ಯಾತಕರುಣಾಮೃತವನಮಲ
ಪ್ರೀತಿಯಿಂದಲಿ ಹಾರುತಿರ್ದರು
ಭೂತಳದ ಶಿವಲಿಂಗಭಕ್ತರು ಕೂಡೆ ತಮತಮಗೆ || ೩೫ ||

ಅಂತು ಗತಿ ೯ಕ್ಕಂ ಪದ ೪೪೨ಕ್ಕಂ ಮಂಗಳಂ

# ೧೦ ಮಹಾದೇವಿಯಕ್ಕನ ಗತಿ

ಸೂಚನೆ

ತನಗೆ ಮನಸೋತಿರ್ದ ಕೌಶಿಕ
ಜನಪತಿಯನೊಲ್ಲದೆ ವಿರಕ್ತಿಯ
ನನು[೧]ಕರಿಸಿ[೧] ಮಾದೇವಿ ನಡೆದಳು ಭಕ್ತಿವೇದಿಯಲಿ

ಭಂಗವೇ ಬಸುಱಾದ ವಿಷಯಸು
ಖಂಗಳಿಗೆ [೨]ಮಿಗೆ[೨] ಹೇಸಿ ನಿರ್ವಿಷ
[೩]ಯಾಂಗದಿ[೩]ಂದಲಿ ಗುರು ಗುಹೇಶ್ವರಪಾದಪಂಕಜದ
ಸಂಗವನು ಮಾಡುವರೆ ಕೇಳುವು
ದಂಗವಿಸಿ ಮಾದೇವಿಯಕ್ಕನ
ಸಂಗತಿಯ ಸಂಭ್ರಮದ [೪]ಸಂ[೪]ಧಿಯ ಪದದ ಪದ್ಧತಿಯ || ೧ ||

ಇತ್ತಲೀ ಮಾದೇವಿ ಮಿಗೆ ಬಳೆ
ವುತ್ತಲಿದ್ದಳು ಜವ್ವನದ ಕಳೆ
ವೆತ್ತು ಭರದಲಿ ಪುಟವನಿಕ್ಕಿದ ಮಿಸುನಿಯಂದದಲಿ
ಉತ್ತಮದ ಮೈಲುಳಿಯ ಕಾಂತಿಯ
ಮತ್ತಗಜಗಮನದ ವಿಳಾಸದ
ತಿತ್ತವಣೆಯ [೫]ನವೀನರೀತಿಯ[೫] ಜಾತಿಭಾವದಲಿ || ೨ ||

ತುಂಬಿ ಲಿಂಗದ ನಿಷ್ಠೆಯೊಡನೆ ನಿ
ತಂಬ ಮೊಲೆ ಮುಡಿ ಹೆಚ್ಚಿ ಬಳೆದುವು
ಶಂಭುವಿನ ಸತ್ಕರ್ಮ ಭಕ್ತಿ ಜ್ಞಾನವೆಂಬಂತೆ
ಶಂಬರಾರಿಯ ಶಸ್ತ್ರಹತಿಯ ವಿ
ಡಂಬನೆಯ ಧಿಕ್ಕರಿಸಿ ತೋಱುವೆ
ನೆಂಬ ಭರದಲಿ ಜವ್ವನವ ಹೇಱುವಳು ಮಾದೇವಿ || ೩ ||

೧. ಮಿಡಿಸು (ಬ, ಕ, ಚ.) ೨. ಮನ (ಗ.) ೩. ಯುಂಗ (ಖ, ಕ.) ೪. ಶರ (ಚ.) ೫. ಲಿ ರತಿಯ ನೋಟದ (ಗ.)

## ತತ್ವಶಿಖಾಮಣಿ ಶ್ರೀ ಉಡುತಡಿಯ ಮಹಾದೇವಿ ಅಕ್ಕನವರು



ಮಹಾದೇವಿ ಅಕ್ಕನಿಗೆ ಶರಣು ಶರಣಾರ್ಥಿ

—ಚಾಮರಸ

ಪಡಿಯಚ್ಚು : ಬೆಂಗಳೂರು ಕಲ್ಯಾಣಭವನದ ಒಡೆಯರಾದ ಶ್ರೀ. ನಾ. ನಂ. ಶಿವಪ್ಪ ಸಹೋದರರ ಕೃಪೆಯಿಂದ.

## ಮಹಾನುಭಾವಿ ಶ್ರೀ ಕಲ್ಯಾಣದ ಬಸವಣ್ಣನವರು



ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ

—ಚಾಮರಸ

ಪಡಿಯಚ್ಚು : ಬೆಂಗಳೂರು ಕಲ್ಯಾಣಭವನದ ಒಡೆಯರಾದ ಶ್ರೀ. ಮಾ. ನಂ. ಶಿವಪ್ಪ

ಇರುತಲೊಂದಾನೊಂದು ದಿನವಾ
ಪುರದರಸ ವೈಹಾಳಿಯಿಂದೈ
ತರುತಿರಲು ಸಂಭ್ರಮವ ಕೇಳುತೆ ಬಂದು ಬಾಗಿಲಲಿ
ತರುಣಿ ನಿಂದು ನಿರೀಕ್ಷಿಸುತ್ತಿರೆ
ಧರಣಿಪತಿ ಕಾಣುತ್ತೆ ಕಾಮಾ
ತುರತೆ [1]ಮಿಗೆ[1] ಕ[2]ಂಗೆ[2]ಟ್ಟು ಕಳವಳಿಸಿದನು ನಿಮಿಷದಲಿ ॥ ೪ ॥

ಕನ್ನೆಯಿವಳಾ[3]ರವಳು[3] ಕೇಳಿದು
[4]ಬನ್ನಿರೋ ಎನೆ [5]ಹರಿದು ತಿಳಿದಾ[6]
ಕನ್ನೆಯಿಂತಪ್ಪವರ ಮಗಳೆಂದಱುಹಿದರು ಚರರು
ತನ್ನ ಮನದೊಳಗೆಣಿಸುತೀಕೆಯ
ನಿನ್ನು [7]ವ[7]ರಿಸುವೆನೆಂಬ ಭಳ[8]ವಾ[8]
ಸನ್ನಿಸಲು ಕೌಶಿಕ ಮಹೀಪತಿ ಹೊಕ್ಕನರಮನೆಯ ॥ ೫ ॥

ಎಳೆದು ತರಿಸಿದೊಡವಳ ಮನಸಿಗೆ
ಮುಳಿಸು ಮೇಲಪಕೀರ್ತಿ ಕೆಲಬರ
ಕಳುಹಿ ತಿಳಿವೆನೆನುತ್ತೆ ಹೆಗ್ಗಡಿತಿಯರನಟ್ಟೆ[9]ದೊಡೆ[9]
ಬಳಿಕಲವರೈತಂದು ಮಿಗೆ ನಿ
ರ್ಮಳನ ಸುಮತಿಯ ಕೇಳಿದರೆ ನೃಪ
ಕುಲದವಗೆ ಕೊಡೆವೆಂದರವರಾ ನಿಜಕುಮಾರಿತಿಯ ॥ ೬ ॥

೧. ಯುಲಿ (ಗ.)
೨. ಚ್ಚು (ಜ.)
೩. ರೆಂದು (ಇ, ಗ.)
೪-೬. ಬನ್ನಿರೆನೆ ಹರಿತಂದು ಕೇಳಲು (ಇ.)
೫-೬. ಕೇಳಿ ಬಂದಾ (ಅ.); ಬೇಗ ಹರಿದಾ (ಬ.)
೭. ತ (ಅ, ಇ, ಗ.)
೮. ವಸ (ಜ.)
೯. ದನು (ಜ.)

ಅರಸ[1]ಗಿದಿರೇ ನೀವು[1] ಸುಮ್ಮನೆ
ಸರಸದಿಂದಲಿ [2]ಕೊಡು[2]ವು[3]ದೊಳ್ಳಿತು[3]
ವಿರಸವಾದೊಡೆ ನೀವು ಮಾಡುವುದೇನು ಭೂಪತಿಯ
ಮರುಳತನಗ[4]ಳು [5]ಬೇಡ[5] ನಿಮ್ಮಯ
ತರುಣಿಯುಂಡುಟ್ಟಿಹಳು[6] ನಾನಾ
ಪರಿಯಲೊಳ್ಳಿಹ ದಾಯವೆಂದ[7]ಱುಹಿದರು[7] ನಿರ್ಮಳಗೆ ॥ ೭ ॥

ತಾಯ ಮಾಱಿಯೆ ತೊತ್ತ ಕೊಂ[8]ಬೀ
ದಾ[8]ಯವನು ಸುಡು [9]ವಿಷಮ[9]ಕುಲದಲಿ
ಕಾಯದಾಸೆಗೆ ಕೊಳುಕೊಡೆಯ ಕಳವಳಿಸಿ ಮಾಡಿದೊಡೆ
ನಾಯಕದ ನರಕಗಳು ತಪ್ಪವು
ರಾಯ ಮಾಡುವುದೇನು ಬಳಿಕೇ
ನಾಯತವು ಸಾಕೆನುತೆ ನಿರ್ಮಳನವರಿಗಿಂತೆಂದ ॥ ೮ ॥

ಆಕೆಯನು ಕೇಳುವುದು ದಿಟ ಬಳಿ
ಕಾಕೆ ಸಣ್ಣಹ ಮಗಳೆಯುದಱಿಂ
ದಾಕೆಯನೆ ನೆಱೆ ತಿಳಿದೊಡಂಬಡಿಸುವುದು ಬುದ್ಧಿಯಲಿ
ಆಕೆ ತಾನಹುದೆಂದಳಾದರೆ
ಯಾಕೆಯನು ನಾವಾಗಳಿತ್ತಪ
ರೇಕೆ ಬಹುಮಾತೆನುತೆ ನಿರ್ಮಳ ನುಡಿದನ[10]ಂಬಲೆಯರ[10] ॥ ೯ ॥

೧. ಗಿದಿರಾರಿಲ್ಲ (ಗ.); ನಲ್ಲಿಗೆ ನೀವು (ಜ.)
೨. ಯೀ (ಜ.)
೩. ದುಚಿತವು (ಅ.)
೪–೬. ಳ ಬಿಟ್ಟು ನಿಮ್ಮಯ। ತರಳೆಯನು ಕೊಡಿರೆಂದು (ಅ.)
೫. ಸಾಕು (ಗ.)
೭. ರು ಸುಮತಿ (ಜ.)
೮. ಬ ವಿ। ದಾ (ಇ.); ಬೀ। ಕಾ (ಜ.)
೯. ರಾಜ (ಅ.)
೧೦. ವರೊಡನೆ (ಜ.); ಸತಿಯರಿಗೆ (ಇ.)

[೧]ಅನುಮತಿಸಿ ನಾರಿ[೧]ಯರು ಬಳಿಕಾ
ವನಿತೆಯನು ಕೇಳಿದರೆ ತನ್ನೊಳು
ನೆನೆದಳೊಂದನು[೨]ಮಾನವನು ತಾನೇ[೨] ವಿವೇಕದಲಿ
ಜನಪನಳುಪಿಗೆ ಹರುವ [೩]ಮಾಡು[೩]ವೆ
ನೆನುತಲಾ ಮಾದೇವಿ ಜಾಣೆನ
ವಿನಯದಲಿ ನಸುನಗುತಲಾಳಾಪಿಸಿದಳೊಳಗೊಳಗೆ ॥ ೧೦ ॥

ಪರಿಮಳವನಾರಿಕ್ಕಿದರು ಕ
ರ್ಪುರಕೆ ಕೋಗಿಲೆಗಾರು [೪]ಸೊಗಸಿನ[೪]
ಸರವ ಕಲಿಸಿದರಂಚೆಗಾರಡಿಯಿಡಲು ಕಲಿಸಿದರು
ಪರಿಕಿಸುವೊಡವಕಾ ಗುಣಂಗಳ
ನೆರವು ತಂದರೆ ಮನದಲಂತಾ
ಪರಿಯಲಾ ಮಾದೇವಿ ತಾನೇ ನೆನದಳೊಂದನುವ ॥ ೧೧ ॥

ನಾನೆ ಬೇಕಾಗಿರ್ದೊಡವನಾ
ನೇನ ಹೇಳಿದ ಮಾಡಲೆನುತಾ
ಮಾನಿನಿಯರೊಳು ನುಡಿದು ಮಧುರಾಳಾಪವಚನದಲಿ
ಆ ನರೇಂದ್ರನೆ ಬಂದು ನನ್ನ ಮ
ನೋನುರಾಗವ ಸಲಿಸುವಂತಿರೆ
ತಾನು ಶಪಥವ ಮಾಡಬೇಕೆಂದಳು ಮಹಾದೇವಿ ॥ ೧೨ ॥

[೫]ಐಸೆಲೇ[೫] ಎನುತದನು ಹೋಗಿ ವಿ
ಳಾಸಿನಿಯರಱುಹಿದೊಡೆ ಕೇಳಿ ಮ
ಹಾ ಸುಮಾನದಲರಸು ಬಂದನು ನಿರ್ಮಳನ ಮನೆಗೆ
ಕಾಸಿ ಕರಗಿದ ಲೋಹದಂತಿರೆ
ಘಾಸಿಯಾಗುತೆ ಮತ್ತೆ ಮನದಭಿ
ಲಾಷೆ ಹೆಚ್ಚಿತು ಮಾನಿನಿಯ ಕಾಣುತೆ ಮಹೀಪತಿಗೆ ॥ ೧೩ ॥

೧. ವಿನಯದಿಂ ಕೆಳದಿ (ಇ.) ೨. ತನ್ನ ತಾ ತಿಳಿಪತಿ (ಅ.); ವನು ವಿಚಾರಿಸಿ ತಾ (ಇ.) ೩. ಸೊಡ್ಡು (ಇ.) ೪. ಚಲುವಹ (ಗ.) ೫. ಲೇಸು ಇದು (ಜ.)

ಲಲನೆ ಕೇಳೌ ನಿನ್ನ ಬಯಕೆಯ
ಸಲಿಸುವೆನು ಮೊದಲಲ್ಲಿ ಬಳಿಕಾ
ನೊಲಿಸಿಕೊಂಬೆನು ನಿನ್ನನಂತಲ್ಲದೆ ದುರುಕ್ತಿಯಲಿ
ನೆಲ[1]ನೊಡೆ[1]ಯನಾನೆಂಬ ಗರ್ವದ
ಬಲುಹುಗಿಲುಹನು ಮಾಡಿದೊಡೆ ಕೇ
ಳೆಲಗೆ ತನ್ನಯ ಸತ್ಯಭಾಷೆಯನೆಂದನವನೀಶ ॥ ೧೪ ॥

ಹುಸಿಯ ನುಡಿವನ ಜೀವಹಿಂಸೆಯ
ದೆಸೆಗೆ ನಲಿವನ ತಾಯಿಮಕ್ಕಳ
ಬೆಸುಗೆಯನು ಬಿಚ್ಚುವನ ಮಿತ್ರಂಗೆರಡು ಬಗೆವವನ
ಪಿಸುಣಿಗನ ಕೃಪಣನ ವೃಥಾ ಕೋ
ಪಿಸುವವನ ದುರ್ಗತಿಗಳಾಗಲಿ
ಶಶಿಮುಖಿಯೆ ನಾ ಮರಳಿ ನಿನಗಳುಪಿದರೆ ಕೇಳೆಂದ ॥ ೧೫ ॥

ತನ್ನ ಕಾರಿಯಾಗಬೇಕೆಂ
ದನ್ನಿಗರ ಕೆಡಿಸುವ ನಿರಂತರ
ತನ್ನ ಸತಿಯನು ಬಾಧಿಸುವ ಪರಸತಿಗೆ [2]ವೇದಿ[2]ಸುವ
ಕುನ್ನಿಗಳ ಗತಿಯಹುದು ತನಗೀ
ನನ್ನಿಯನು ತಪ್ಪಿದೊಡೆ ಸಾಕೆಲೆ
ಕನ್ನೆ ಸಂಶಯ ಬೇಡವಿನ್ನೇಳೆಂದನವನೀಶ ॥ ೧೬ ॥

ನಿಂದಕನ ನಿಷ್ಠುರನ ದಳದುಳ
ಬಂದಿಕಾಱನ ಬಾಹಿರನ ರಣ
ಹಿಂದೆಗನ ಪ[3]ತಿವಂಚಕನ ವಿಶ್ವಾಸಘಾತಕನ
ಬಂಧುಭೇದನ [4]ಭಜ[4]ಕಭಕ್ಷನ
ನಿಂದಿತಾಹಾರಿಗನ [5]ನರಕದೊ
ಳೊಂದುವೆನು ನಾ ಮರಳಿ ನಿನಗಳುಪಿದರೆ ಕೇಳೆಂದ ॥ ೧೭ ॥

೧. ನೆರೆ (ಅ.) ೨. ಭೇದಿ (ಆ. ; ಮೋಹಿ (ಹ.) ೩. ಸ (ಇ, ಒ.) ೪. ಜಪ (ಚ.)
೫. ಗತಿಯೊಳ್। ಗೊಂ (ಗ.)

ತನಗಿಬೊಳ್ಳಿಹ ರೀತಿ ಸಮನಿಸಿ
ತೆನುತೆ ನಿಶ್ಚೈಸುತಲಿ ನುಡಿದಳು
ವನಿತೆಯಾದೊಡೆಯೇನ ಹೇಳಿದ [೧]ಕೇಳ[೧]ದಾಕ್ಷಣವೆ
ಜನಪ ನಿನ್ನನು ಬಿಟ್ಟು ನಾ ಹೋ
ಹೆನು ಯಥಾರ್ಥವಿದೆಂದು ದಿಟವನು
ವನಿತೆ ನುಡಿಯಲು ಭೂಪನಾ ಮಾದೇವಿಗಿಂತೆಂದ ॥ ೧೮ ॥

ನೋಡುವರೆ ನಾ ನೀನು ಹೇಳಿದ
ಮಾಡದಾ ಕ್ಷಣ ನೀನು ಸುಖದಿಂ
ದಾಡುತಿಪ್ಪುದು ನಿನ್ನ ಬುದ್ಧಿಗೆ ಬಂದ ಪರಿಯಿಂದೆ
ನಾಡ ಮಾತಿನ್ನೇಕೆ ಕರುಣವ
ಮಾಡಿ ನಿನ್ನ ಕೃಪಾನಿರೀಕ್ಷೆಯ
ಜೋಡ ತೊಡಿಸೆನಗೆಂದನಾ ಮಾನಿನಿಗೆ ಮಹಿಪಾಲ ॥ ೧೯ ॥

ಆದೊಡಾಗಲಿಯರಸ ನಡೆಯೆನೆ
ಮೇದಿನೀಪತಿ ಹರುಷದಿಂದಲಿ
ಹೋದನಾಗಳೆ ಹೊಕ್ಕನರಮನೆಯನು [೨]ಸುಮಾನ[೨]ದಲಿ
ಆದರಿಸಿ ಶೃಂಗಾರ ಮಾಡಿ ವಿ
ನೋದದಲಿ ದಂಡಿಗೆಯನೇಱಿಸು
ತೈದಿದರು ಹೆಗ್ಗಡಿತಿಯರು ಮಾದೇವಿಸಹವಾಗಿ ॥ ೨೦ ॥

ಅರಮನೆಯ ಹೊಕ್ಕ[೩]ಳು[೩] ವಿಳಾಸದ
ಲಿರುತಿರಲು ಮಾದೇವಿಯನು ಕಂ
ಡರಸನೇಕಾಂತದಲಿ ತುಡುಕಿದೊಡಾಕೆ ವಿನಯದಲಿ
ಅರಸ ಸೈಱಿಸು ಮತ್ಪ್ರಿಯವನು
ತ್ತರಿಸು ಬಳಿಕ[೪]ಂಗೈಸು[೪] ಎನಲಾ
ತರುಣಿಗವನೀಪಾಲ ನುಡಿದನು ವಿನಯಪರನಾಗಿ ॥ ೨೧ ॥

೧. ಪಾಡ (ಗ.) ೨. ವಿನೋದ (ಇ, ಉ.) ೩. ತಿ (ಅ.) ೪. ಲಿಪಮಿಸು (ಗ.)

ಏನ ಮಾಡಲಿಬೇಕು ಹೇಳಿಲೆ
ಮಾನಿನಿಯೆ ಎನಲಾಕೆ ನುಡಿದಳು
ನೀನು ಸಲೆ ಶಿವಭಕ್ತನಾದೊಡೆ ಕೂಡುವೆನು ನಿನ್ನ
ನೀನು ಭವಿಯಾಗಿರ್ದೊಡೊಲ್ಲೆನು
ನಾನು ಹೇಳುವುದಿನಿತೆಯೆನಲು ಸು
ಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ ॥ ೨೨ ॥

ಗೂಗೆಗಾದಿತ್ಯನ ಕರಂಗಳು
ಮೂಗರಿಗೆ ಮಾತುಗಳು ಡಂಬಕ
ಯೋಗಿಗನುಭವ ಕೋಪಿ[1]ಗುಪಶಮ[1] ನಾಯ್ಗೆ ನಾರಂಗ
ಮೂಗು[2]ಹೀನ[2]ಗೆ ಮುಕುರ[3]ವುಱಿಸಿಕೆ[3]
ಯಾಗಬಲ್ಲುವೆ ಭಕ್ತಿಗೆಳಸದೆ
ರೋಗಿಗೌಷಧಿಯರುಚಿಯಾದಂತಾಯಿತವನಿಪಗೆ ॥ ೨೩ ॥

ನಮಗೆ ಶಿವಭಕ್ತಿಯನು ಮಾಡುವ
ಸಮಯವಳವಡದೆನಲು [4]ನೃಪತಿಗೆ[4]
ರಮಣಿ ನುಡಿದಳು ನಮಗೆ ನಿಮ್ಮಯ ಸಂಗವಳವಡದು
ನಿಮಗೆ ನಾವಿನ್ನುತ್ತರಾಯಿಗ
ಳಿಮಗೆ ಬಂಧನ ಬಿಟ್ಟುದೆನುತಾ
ಕ್ರಮದಲುಟ್ಟು[5]ಡುಗೊಱೆಯ[6] ತೊಡಿಗೆಯನಿತ್ತು[7]ಳರಸಂಗೆ ॥ ೨೪ ॥

ಆತನಿದ ನೆಱೆ ನೋಡುತಿವಳಿಗೆ
ಭೂತ ಹೊಡೆಯಿತೊ ಮೇಣು ಪಿತ್ತದ
ಧಾತು ಹೆಚ್ಚಿತೊ ಸುಖದಲುಂಡುಟ್ಟಿರಲು ಹೇಳಿದೊಡೆ
ಏತಕಿವಳು ವಿರಕ್ತೆಯೆನೆ ವಿಪ
ರೀತದಲಿ ತಲೆಗೆದಱಿ ಬತ್ತಲೆ
ಕೌತುಕವ ಮಾಡಿದಳು ಶಿವ ಎನುತರಸ ಬೆಱಗಾದ ॥ ೨೫ ॥

೧. ಗಸುಗ್ರಪ (ಇ.) ೨. ಹೋಪ (ಅ.) ೩. ದೋಜಿಲುಗ (ಇ.) ೪. ಕೇಳುತ (ಅ, ಖ.) ೫-೬. ಡಿಗೆಯನು (ಅ, ಕ, ಜ.) ೫-೭. ದ ಕಳೆದುವೊಪ್ಪಿಸಿ ಕೊಟ್ಟ (ಜ.)

ಮೀಸಲಳಿಯಿತು ಬಯಕೆ ಮನದಭಿ
ಲಾಷೆ ಜಾಱಿತು ಕಾಮದಾತುರ
ಮೋಸರಿಸಿತೆಡೆವಱಿಯ[೧]ತಳುಪು[೧] ವಿವೇಕ ವರ್ಧಿಸಿತು
ಭಾಷೆ ಭೈರವೇಱಿತ್ತು ಮತ್ತೆ ಮ
ಹೇಶನಾದೊಡೆ ಹೋಗಲೆನುತೆ ನಿ
ರಾಸೆಯಿಂದಲಿ [೨]ಹೋಗಬಿ[೨]ಟ್ಟನು [೩]ಬಳಿಕ[೩] ಬಾಲಕಿಯ || ೨೬ ||

ಹಿಡಿದ ಲಿಂಗದ ವರವಿಭೂತಿಯ
ತೊಡಹದಂಗದ ಮೆಯ್ಗೆ ಮುಸುಕಿದ
ಬಿಡುಮುಡಿಯ ಹೊದಿಕೆಯ ವಿಳಾಸ[೪]ತೆ[೪] ರಾಹು ಚಂದ್ರಮನ
ಹಿಡಿದು ನೆಟ್ಟನೆ [೫]ನಿಂದು ನಿಗುರುತೆ[೫]
ಪೊಡವಿಯಲಿ ಬಂದಿರ್ದುದೋ ಎ[೬]ನೆ
ಕಡು ವಿರಕ್ತಿಯ ವೇಷ ಕಾಣಿಸಿತಿಂದುವದನೆಯಲಿ[೬] || ೨೭ ||

ತಂದೆ-ತಾಯ್ಗಳು ನಂಟರಿಷ್ಟರು
ಬಂಧು ಬಳಗ[೭]ಗಳಿತರ[೭]ಜನಗಳು
ಬಂದು ನಿಂದೆಲೆ ಅಕ್ಕ ನೀನಕಟೀಕೆ ಮರುಳಾದೆ
ಎಂದೆನಲು ಶಿವಗರ್ಪಿಸಿದ ತನು
ವಿಂದು ಮೊದಲಾಗೆನ್ನ ಹಂಬಲ
[೮]ನಿಂದು ಕಳೆವುದು ನೀವೆನುತೆ[೮] ಮಾದೇವಿ ಜಾಱಿದಳು || ೨೮ ||

ಐಸಲೇ ನಮಗೇನು ತನ್ನಯ
ವಾಸಿಯಿಂದೆ ವಿರಕ್ತಿ ಬಂದು[೯]ದೆ[೯]
ಮೀಸಲಳಿಯದೆ ಕನ್ನೆತನದಲಿ ಶಿವನನಪ್ಪುವೊಡೆ
ಲೇಸು ನಿಜಕುಲಕೋಟಿಗೆನುತವ
ರೋಸರಿಸಿದರು ಬಳಿಕಲತಿಸುಖ
ವಾಸದಲಿ ಮಾದೇವಿ ನಡೆದಳು ಭಕ್ತಿಭಾವದಲಿ || ೨೯ ||

೧. ತೆಸಕ (ಗ.) ೨. ಬೀಳುಕೊ (ಅ.) ೩. ಜರೆದು (ಗ.) ೪. ಕೆ (ಐ.) ೫. ನಿಗುರುತ್ತಿರೆ ತಾ (ಗ.); ನಿಗುರಿ ನಿಂದೊಲ್ (ಇ.) ೬. ನ। ಉಡುಪವದನೆ ವಿರಕ್ತಿಯಿಂ ಪೊರಮಟ್ಟೆಳರಮನೆಯ (ಗ.) ೭. ವು ಲೋಕ (ಜ.) ೮. ಹೊಂದದಿರಿ ನೀವೆನುತಲಾ (ಗ.) ೯. ಡು (ಅ, ಇ, ಉ.)

ಕಾಯುವಳಿಯದೆ ಶಿವನ [1]ಕೂಡು[1]ವ
ದಾಯವನುಭವವಾವ ಘನ ಗುರು
ರಾಯು[2]ನಿಂದೆನಗಹುದೊ ಶಿವ ಶಿವ ಎನುತೆ ನೆನೆಯುತಲಿ[2]
ಆಯತಿಕೆಯಲಿ ನಗರವಿಪಿನನಿ
ಕಾಯದಲಿ ನೆಱ[3] ತೊಳಲಿ ಭ[3]ಕ್ತ್ರೋ
ಪಾಯದಲಿ ಸುಳಿದಾಡು[3]ತಿರ್ದಳು ಮತ್ತೆ ಮಾದೇವಿ ‖ ೩೦ ‖

ಎಲ್ಲಿ ಸಜ್ಜನವೆಲ್ಲಿ ನಿರ್ಜನ
ವೆಲ್ಲಿ ಗಿಡು–ಮಡುವೆಲ್ಲಿ ತರು–ಗಿರಿ
ಯೆಲ್ಲಿ ಗಹ್ವರವೆಲ್ಲಿ ಪೂಗೊಳವೆಲ್ಲಿ ಲತೆ–ಪುಳಿನ
[4]ಎಲ್ಲ ಎಡೆಯಲಿ ಹಾ[4]ಡುತಾಡುತೆ
ಮೆಲ್ಲಮೆಲ್ಲನೆಯಱಸುತಿರ್ದಳು
ಅಲ್ಲಮಪ್ರಭು ಗುರು ಗುಹೇಶ್ವರ[5]ನನು ಮಹಾದೇವಿ[5] ‖ ೩೧ ‖

**ಅಂತು ಗತಿ ೧೦ಕ್ಕಂ ಪದ ೪೭೩ಕ್ಕಂ ಮಂಗಳಂ**

೧. ಬೆರಸು (ಇ.) ೨. ನಸು ನಾನೆಂದು ಕಾಂಬೆನೊ ಶಿವ ಶಿವಾ ಎನುತೆ (ಗ.) ೩. ಭಕ್ತಿಯು। ಪಾಯುವಿಲ್ಲದೆ ತೊಳಲು (ಗ) ೪. ಎಲ್ಲೆಡೆಯೊಳೋಲಾ (ಇ.) ೫. ಪಾದ ಪಂಕಜವ (ಉ.)

# ೧೧ ಗೊಗ್ಗಯ್ಯನ ಗತಿ

**ಸೂಚನೆ:**

ಬೆರಸಿ ತನ್ನೊಳಗನಿಮಿಷನನಾ
ಪರಿಯುಲಲ್ಲಮನೊಂದು ವೇಷವ
ಧರಿಸಿ ಸುಳಿದನು ಲೀಲೆಯಿಂ೧ದೆ ಜಗದ್ಧಿ೧ತಾರ್ಥದಲಿ

ಕಾಳು ವಿಷಯದ ವಿಧಿಯ ದಾಳಾ
ದೂಳಿಯಲಿ ಹತವಾಗಿ ಕಾಲನ
ಕಾಲ ಬಾಯಲಿ ಬೀಳಲೊಲ್ಲೆವೆನಿಪ್ಪ ಸುಕೃತಿಗಳು
ಕೇಳುವುದು ಕಿವಿಗೊಟ್ಟು ಭಕ್ತಿಯ
ಕಾಲು ೨ಕಿ೨ೀಲನು ಸುಡಿದು ತೋಱಿಸಿ
ಪಾಲಿಸುವ ಪರಬೊಮ್ಮನಲ್ಲಮ ಸುಳಿದ ಸುಲಭತೆಯಾ * ॥ ೧ ॥

---

೧. ದಲಿ ಜಗಹಿ (ಇ, ಉ.) ೨. ಶೀ (ಅ.)

* ಮೇಲಿನ ಪದ್ಯಕ್ಕೆ ಪ್ರತಿಯಾಗಿ ಈ ೨ ಪದ್ಯಗಳು (ಉ, ಜ.) ಪ್ರತಿಗಳಲ್ಲಿ ಮಾತ್ರ ಇರುವುವು:

ಹಸಿವನಳಿವರು ಜೀವಕಾಯದ
ಬೆಸುಗೆಯನು ಕಾಂಬವರು ಬಿಂದುವ
ನೊಸರಲೀಯದೆಯೂರ್ಧ್ವಮುಖದಲಿ ಬಿತ್ತಿ ಬೆಳೆವವರು
ಉಸುರು ಪ್ರಾಣಾಪಾಯುವಂ ಕೀ
ಲಿಸುವವರು ಸುಜ್ಞಾನಯೋಗ್ಯರು
ಸಸಿನೆ ಕೇಳುವುದೀ ಮಹಾಪ್ರಭುಲಿಂಗಲೀಲೆಯಲಿ ॥ ಅ ॥

ನಿದ್ರೆಯನು ನೀಗುವರು ರೋಗದು
ಪದ್ರವನು ನಿಲಿಸುವರು ಮಿಕ್ಕಿನ
ಕ್ಷುದ್ರವ್ಯಾಧಿಯ ಭಂಗಿಸುವರು ಗುರೂಪದೇಶದಲಿ
ಮುದ್ರೆಯನು ಮುಟ್ಟುವರು ಸೌಖ್ಯಸ
ಮೃದ್ಧಿಯೊಳಗೋಲಾಡುವರು ಶಿವ
ಸಿದ್ಧರಪ್ಪರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ಬ ॥

ಲಿಂಗನಿಜವನು ಬಯಸಿ ಭಕ್ತ[೧]ಜ
ನ[೧]ಂಗಳಿರುತಿರಲಲ್ಲಮಪ್ರಭು
ಲಿಂಗ[೨]ನಂತದ[೨]ನಱಿದು ತನ್ನ ಕಟಾಕ್ಷ[೩]ಕಾಂತಿಯ[೩]ಲಿ
ಹಿಂಗಿಸುವೆನೆಲ್ಲರ ಮನೋ[೪]ಮಯ
ದ[೪]ಂಗದೊಳಹೊಱಗಿಡಿದ ತಮದ ತ
ರಂಗಗಳನೆಂದೆನುತೆ ಕಾರಣಕಾಯದಲಿ ಸುಳಿದ ॥ ೨ ॥

ಸುಳಿದು ಸುಖದಲಿ ತನ್ನ ಲೀಲೆಯ
ಬಳಸಬೇಕೆಂದೊಂದು ವೇಷದ
ಹೊಳಹಿನಲಿ ಬರುತಿರಲು ಕ[೫]ಟ್ಟೆದಿರಿನಲಿ ಚೆಲುವಾಗಿ
ತಳಿತ ಕೆ[೬]ಂದಾವರೆಯ ನೆಯ್ದಿಲು
ಗೊಳನ ನಾನಾಪರಿಯ ಹೂಗಿಡು
ಗಳ ಲತಾಮಂಟಪ[೭]ದ ತೋಟವ ಕಂಡನಲ್ಲಮನು[೭] ॥ ೩ ॥

ಆ ವನವ ಪಾಲಿಸುವನೊಬ್ಬನು
ಪಾವ[೮]ನೀಕೃತ[೮]ಚಿತ್ತ[೯]ನೀಶ್ವರ[೯]
ಭಾವಭ[೧೦]ಂಕ್ತ[೧೦]ನು ಗೊಗ್ಗಿದೇವನು ಕೃಷಿನಿಮಿ[೧೧]ತ್ತಿಳೆಯ[೧೧]
ತೀವಿಯುಗಳುತ್ತಿರ್ದೊಡಾ ಪ್ರ
ಸ್ತಾವದಲಿ ಕಂಡಲ್ಲಮಪ್ರಭು
ದೇವ [೧೨]ತಾನಾತನ ಸಮೀಪಕೆ ಹೋಗಿ[೧೨] ನಿಂದಿರ್ದ ॥ ೪ ॥

ಮಿ[೧೩]ಕ್ಕು ಬೆವಸಾಯವನು ಮಾಡುವ
ಹೆಕ್ಕಳದ ಹೋರಟೆಯ ಕಾಣುತ
ಲಕ್ಕಱಿಂದಲಿ ನೋಡಿ ಕರುಣರಸಾ[೧೪]ರ್ದ್ರ[೧೪]ಚಿತ್ತದಲಿ
ಸಿಕ್ಕಿತಲ್ಲಾ ಲೋಕವೀ ಪರಿ
ಕಕ್ಕುಲಿಸಿಯೊಡಲಾಸೆಗಱಿವನು
ಲೆಕ್ಕಿಸದೆಯಕಟೆನುತಲಲ್ಲಮ ತನ್ನೊಳಿಂತೆಂದ ॥ ೫ ॥

೧ ಗಣ (ಉ, ಕ) ೨. ನೇತಾ (ಜ.) ೩. ಕರುಣದ (ಜ.) ೪. ಪೇಪ (ಗ.) ೫. ನೆ (ಅ) ೬. ಹೊ (ಜ.) ೭. ವು ಕಣ್ಗೆದಿರಾಯಿತಲ್ಲಮನ (ಇ.) ೮. ನಾತ್ಮಕ (ಗ.) ೯. ನಿರ್ಮಳ (ಇ.) ೧೦. ರಿತ (ಇ.) ೧೧. ತ್ತದಲಿ (ಇ.) ೧೨. ನಾತನ ಕಂಡು ಸಸಿಯಕೆ ಬಂದು (ಇ.) ೧೩. ಹೊ (ಇ.) ೧೪ ಬ್ಧಿ (ಖ)

ಆದೊ[1]ಡಿನ್ನೀತನನು[2]ಪಾಯ[3]ದ
ಭೇದದಿಂದೊಡಬಡಿಸಿ ಭಕ್ತಿಯ
ಹಾದಿಯನು ಹತ್ತಿಸುವೆನಾನೇ ಲಿಂಗಮಾರ್ಗವನು
ಸಾಧಿಸುವ ಸಾಧಕನವೊಲು ಸಂ
ವಾದಿಸುವೆನೀತನಲಿಯೊಂದು ವಿ
ನೋದವನು ಮಾಡುವೆನೆನುತಲಲ್ಲಮನು ಬಗೆಗೊಂಡ || ೬ ||

ಬಳಿಕಲಾ ತೋಟಿಗ[4]ನ[4] ಬುದ್ಧಿ[5]ಗೆ[5]
ತಿಳಿವ[6]ತೀಡು[6]ವೆನೆನುತೆ ಮಿಗೆ ಕಂ
ಗಳಿಗೆ ಕಟ್ಟದಿರಾಗುತಲಿ ಶರಣಾರ್ಥಿಯೆಂದೆನಲು
ನಲಿದು ಕೇಳುತೆ ಕೂಡೆ ಶರಣೆಂ
ದೊಲಿದು ನೀನಾರೆನುತೆ ವಿನಯಂ
ಗಳಲಿ ತಪ್ಪನಪಾಲ ಕೇಳಿದನಲ್ಲಮಪ್ರಭುವಾ || ೭ ||

ಭಾವಿಸಲು ಶಿವಭಕ್ತರೆಂಬವ
ರಾವ ಠಾವಿನಲಿಪ್ಪರವರ ಕೃ
[7]ಪಾವಲೋಕನಭಕ್ತಿಭಿಕ್ಷಾಂ[7]ದೇಹಿಗಳು ನಾವು
ಆವುದ[8]ಱೊಳಹುದ[8]ಲ್ಲವಲ್ಲನು
ದೇವನೆಂಬುದೆ ನಮಗೆ ಸಲೆ ಸಂ
ಭಾವಿಸಿದ ಹೆಸರಾಗಿಹುದು ಭಕ್ತಯ್ಯ ಕೇಳೆಂದ || ೮ ||

ತಿಳಿದು ನಾನಾಪರಿಗಳಿಂದಲಿ
ಗಳಿಸಿದರ್ಥವ ಲಿಂಗಜಂಗಮ
ಗಳಿಗೆ ನೀಡುತಲೊಕ್ಕುಮಿಕ್ಕುದನುಂಡು ಸುಖಿಯಹುದು
ಇಳೆಯೊಳಿದು ಶಿವಭಕ್ತಿ ಬಱಿದೆಗೆ
ತೊಳಲಿಯಱಸಲದೇನು ಕಾರಣ
ನೆಲೆ ಮರುಳೆ [9]ಕೇಳೆಂದನಾ ಗೊಗ್ಗಯ್ಯನ[10]ಲ್ಲಮಗೆ[11] || ೯ ||

೧–೨. ಡೀತನನೊಂದು (ಇ.) ೨–೩. ಜ್ಞಾನ (ಒ.) ೪. ಗೆ (ಇ.) ೫. ಯು (ಇ.) ೬. ತಿದ್ದು (ಇ, ಗ.) ೭. ಕ್ತದೇಹಿಕ (ಜ.) ೮. ಱ ಸಂಧಿ (ಜ.) ೯-೧೦. ಭಕ್ತಯ್ಯ ...ನೀ ಕೇಳೆಂದನ (ಅ) ೧೦-೧೧ ಗಲ್ಲಮನು (ಅ, ಇ, ಗ.)

ನಿಮ್ಮ ಹೆಸರೇನಯ್ಯ ಎಂದರೆ
ನಮ್ಮ[೧]ಹೆಸರೇ[೨] ಗೊಗ್ಗಯನು ಕೇ
ಳಿಮ್ಮ ಮತವಿದು ಲೌಕಿಕರು ನಾವಱಿಯೆವೇನುವನು
ಸುಮ್ಮನಿರಬೇಡೆಮಗೆ ವಿವರಿಸಿ
ನಿಮ್ಮ ಮನ[೩]ಸಿನ ಬುದ್ಧಿಯಾ[೪]ವುದ
ನೆಮ್ಮಹುದು ಹೇಳೆಂದನಾ ಗೊಗ್ಗಯ್ಯನಲ್ಲಮಗೆ || ೧೦ ||

ಆವ ಬೆವಸಾಯವನು ಮಾಡಲು
ಜೀವ[೩]ವೆತೆಗಳು ತಪ್ಪವದ[೩]ಱಲಿ
ದೇವನೊಲಿವನೆ ನೋವು ನಿಲುವುದೆ ಸಾವು ಹಿಂಗುವುದೇ
ಧಾವತಿಯೆ ಕಡೆತನಕ ತಪ್ಪದು
ಭಾವಿಸುವೊಡದು ಭವಿಗಳಂಗವಿ
ದಾವುದಲ್ಲದ ಮತವನೆಲೆ ಗೊಗ್ಗಯ್ಯ ಕೇಳೆಂದ || ೧೧ ||

ಇಲ್ಲಿ ಭಕ್ತಿಯ ಮಾಡುತಲಿ ಕಡೆ
ಯಲ್ಲಿ ಕೈಲಾಸವನು [೪]ಹೊಕ್ಕೊ[೪]ಡೆ
ಯೆಲ್ಲಿಯವು ಬಿಡು ನೋವು-ಸಾವುಗಳೆಂಬ ಸಂಕಟವು
ಬಲ್ಲವರ ಕೇಳೆಮ್ಮ ನಂಬುಗೆ
ಯಿಲ್ಲದಿರ್ದೊಡೆ ಮರುಳೆ ನೀನೆನು
ತಲ್ಲಮನ [೫]ಗೊಗ್ಗಯ್ಯ ಬೋಧಿಸುತಿರ್ದ[೬]ನೀ [೭]ಮತವ || ೧೨ ||

ಅವಧರಿಸಿ ಕೇಳೆನ್ನ ಬುದ್ಧಿಯ
ಹವಣ[೮]ನಾದರೆ ಜೀವ[೯]ಲವ[೧೦]ಂಮಾ
ತ್ರವನು ನೋಯಿಸಿ ಭಕ್ತಿಯಲಿ ಕೈಲಾಸಪುರದೊಳಗೆ
ಭವನ ಬಸಱೊಳಗಿರ್ದೊಡೆಯು ಸಂ
ಭವಿಸುವುವು ಕಡು ನೋವು-ಸಾವುಗ
ಳವನು ಕಳೆವರ ಕಾಣೆನೈ ಗೊಗ್ಗಯ್ಯ ಕೇಳೆಂದ || ೧೩ ||

೧. ಸಾವುವು (ಜ.) ೨. ದ ನಿರೂಪವಾ (ತ.) ೩. ವ್ಯಥೆಗಳು ತಪ್ಪುವವಱಲಿ (ಅ.); ಜಾಲಕೆ ನೋವು ತಪ್ಪದು (ಇ.) ವ್ಯಥೆ ತಪ್ಪುವುದೆ ಇದಱಲಿ (ಜ.) ೪. ಸಾರ್ದೊಡೆ (ಅ, ಒ, ಖ.) ೫–೬. ನು ಗೊಗ್ಗಯ್ಯನನು ಬೋಧಿಸಿದ (ಅ, ಕ, ಜ.) ೬–೭. ನನು (ಜ) ೮–೧೦. ಜೀವಾಶ್ರಯದ ಹುಳು (ಜ.) ೯–೧೦. ವಣು (ಕ, ಗ, ಜ.)

ಕೊಂದವಗೆ ಕೊಲೆ ತಪ್ಪದಾರೇ
ನೆಂದೊಡೆಯು ಹರಿ-ಹರ-ವಿರಿಂಚಿಗ
ಳಿಂದ ಬಲ್ಲಿದರಾರು ದಿಟವವರಾದೊಡೆಯು ತುದಿಗೆ
ಬಂಧನಪ್ರದ ಬಾಹ್ಯಕರ್ಮವ
ನೊಂದು[೧]ಗೂ[೧]ಡಿದರಾದೊಡವರಿಗೆ
ಸಂದ ನಿಜಸುಖವಿಲ್ಲವೈ ಗೊಗ್ಗಯ್ಯ ಕೇಳೆಂದ || ೧೪ ||

ಸಾವೊಡೀ ಗುರುಲಿಂಗಜಂಗಮ
ಸೇವೆ [೨]ತಾ ಮುನ್ನೇಕೆ ಹಸಿವಿನ[೨]
ಬೇವಸದಲಡಿಗಡಿಗೆ ಬೇವಗೆಯೊಕ್ಕುದುಣಲೇಕೆ
ಈ ವಿಧಿಯಲೇನುಂಟು ನೆಱೆ ನಿ
ರ್ಭಾವದಂಗವನಱಿಯದನ್ನಕ
ಸಾವುದಾದರೆ [೩]ಮಾಣ[೩]ದೈ ಗೊಗ್ಗಯ್ಯ ಕೇಳೆಂದ || ೧೫ ||

ಪರಿಕಿಸಲು ಗುರುಲಿಂಗಜಂಗಮ
ದಿರವದಾವೆಡೆ[೪]ಯೆಂಬುದೀಯುಪ
ಚರಣೆಗಱುಹಿಸದದಱ[೫] ಪರಿಯೆಂತೋ ಮಹಾದೇವ
ಅರಿದಲಾ ಎಂದೆನುತ್ತೆ[೬] ನೆವದಿಂ
ದೊರೆದನಾ ಗೊಗ್ಗಯ್ಯಗಿಂತೀ
ಪರಿಯನಲ್ಲಮಲಿಂಗನೊಲಿ[೭]ದನ್ಯಾಪದೇಶದಲಿ[೭] || ೧೬ ||

[೮]ಎಲ್ಲವನು ಕೇಳುತ್ತಲಾತನು[೮]
ಹೊಲ್ಲವಾಯಿತು ಭಕ್ತಿಯೆಂಬುದು
ಕಲ್ಲ ಕಡಲೆಯ ಮೆಲುವ ಪರಿಯಲ್ಲಾ ಮಹಾದೇವ
ಅಲ್ಲಮನನಾವಱಿಯೆವೈ ನೀ
ಬಲ್ಲೆ ನಿನ್ನಯ ಮನದ ಹರಿವನು
ಸಲ್ಲದುಳಿದರಿಗೆಂದನಾ ಗೊಗ್ಗಯ್ಯನೊಲವಿನಲಿ || ೧೭ ||

೧. ಮಾ (ಇ.) ೨. ಯೇತಕೆ ಹಸುವು ತೃಷೆಗಳ(ಇ.) ೩. ತಪ್ಪ (ಅ, ಜ.) ೪-೫. ಯೆಂಬ ಬುದ್ಧಿಯು। ಪರಿಚರಿಯನರುಹಿಸುವ(ಉ.) ೪–೬. ಯೆಂಬುದನು ವಿಸ್ತರಿಸಿ ಹೇಳಲು ಹರಿಹರಬ್ರಹ್ಮಾದಿಯೆಲ್ಲರಿಗೆ॥ಅರಿದು ತಾನೆಂದೆಂಬ (ಗ.) ೭. ಮುಪದೇಶನೆವದಿಂದೆ (ಇ.) ೮. ಅಲ್ಲಮಪ್ರಭು ಹೇಳೆ ಕೇಳುತ(ಗ.) ]

ಮತ್ತೆಯಲ್ಲಮ[1]ನಾಮೊಡೊ[1]ಂದು ನಿ
ಮಿತ್ತದೃಷ್ಟಾಂತವನು ತೋಱಿಸಿ
ಹತ್ತಿಸುವೆನೀತಂಗೆ ಹಾದಿಯನೆನುತಲತಿಕೃಪೆಯಾ
ಚಿತ್ತದಲಿ ಗೊಗ್ಗಯ್ಯನಗೆುಳುತೆ
ಕಿತ್ತ ಹೆಂಟೆಯ ಕೆಳಗೆ ತೋಱಿದ
ನುತ್ತಮದ ಹೊಂಗಳಸವೊಂದನು ನಿಮಿಷಮಾತ್ರದಲಿ ॥ ೧೮ ॥

ಏನಿದೇನೆಂದಿಬ್ಬ[2]ರೊಲಿ[2]ದನು
ಮಾನದಿಂದಗುಳಲು ಸಮಾಧಿ
ಸ್ಥಾನದಾ ದೇಗುಲವ ಕಂಡೊಳಪೊಕ್ಕು [3]ಹರು[3]ಷದಲಿ
ಮೌನದಿಂ ನಿಬ್ಬೆಱಗು ಹೊಡೆದವ
ಧಾ[4]ನದನಿಮಿಷ[4]ದೃಷ್ಟಿ[4]ಲಿಂಗ
ಧ್ಯಾನದಂಗವ ಕಂಡರಾ ಗೊಗ್ಗಯ್ಯನಲ್ಲಮನೂ ॥ ೧೯ ॥

ಅಂತರಂಗವ ಹೊಕ್ಕು ನೆಱೆ[5] ನಿ
ಶ್ಚಿಂತ[5]ನಿಲವನು[5] ನೋಡುವನುಭವಿ
ಯಂತೆ ಗೊಪೆಯೊಳಗೊಂದು ಲಿಂಗಪ್ರಾಣತನುಮ[6]ಯ[6]ದ
ಜಂತ್ರಗಿಟಗಿಟಯಾದ ಲಿಂಗದ
ಚಿಂತೆಯಲಿ [7]ಮಱವಟ್ಟ ಮೈಯ[7]ವ
ಹಂತನನು ಗೊಗ್ಗಯ್ಯನಲ್ಲಮು[8]ಸಹಿತ ನೆಱೆ ಕಂಡ[8] ॥ ೨೦ ॥

ಮಾಡಬಲ್ಲರೆ ಭಕ್ತಿಯಂಗವ
ನೋಡಿದೈ ನಮ್ಮಯ್ಯನಱುವಿನ
[9]ಗಾಡಿಯನು ಗಂಭೀರಭಕ್ತಿಯ ಗರುವಪೋಡಿ[9]ಯನು
ರೂಢಿಗೇಕೋಭಾವನಿಷ್ಠೆಯ
ಗೂಢವೆನುತನಿಮಿಷನ ಮಿಗೆ ಕೊಂ
ಡಾಡಿ ಗೊಗ್ಗಯ್ಯಂಗೆಯಲ್ಲಮಲಿಂಗ ತೋಱಿದನು ॥ ೨೧ ॥

೧. ಪೇಪನೊ (ಗ.) ೨. ರೊಂ (ಉ.) ೩. ನಿಮಿ (ಗ.) ೪. ಪಿಷ್ಟ (ಉ.) ೫. ದಣಿವನು (ಜ.); ಲಿಂಗವ (ಚ.) ದಂಗವ (ಗ.) ೬. ನ (ಅ, ಚ.) ೭. ಮಱಿಹೊಕ್ಕ ಮಹಿಮ (ಇ.) ೮. ಕಂಡರಸುಖವನ (ಇ.) ೯. ಗಾಢಭಕ್ತಿಯು ಗರುವಿಕೆಯ ಗಂಭೀರ ಗಾಡಿ (ಅ.)

ಭಂಗಪದವಿಯನೊಲ್ಲೆನಿನ್ನೀ
ಲಿಂಗದಲಿ ಸುಖಿಯಪ್ಪೆನೆಂದಾ
ಭೃಂಗಿನಾಥನೆ ಶಿವಸಮಾಧಿಯಲಿದ್ದನೆಂಬಂತೆ
ಲಿಂಗದಲಿ ನೆಱೆ[೩]ನಟ್ಟ ನೋಟವ
ಕಂಗಳೀ ಕರುಳಾಗಿಯೆಲು[೧]ವೆಸೆ
ವ[೧]ಂಗದನಿಮಿಷನಿರವನಾ ಗೊಗ್ಗಯ್ಯನೀಕ್ಷಿಸಿದ ॥ ೨೨ ॥

ಇದೆ ಕಣಾ ಶಿವಲಿಂಗಭಕ್ತಿಯ
ಹೃದಯವನು ಸಾಧಿಸುವ ಪರಿ ಭಾ
ವದಲಿ ನೆಱೆ[೩] ನಟ್ಟಾಲಿಯಲಿ ನಿಬ್ಬೆಱಗಿನಂ[೨]ದ[೨]ದಲಿ
ಇದನು ಸಾಧಿಸದನ್ಯವ್ಯವಸಾ
ಯದಲಿ [೩]ಸಾ[೩]ವೊಡೆ ಕಬ್ಬಿನಿಚ್ಚೆಗೆ
ಬಿದಿರ ಮೆಲುವಂತಪ್ಪುದೈ ಗೊಗ್ಗಯ್ಯ ಕೇಳೆಂದ ॥ ೨೩ ॥

ಬಡವ[೪]ನಕ್ಷಯು[೫]ನಿಧಿ[೬]ನಿಧಾನವ
ನೆಡಹುತಲಿ ಕಂಡಂತೆ ಕೈಕಾಲ್
ಮುಡುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ
ಬಿಡದೆಯಱಸುವ ಬಳ್ಳಿ ಕಾಲನು
ತೊಡರಿತೆಂಬಂತೆನ್ನ ಬಯಕೆಯ
ಕಡೆಯು ಕಂಡೆನೆನುತ್ತಲಲ್ಲಮ [೭]ನುಡಿದನುಚಿತದಲಿ[೭] ॥ ೨೪ ॥

ಗುರುವೆ ಕರುಣಿಸು ಭಕ್ತಿಭಾವದ
[೮]ಕರುವೆ[೮] ಕರುಣಿಸು [೯]ಲಿಂಗನಿಷ್ಠೆಯ
ಗರುವ[೯] ಕರುಣಿಸು ಕರುಣಿಸೆನುತನಿಮಿಷನ ಕೊಂಡಾಡಿ
ನರನು ತಾ ದಿಟವೆಂಬ ಬಳಕೆಯ
ಪರಿಯನಂಗೀಕರಿಸಿ ಪ[೧೦]ಂರರಿಗೆ
ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ ॥ ೨೫ ॥

೧. ಸಾವಾರ್ಗ (ಗ.); ಪೆಸಾದಂ (ಅ, ಇ.) ೨. ಗ (ಇ, ಉ, ಕ, ಗ.) ೩. ನಡೆ (ಇ.)
೪–೫. ನಕ್ಷಿಗೆ (ಇ.) ೫–೬. ಬರುತಿಪರೊಳು (ಗ) ೭. ದೇವನಿಂತೆಂದ (ಗ.)
೮. ತರುವೆ (ಇ, ಗ, ಚ.); ತರಣಿ (ಅ.) ೯. ಯುಕ್ತಿಮಾರ್ಗವ ಸಿರಿಯು (ಗ.)
೧೦. ನ (ಅ.)

ಅಱಿಯದವರಾಳೋಚನೆಗೆ ತನ
[1]ಗುಱು[1]ವ ಗುರುವನಿಮಿಷನು ತಾನೇ
ನೆಱೆ ವಿನೂತನಶಿಷ್ಯನೆಂಬವೊಲಖಿಳಭಕ್ತರಿಗೆ
[2]ಅಱುಹನಂಗೀಕರಿಸಿ[2] ತನ್ನಯ
ಕುಱುಹಿನಾಕಾರದಲಿ ಕಲಿಸುವ
ತೆಱನನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ ॥ ೨೬ ॥

ಹತ್ತೆ ಬಂದಿರೆ ಸೂಜಿಗಲ್ಲನು
ಹತ್ತಿ [3]ಮೋಹಿಪ[3] ಸೂಜಿಯಂತಿರೆ
ತೆತ್ತಿಸಿದುದಾ ಸಚ್ಚಿದಾನಂದಸ್ವರೂಪೆನಿಪ
ನಿತ್ಯನಲ್ಲಮನಂಶವಾದ ನಿ
ಮಿತ್ತವಾ ಕ್ಷಣ ಕಾಣುತವೆ ಮೈ
ಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ ॥ ೨೭ ॥

ನೋಟವೇ ಪ್ರಾಣಸ್ವರೂಪಿನ
ಮಾಟವಾದ ನಿಮಿತ್ತ ಲಿಂಗದ
ಕೂಟದೊ[4]ಡನಾ[4]ಗನಿಮಿಷಯ್ಯನ ಜೀವಕಳೆ ಬಂದು
ನಾಟಿತೀತನ ದಿವ್ಯದೇಹದ
ಕೋಟರ[5]ದೊಳೀನೆಂಬೆನೈ[5]ಕ್ಯದ
ಮಾ[6]ಟದಲಿ ಮಮಕರಿಸಿ [7]ಮಮಕರಿಸಿ[7] ಮೆಱೆದನಲ್ಲಮನು ॥ ೨೮ ॥

ಲಿಂಗದೊಡನನಿಮಿಷನ ನೋಟದ
ಕಂಗಳಾತನ ಜೀವಕಳೆ ಹೆಱೆ
ಹಿಂಗದಲ್ಲಮನಲ್ಲಿ ನೆಲಸಿರ್ದೊಡೀತನದ ಕಂಡು
ಅಂಗವಿಸುವೊಡೆಯೆಮ್ಮ ಬಱಿಯಱು
ಮಂಗೆ [8]ಭೇದಿ[8]ಸಬಾರದಿವರನು
ಸಂಗದಂಗವನೆನುತಲಾ ಗೊಗ್ಗಯ್ಯ ಬೆಱಗಾದ ॥ ೨೯ ॥

೧. ಗೊರೆ (ಮು.) ೨. ಅಱಿವಿನಿಂಗಿತವನ್ನು (ಚ.; ಅಱಿವಿನಂಗೀಕವನು (ಅ, ಕ, ಗ.) ೩. ಹೋಗುವ (ಜ.) ೪. ಳಗಾ (ಜ.) ೫. ವನಾ ಬಳಿಯಲ್ಲೈ (ಗ.) ೬. ಕೂ (ಗ.) ೭. ಸೌಖ್ಯದಿ (ಚ.) ೮. ಭಾವಿ (ಅ.)

ಈ ಕೃಪಾಳುವೆ ದೇವನಾಗಲಿ
ಬೇಕದಲ್ಲದೊಡನಿಮಿಷನ ತಾ
ಸ್ವೀಕರಿಸುವನೆ ಕೂಡಬಲ್ಲುದೆ ಲಿಂಗವೀತನಲಿ
ಬೇಕೆನುತಲೆನಗೀ ರಹಸ್ಯ[೧]ದ
ರೇಖೆಯ[೧]ನು ತೋಱಿಸುವನೇ ಭೂ[೨]
ಲೋಕದೊಳಗಿದು ಪೊಸತೆನುತೆ ಗೊಗ್ಗಯ್ಯನಿಂತೆಂದ ॥ ೩೦ ॥

ಎಲೆ ಮಹಾತ್ಮನೆ ನಿನ್ನ ಸೂತ್ರದ
ಹೊಲಬಿದಲ್ಲದೆ ಸುಮ್ಮನೀ ಪರಿ
ಸಿ[೩]ಲುಕಬಲ್ಲುದೆ ನಿನ್ನೊ[೪]ಳೀ ಗುರು[೪]ಲಿಂಗಕಳೆ ಬಂದು
ನೆಲಸಿತದುಕಾರಣದಲಾನದ
ತಿಳಿದೆನೀಗಳು ನೀನೆ ನಿರುಪಮ
ನಿಳಯನಹೆಯೆನುತಲ್ಲಮನ [೫]ಗೊಗ್ಗಯ್ಯನಿಂತೆಂದ[೫] ॥ ೩೧ ॥

ಸಾರೆಯಲಿ ಶಿವಲಿಂಗಭಕ್ತಿಯ
ದಾರಿಯನು [೬]ನಾನನಿಮಿಷನ ಸಾ
ಕಾರದಲಿ[೬] [೭]ಕಂಡ[೭]ಱಿದೆನೀಗಳು ನಿನ್ನ ಕತದಿಂದೆ
ಸಾರಜಂಗಮಲಿಂಗವೆಂಬಾ
ಕಾರದಲಿ ನೀ ಸುಳಿಯುತ್ತೀ[೮]ಪರಿ[೮]
ಧಾರುಣಿಯ ಭಕ್ತರನು ಸಲಹೆನುತಿರ್ದನಲ್ಲಮಗೆ ॥ ೩೨ ॥

ಎನಲು ಶಿವಭಕ್ತಿಯ ರಹಸ್ಯದ
ಘನವು ಗೊಗ್ಗಯ್ಯಂಗೆ ವೇದಿಸಿ
ದನುವ ತಾನ[೯]ಱಿದಾ[೧೦]ದೊಡಿದಕೇನೀತನೆಂದ[೧೧]ಂತೆ
ಅನು[೧೨]ಕ[೧೨]ರಿಸಿ ಕಾಣಿಸುತೆ ಜಗತೀ
ಜನವ ಸುಖಿಗಳ ಮಾಡುವೆನು ನಾ
ನೆನುತಲಿರ್ದನು ಗುರು ಗುಹೇಶ್ವರಲಿಂಗ ಕರುಣದಲಿ ॥ ೩೩ ॥

೧. ವಿ।ವೇಕವ (ಗ.) ೨. ಮೂ (ಗ.) ೩. ನಿ (ಗ, ಜ.) ೪. ಳೀ ಶಿವ (ಅ.) ; ಳಿಂತೀ (ಜ.) ೫. ಹೊಗಳಿದನು ಗೊಗ್ಗಯ್ಯ (ಅ.) ೬. ಮಿಷದೇವನನು ಯಿಂ।ಕಾರಣದಿ (ಇ.) ೭. ನಾನ (ಉ.) ೮. ಗಳು (ಇ.) ೯–೧೧. ಱಿಹಿಸಿದೆನಿದೆಯನಿಮಿಷಭಕುತಿಯಂ (ಇ.) ೧೦–೧೧. ಡಿದನು ಲಿಂಗೈಕ್ಯನೆಂಬ ೧೨. ಚ (ಬ.)

ಜಗದ ಭಕ್ತರದಾವ ಮುಖದಲಿ
ಹೊಗುತಲಿರ್ದರು ತಾನು ಬಳಿಕಾ
ಬಗೆಯನಂಗೀಕರಿಸಿಕೊಂಡನು ತನ್ನ ಲೀಲೆಯಲಿ
ಬಿಗಿದ ಬೆಱಗಿನ ಕೈಯ ಲಿಂಗದ
ತೆಗೆದ ಚಿತ್ತದ ನಟ್ಟ ನೋಟದ
ಮೊಗದ ಭಾವದ ಭಕ್ತಿಯ[೧]ಂಗವ[೧] ತೊಟ್ಟನಲ್ಲಮನು || ೩೪ ||

ಒಡನೆ ಕಾಣುತಲಂತದನು ನೀ
ನೊಡೆಯನಾಗಿಹುದೀ ಪರಿಯಲೀ
ಪೊಡವಿಯಲಿ ಸದ್ಭಕ್ತರೆಲ್ಲರಿಗಱಿವ[೨]ನೀವು[೨]ತಲಿ
ನುಡಿದು ತೋ[೩]ಱಲದೇಕೆ[೩] ನೀನೇ
ನಡೆದು ತೋಱಿಸಿ ಲಿಂಗನಿಷ್ಠೆಯ
ಹಿಡಿಹುಗೊಳಿಸುವುದೆಂದನಾ ಗೊಗ್ಗಯ್ಯನಲ್ಲಮಗೆ || ೩೫ ||

ದೀನಮನದವನಂತೆ ಕಂಡ ನಿ
ಧಾನವನು ತಾನೊಬ್ಬನುಂಬನೆ
ದಾನಿ ಲೇಸೈ ನಿನ್ನ ಪರಿ ನೀ ಕಂಡ ಶಿವಪಥವ
ಮಾನವರಿಗಱುಹೆಂಬ ಮಹದಭಿ
ಮಾನಿ ನೀನೇ ಜಗದ ಗುರುವೆಂ
ದಾ ನಿರೂಪಮನಲ್ಲಮನು ಹೊಗಳಿದನು ಗೊಗ್ಗಯನ || ೩೬ ||

ಬಳಿಕಲಾ ಗೊಗ್ಗಯ್ಯ ನೆಱೆ ನಿ
ಶ್ಚಳದ ತೋಟದ ಲಿಂಗಭಾವದ
ಬಳಕೆಯನೆ ಬಲಿದಿರುತಲಿರ್ದನು ನಿಜನಿವಾಸದಲಿ
ಇಳೆಯ ಭಕ್ತರ ಪಾವನವ ಮಾ
ಡಲಿಕೆ ತಾನೇ ಕುಱುಹುವಿಡಿದ
ಗ್ಗಳೆಯತನದಲಿ ನಡೆದನಲ್ಲಮನು ಲಿಂಗಲೀಲೆಯಲಿ *|| ೩೭ ||

**ಅಂತು ಗತಿ ೧೧ಕ್ಕಂ ಪದ ೫೧೦ಕ್ಕಂ ಮಂಗಳಂ**

೧. ಸುವಸು (ಇ) ೨. ತೋಱು (ಗ.) ೩. ಱುವನಂತೆ (ಗ.)

* ಈ ಪದ್ಯ (ಖ.) ಪ್ರತಿಯಲ್ಲಿಲ್ಲ.

# ೧೨ ಮುಕ್ತಾಯಿಯಕ್ಕನ ಗತಿ

**ಸೂಚನೆ:**

ಭಕ್ತಿಯನು ಮುಕ್ತಾಯಿಗಱುಹಿ[೧]ಸಿ[೧]
ಮುಕ್ತನಾದಜಗಣ್ಣನಿರವನು
ವ್ಯಕ್ತದಲಿ ವಿರಚಿಸಿದನೆಮ್ಮಯ ಗುರು ಗುಹೇಶ್ವರನು

ನೆಟ್ಟನಱುವೊಡೆ ಗುಪ್ತಭಕ್ತಿಯ
ಬಟ್ಟೆಯನು ಬಯಸುವರು ಭಾವಿಸಿ
ಮುಟ್ಟೆ ಮೋಹಿಸಿ ಬಾಹಿರಂಗದ ಭ್ರಮೆಯ ಭರಗೆಡಿ[೨]ಸಿ[೨]
ಕೆಟ್ಟ ಕಾಯದ ಕಳವಳಂಗಳ
ಕಟ್ಟೆ ಕಳೆದಾ ಪ್ರಳಯಕಾಲನ
ಮೆಟ್ಟಿ ನಡೆವರು [೩]ತಿಳಿವುದೀ[೩] ಪ್ರಭುಲಿಂಗಲೀಲೆಯ[೪]ನು[೪] ॥ ೧ ॥

ಅಲ್ಲಮಪ್ರಭುರಾಯನಾನತ
ರೆಲ್ಲರನು ಸಂಸಾರ [೫]ನಿರಸದ[೫]
ಕಲ್ಲಿ [೬]ಕಾರು[೬]ವ ಕೋಟಲೆಯ ಮಾಣಿಸಿ ಶರೀರದಲಿ
ಸಲ್ಲಲಿತಲಿಂಗಾನುಭಾವದ
ಬೆಲ್ಲವನು ಮೆಲಕಲಿಸಿ ನಿಜಸುಖ
ದಲ್ಲಿ ನಿಲಿಸುವೆನೆನುತೆ ಬರುತಿರ್ದನು ವಿನೋದದಲಿ ॥ ೨ ॥

ಪೊಡವಿಯಲಿ [೭]ನೆಱೆ[೭] ಗುಪ್ತಭಕ್ತಿಯ
[೮]ಲಡರ್[೯]ದ್ದೈ[೧೦]ಂಕ್ಯಸ್ಥಳ[೧೧]ಸಮಾಧಿಯ
ನೊಡರಿಸಿದನಜಗಣ್ಣನೆಂಬ ಮಹಾತ್ಮನಾತಂಗೆ
ಒಡನೆ ಹುಟ್ಟಿದಳೊಬ್ಬಳಱಿಯದೆ
ಕಡುಖತಿಯಲಿರುತಿರಲಿಕಲ್ಲಮ
ನಡೆದು ಬಂದನು ಮಾಣಿಸಲು ಮುಕ್ತಾಯ ಮನದಳಲ ॥ ೩ ॥

೧. ದ (ಅ, ಜ.) ೨. ಸೆ (ಇ, ಒ, ಗ.) ೩. ಕೇಳುವುದು (ಜ.) ೪. ಲಿ (ಅ, ಕ, ಗ, ಜ.) ೫. ವಿಷಯದ (ಇ); ನಿರಸನ (ಜ.) ೬. ಕರಗು (ಇ, ಜ.) ೭. ನಿಜ (ಅ, ಮು.) ೮–೧೦. ತೊಡರಿಪ್ಪ (ಇ, ಉ, ಜ.); ಪೊಡಲಿಗೈ (ಖ.) ೯–೧೧. ಲಿಂಗೈಕ್ಯದ (ಅ, ಒ, ಜ.); ದೈಕ್ಯಸ್ಥಿತಿ (ಇ.)
ಪ್ರ. ಲಿ. ಲ. ಅ

ಬರಲು ಮಿಗೆ ಕಾಣುತಲಿ ಸಲೆ ಸತ್
ಕರಿಸಿ ವಂದಿಸಿ ತನ್ನ ಚಿಂತೆಯ
ಪರಿಹರಿಸುವಂತಪ್ಪನೊಬ್ಬ ಮಹಾತ್ಮ ನೀನೆನಗೆ
ದೊರಕಿದೆಯೆಲಾ ಎನ್ನ ಪುಣ್ಯಕೆ
ಸರಿಯು[೧]ದಾರೆ[೧]ನುತಲ್ಲಮಪ್ರಭು
ಬರಲು ಮುಕ್ತಾಯಿಗಳು ಪರಿಣಮಿಸಿದರು ಭಕ್ತಿಯಲಿ ॥ ೪ ॥

ತಾಯೆ ಭಕ್ತರಿಗುಂಟೆ ಚಿಂತೆಗ
ಳಾಯಸಂಗಳು ಲೋಕಲೌಕಿಕ
ರಾಯತವ ನೀ ನೆಗಳಿ ಬಱಿದೆಗೆ ಹಲವ ಹಂಬಲಿಸಿ
ಬಾಯ ಬಿಡಲಹುದೇ ವೃಥಾ ನಿಷ್
ಕಾಯದಜಗಣ್ಣಂಗೆ ಮರುಳೇ
ಮಾಯೆ-ಮೋಹವಿದೇತಕೌ ಮುಕ್ತಾಯಿ ಕೇಳೆಂದ ॥ ೫ ॥

ಏನ ಮಾಡುವೆನಯ್ಯ ಎನ್ನ ನಿ
ಧಾನವಪ್ಪಜಗಣ್ಣ ತಂದೆಯ
ನಾನದೆಂತಗಲುವೆನು ನನಗಿದನನಿತ ಸೂಚಿಸದೆ
ತಾನು ಹೋದೊಡೆ ಬಳಿಕಲೆನಗಿ
ನ್ನೇನು [೨]ಗತಿಯೆಂದೆನುತೆ [೩]ಕಡುದು
ಮ್ಮಾ[೪]ನವೆ[೫]ಲ್ಲವ ನುಡಿದಳಾ ಮುಕ್ತಾಯಿಯಲ್ಲಮಗೆ ॥ ೬ ॥

ಮರುಳಲಾ ನೀನಕ್ಕ ಮುನ್ನೇ
ನಿರದಲಿಹ್ದನೆ ಬಳಿಕಲೀಗಲಿ
ಶರಿರವನು ಸಡಿಲಿಸಿದನೇ ಅಜಗಣ್ಣನಾರೆಂದು
ಪರಿಕಿಸದೆ ಹಂಬಲಿಸಲೇತಕೆ
ಗುರು ಗುಹೇಶ್ವರಲಿಂಗಸಂಗದ
ಶರಣನಾತನು ಮಱುಗದಿರು ಮುಕ್ತಾಯಿ ಕೇಳೆಂದ ॥ ೭ ॥

೧. ದೇನೆ (ಗ.) ೨–೫. ಯೆನ್ನೇನೆನುತಲಂತಪ। ಮಾಣದೆ (ಇ.) ೩–೪. ತನ್ನದು। ನಾ (ಘ.)

ಬೆಡಗನಾಡದಿರಯ್ಯ ಕೇಳೆ
ನ್ನೊಡನೆ ಹುಟ್ಟಿದನೀಸು ದಿನವೊಂ
ದೊಡಲುವಿಡಿದಜಗಣ್ಣನಿರ್ದನು ಗುಪ್ತಭಕ್ತಿಯಲಿ
ನಡೆದು ತೋಱಿಸುತೆಲ್ಲರಱಿಯಲು
ಕಡೆಯಲೀ ಪರಿ ಕಾಣಬಾರದ
ತೊಡಕನೊಡ್ಡಿದನೆಂದಳಾ ಮುಕ್ತಾಯಿಯಲ್ಲಮಗೆ ॥ ೮ ॥

ಕಾರಣವ ಕಾ[೧]ಣಿಸದ ಮನದ ವಿ
ಕಾರಿಗಳಿಗಾ[೧] ಶರಣರೊಂದು ಶ
ರೀರವನು ತೋಱಿದೊಡೆ ನಿನ್ನವರೆಂದು ನಂಬದಿರು
ಹಾರವಿಸದಿರು ತಿಳದು ನೋಡಿ ವಿ
ಚಾರಿಸುವೊಡಜಗಣ್ಣನೆಂಬನ
ಪಾರಮಹಿಮನು ನಿತ್ಯನೌ ಮುಕ್ತಾಯಿ ಕೇಳೆಂದ ॥ ೯

ಆತ [೨]ಮಹಿಮ[೨]ನು ನಿತ್ಯನಹನೀ
ಮಾತು ಹುಸಿಯದು ತಪ್ಪದಾದೊಡೆ
ಭೂತಳದೊಳಿರುತಿ[೩]ರದೆ[೩] ಗುಪ್ತಶಿವಾನುಭಾವನೆಯ
ರೀ[೪]ತಿಯಿಂದಜಗಣ್ಣನುಪಮಾ
ತೀತನಾ[೫]ದ[೫]ನು ಬಳಿಕಲೆಮ್ಮರ
ವೇತಕೆಂದೆನುತಿರ್ದಳಾ ಮುಕ್ತಾಯಿಯಲ್ಲಮಗೆ ॥ ೧೦ ॥

ಲೋಕಲೌಕಿಕರೊಡನೆ ಬಳಕೆಯ
ದೇಕೆ ಪರಮಾರ್ಥದಲಿ ತಾನೇ[೬]
[೬]ಕೈಕಸಾದಹೆನೆಂದೆನುತಲಜಗಣ್ಣ ನಿರ್ದಯಲ
ಸ್ವೀಕರಿಸಿದೊಡೆ ನೀನು ನಿನ್ನ ವಿ
ವೇಕದಲಿಯೊಂದೊಂದ ನುಡಿವುದು
ಸಾಕೆನುತೆ ಮುಕ್ತಾಯ ಸಂತೈಸಿದನು ಪ್ರಭುರಾಯ ॥ ೧೧ ॥

೧. ಣದೆ ಮನದಲಿ। ಕಾರಣಿಕರಾ (ಜ.) ೨. ಮುಕ್ತ (ಉ,ಚ.) ೩. ರುತೆ (ಉ.)
೪. ನೀ (ಉ.) ೫. ತ (ಕ.) ೬. ಕಾಕಿಯಾಗಿ (ಗ.)

ದೇವ ನಿಮ್ಮವರುಗಳ ಪರಿಯನು
ನೀವೆ ಬಲ್ಲಿರಿ ಹಾವಿನಡಿಯನು
ಹಾವುಗಳು ನೆಱೆ [೧]ಬಲ್ಲು[೧]ವಲ್ಲದೆ ನಮಗೆ ಗೋಚರವೇ
ಭಾವಿಸುವೊಡೆಮಗಿನ್ನು ಗತಿ ಮತಿ
ಯಾವುದೆಂದೆನುತಲ್ಲಮಪ್ರಭು
ದೇವರಿಗೆ ಮುಕ್ತಾಯಿ ಬಿನ್ನೈಸಿದಳು ಭಕ್ತಿಯಲಿ ॥ ೧೨ ॥

ಅಕ್ಕ ಕೇಳೌ ನಿನ್ನ ಹೆಸರಿಗೆ
ತಕ್ಕ ಬಯಕೆಯ ನೀನು ಬಯಸಿದೆ
ಮಿಕ್ಕ ಭವಭಾರಿಗಳು ಬಲ್ಲರೆ [೨]ಲಿಂಗ[೨]ಮಾರ್ಗವನು
ಹೊಕ್ಕು ಹೋರಟೆಯಿಲ್ಲವನು ಹೊ
ಯ್ದುಕ್ಕಿ ಸುಖಿ[೩]ಸುವುದಂತು[೩] ನಿಜಪದ
ದಿಕ್ಕೆ ನಿನಗಹುದೆಂದೆನುತೆ ಮುಕ್ತಾಯಿಗಿಂತೆಂದ ॥ ೧೩ ॥

ಹಱುಗೊಲನ ಜೋಗೈಸಿಕೊಳುತಲಿ
ತೊಱೆಯ ದಾಂಟುವ[೪]ರಂತೆ[೪] ಲಿಂಗವ
ನಱುವವರು ಕರ್ಮೇಂದ್ರಿಯಂಗಳನೊಯ್ಯನೋಸರಿಸಿ
ಹೊಱಗೆ ಮಾಡುವ ಮಾ[೫]ಟವೆಲ್ಲ[೫]ವ
ತೊಱೆ[೬]ವು[೬]ದಂತರ್ಮಾರ್ಗವೊ[೬]ಂದನೆ.
[೭]ಹೊಱುವುದಿ[೭]ದು ಶಿವಭಕ್ತಿಯೆಲೌ ಮುಕ್ತಾಯಿ ಕೇಳೆಂದ ॥ ೧೪ ॥

ನಿಯತವಿದು ದೇಹಿಗಳು ಕರ್ಮೇಂ
ದ್ರಿಯವ [೮]ಜಱುದೊ[೮]ಡೆ ಜೀವವಾವಾ
ಶ್ರಯದಲಿಹುದು ಮನಸ್ಸು ಮ[೯]ಚ್ಚುವುದೆಂತು ಪಟುವಾಗಿ
ಬಯಲು ತಾನಹ ಪರಿಯದಾವುದು
ನಿಯಮಿಸೈ ನೀನೆನಲು ನಿಜನಿ
ರ್ಣಯವನಾ ಮುಕ್ತಾಯಿಗಲ್ಲಮಲಿಂಗನಿಂತೆಂದ ॥ ೧೫ ॥

೧. ಕಾಂಬು (ಉ.) ೨. ನಿಮ್ಮ (ಜ.) ೩. ಯಾವಂದು (ಗ.); ಸುಪ್ಪೊಡಂತು (ಅ.) ೪. ಕೈಸಿ (ಬ.) ೫. ಯುವೆಲ್ಲ (ಉ.); ಟಕೂಟ (ಜ.) ೬. ದು ಸನ್ಮಾರ್ಗ ದಲಿಂದೊ (ಉ.); ದು ಅಂತಜ್ಞಾನವೊ (ಜ.) ೭. ಯುಱುತಿದು (ಜ.) ೮. ತೊಱೆ ವೊ (ಜ.) ೯. ಹೆ (ಕ.)

ಕೇಳಿದೌ ಶಿಶುಗಳಿಗೆ ತಾಯ್ಮೊಲೆ
ಹಾಲೆ ಜೀವನವಾದೊಡೆಯು ನೆ[1]ಱಿ
ಪಾಲನೆಱಿವುತೆ ಮೆಲ್ಲಮೆಲ್ಲನೆಯು[2]ಶನ[2]ವನು ಸ[3]ವಿ[3]ಸಿ
ಬಾಲಕರ ಪಟುಮಾಡಬಲ್ಲ ಸ
ಕೀಲಕರವ್ರೋಲ್ ಹೊಱಗೆ ಮಱಿದು ನಿ
ರಾಳದಲಿ ನಿಲಲಱುವುದೌ ಮುಕ್ತಾಯಿ ಕೇಳೆಂದ || ೧೬ ||

ಪರಮತತ್ವವ ನುಡಿದು [4]ಹೇಳು[4]ವ
ಗುರುವೆ [5]ನಿ[6]ನಗಿನ್ನೊ[7] ವಿಚಾರಿಸೆ
ವರಮನೋವಾಕ್ಕಾಯಕರ್ಮಗಳಿರಲು ನೀವೆಮಗೆ
ಹಿರಿದು ಬಲ್ಲ[8]ವಿಕೆಯಲ್[9] ವಾಕ್[10]ಂಚಾ
ತುರಿಯವನು ರಚಿಸಿದೊಡೆ ನಂಬುಗೆ
ದೊರಕುವುದೆ ನಮಗೆಂದಳಾ ಮುಕ್ತಾಯಿಯಲ್ಲಮಗೆ || ೧೭ ||

ಅಹುದು ಮತ್ತೇನವ್ವ ದಿಟ ಘನ
ಮಹಿಮನಾದರೆ ನೋಡಲಿದಿರಿ
ಟ್ಟಹುವೆ ನಿರ್ವಯಲಿಗೆ ಮನೋವಾಕ್ಕಾಯಕರ್ಮಗಳು
ವಿಹಿತವಾ ನಿರ್ಣಯವನಱುವೊಡೆ
ಬಹಳವದು ಸಂ[11]ಕೋಚ[11]ದಲಿ ನಿ
ರ್ವಹಿಸಿ ಹೇಳುವೆನೆನುತಲಲ್ಲಮನಾಕೆಗಿಂತೆಂದ || ೧೮ ||

ಬೆಂದ ನುಲಿಯಾಕಾರವಾಗಿಹು
ದೆಂದೊಡದು ನೆಯ್ವವರ ಕೆಲಸಕೆ
ಬಂದುದುಂಟೇ ಮರುಳೆ ಲಿಂಗಜ್ಞಾನವಹ್ನಿಯಲಿ
ಬೆಂದು ಹೋದೊಡ[12]ಲುಗನು[12] [13]ಭಾವಿ[14]ಸ
ಲೊ[15]ಂದುವಿಲ್ಲದ ಬಯಲುಗನೊಳಿ
ನ್ನೊಂದ ಕಲ್ಪಿಸಲಾಗದೌ ಮುಕ್ತಾಯಿ ಕೇಳೆಂದ || ೧೯ ||

೧. ಎ (ಉ.) ೨. ಸ್ನ (ಗ.) ೩. ಲಿ (ಉ, ಕ.) ೪. ತೋಱು (ಌ.) ೫–೬. ಸ (ಗ.) ೫–೭. ನಿಮ್ಮಿಂದಲಿ (ಉ.) ೮–೯. ವಸಂತೆ (ಕ.) ೮–೧೦. ವಿವೇಕಿಯೊಲು (ಗ.) ೧೧. ತೋಷ (ಗ.) ೧೨. ಲಿಂಗೆ (ಗ.) ೧೩–೧೪. ರೂಹಿ (ಕ.) ೧೩–೧೫. ಹಾನಿಗ! ಳೊ (ಇ.)

ಒಡೆಯ ಚಿತ್ತಯಿಸಯ್ಯ ನಿರ್ವಯ
ಲೊಡಲುಗನು ನೀನಹುದು ದಿಟವಾ
ದೊಡೆಯದೆಂತೆನ್ನೊಳು ವಿವೇಕವಿಚಾರಬೋಧೆಯನು
ನುಡಿವ ಪರಿಯೆಂತ[1]ಣ್ಣ[1] ನಿನ್ನಯ
ಬೆಡಗ ನಾನಱಿವಂತೆ ಹೇಳೆನ
ಲೊಡನೆಯಲ್ಲಮಲಿಂಗನಾ ಮುಕ್ತಾಯಿಗಿಂತೆಂದ ॥ ೨೦ ॥

ತಂಗಿ ಕೇಳಾರಾರ ಭಾವದ
ಭಂಗಿಯೆಂತಿಹುದಂತೆ ಮದ್ವಚ
ನಂಗಳೆಮ್ಮಯ ತನುಮ[2]ನೋವಚನ[2]ಗಳು ತೋಱುದೊಡೆ
ಅಂ[3]ಗವಿದರಾ[3]ವೆಂದು ನೀ ಮನ
ಸಿಂಗೆ ತಾರದಿರೆನುತಲಲ್ಲಮ
ಲಿಂಗನಾಕೆಗಿದೊಂದು ರೀತಿಯ ನುಡಿದು ತೋಱಿಸಿದ ॥ ೨೧ ॥

ಎಲ್ಲವಹುದೈ ದಿಟ ವಿಚಾರಿಸ
ಬಲ್ಲವರಿಗಾ ಪಿಂಡಮಯತನು
ವಿಲ್ಲದಿರೆ ತಾಳೋಷ್ಠಸಂಪುಟಸಂಗಶಬ್ದಗಳು
ಎ[4]ಲ್ಲಿ[4] ಸಂಜನಿಸಿದುವು ನಿಮ್ಮೊಡ
ಲಲ್ಲಿ ಪೇಳಿದ [5]ದಸರಿ[5]ದೊಡಕಿನ
ಸೊಲ್ಲಿನಂ[6]ಗ[6]ವನೆನುತೆ ಕೇಳಿದಳಾಕೆಯಲ್ಲಮನ ॥ ೨೨ ॥

ಮಗಳೆ ಕೇಳಾ ಪೃಥ್ವಿಮಯತನು
ಮುಗಿಲಿಗಿಲ್ಲದೊಡೇನು ಗರ್ಜನೆ
ನೆಗಳುತಿರವೇ [7]ಲೋಕವಱಿಯಲ[7]ದೇನು ಸೋಜಿಗವೇ
ಬಗೆಯೆ ಸಾಕ್ಷಾದಪ್ರಮೇಯದ
ಸಗುಣನಿರ್ಗುಣವೆನಿಸುವೆನ್ನಯ
ವಿಗಡತನಕೇನರಿದು ನುಡಿ ಮುಕ್ತಾಯಿ ಕೇಳೆಂದ ॥ ೨೩ ॥

೧. ಂತು (ಜ.) ೨. ಸಚ್ಛಾಯೆ (ಅ, ಕ, ಗ.) ೩. ಗಿಗಳು ನಾ (ಗ.) ೪. ಲ್ಲ (ಬ, ಜ.)
೫. ಶರಿಶ (ಅ, ಇ, ಕ.) ೬. ವ (ಇ.) ೭. ನೋಡೆ ಲೋಕ ವಿ (ಗ.)

ಅಹುದು ಮತ್ತೇನಯ್ಯ ನಿಮ್ಮಯ
ಮಹಿಮೆಯನು ನಾವೆತ್ತ ಬಲ್ಲೆವು
ಸಹಜವಾದೊಡೆ ವೇದಶಾಸ್ತ್ರಾಗಮಗಳುಪಮಿಸದ
ಬಹಳ [1]ನೀ ದಿಟ[1] [2]ನೀನೆ[2] ಶರಣೆಂ
ದಿಹೆವು ನಾವೆಮಗೇಕೆ ತರ್ಕ
ಸ್ಪೃಹೆಗಳೆಂದೆನುತಿರ್ದಳಾ ಮುಕ್ತಾಯಿಯಲ್ಲಮಗೆ || ೨೪ ||

ಮನದ ಮತ್ಸರವಳಿದು ಸ[3]ಮತೆಯ
ನೆನಹು ನೆಲಸಿ [4]ನಿಗರ್ವ[4]ತನದೊಂ
ದನುಭವಣೆಯುಳವಟ್ಟುದಾ ಮುಕ್ತಾಯಿಗೊಲವಿಂದೆ
ವಿನುತ ನಿ[5]ತ್ಯಾನಂದನಿರ್ಮಳ
ತನುವೆ ತಾನಹ ಸೌಖ್ಯತೆಯ ಸೂ
ಚನೆಯನುಪದೇಶಿಸಿದನೆಮ್ಮಯ ಗುರು ಗುಹೇಶ್ವರನು || ೨೫ ||

ನೂಲ ಹಿಡಿದೋಜೆಯಲಿ ಬೆಟ್ಟದ
ಮೇಲ[6]ನಡರುವರ[6]ಂತೆ ಭಕ್ತಿಯ
ಕೀಲನುಪದೇಶಿ[7]ಸಿದ ಗುರುವಚನಾ[7]ಜ್ಞೆಯನು ಹಿಡಿದು
ಲೀಲೆಯಿಂದಾ ಬ್ರಹ್ಮರಂಧ್ರವ
ನಾಲಿಸುತಲೊಡಹಾಯ್ದು ನಿಜದ ನಿ
ರಾಳದಲಿ ನಿಂದಿರ್ದಳಾ ಮುಕ್ತಾಯಿ ಭಕ್ತಿಯಲಿ || ೨೬ ||

ಸುಖವನೈದಿದಳಲ್ಲಮನ ಪದ
ನಖದ ಕಾಂತಿಯ ಕಂಡು ಮನಸಿನ
ಮುಖದ ಕತ್ತಲೆ ತಿಳಿ[8]ಯೆ[8] ಪರಮಾನಂದಭಾವದಲಿ
ಅಖಿಲಶರಣರು ನೋಡಲಚಳಿತ
ಸುಖದೊಳೋಲಾಡುತ್ತಲಿರ್ದಳು
ನಿಖಿಳೆ ಸದ್ಯೋನ್ಮುಕ್ತೆ ಮುಕ್ತಾಯಿಗಳು ಜಗವರಿಯೆ || ೨೭ ||

**ಅಂತು ಗತಿ ೧೨ಕ್ಕಂ ಪದ ೫೩೭ಕ್ಕಂ ಮಂಗಳಂ**

೧. ನಿಧಾನ (ಅ, ಇ, ಉ, ಕ, ಜ.) ೨. ನಿನಗೆ (ಜ.) ೩. ಮ (ಗ.) ೪. ತು ಗರುವ (ಉ.) ೫. ಸ (ಗ, ಜ.) ೬. ಕಡುಪುವಳ (ಏ.) ೭. ಸಲು ತಾ ಗುರುವಾ (ಇ.); ಸಲು ಗುರುಚರಣಾ (ಗ.) ೮. ದು (ಅ, ಇ.)

# ೧೩ ಸಿದ್ಧರಾಮನ ಗತಿ

**ಸೂಚನೆ:**

ಲಿಂಗಪ[೧]ದ[೧]ವನು ಸಿದ್ಧರಾಮ
ಯ್ಯಂಗೆ ತೋಱಿಸಿ ಗುರು ಗುಹೇಶ್ವರ
ಲಿಂಗಸಿರ್ದನು ಸೊನ್ನಲಾಪುರದೊಳಗೆ ಲೀಲೆಯಲಿ

ಇಲ್ಲಿ ಕೇಳುವುದಿನ್ನು ಸಾಧಕ
ರೆಲ್ಲರಲ್ಪಜ್ಞಾನ[೨]ಮಾರ್ಗವ[೨]
ಹೊಳ್ಳು[೩]ಮಾಡಿ[೩] ವಿಶುದ್ಧಪೂ[೪]ರ್ವ[೪]ಜ್ಞಾನಮಾರ್ಗದಲಿ
ಒಳ್ಳಿತಾಗಿಹ ಸುಖವ ಬಯ[೫]ಸಲು[೫]
ಬಲ್ಲ ಭಕ್ತರಿಗಱಿವು ತೋಱಿಸು
ವಲ್ಲಮಪ್ರಭು ಗುರುಗುಹೇಶ್ವರಲಿಂಗಲೀಲೆಯಲಿ ॥ ೧ ॥

ತಾನೆ ತನ್ನ ವಿನೋದದಿಂದೆ ಮ
ಹಾನುಭಾವನ ಬಯಸಿ ಬಳಲುವ
ಮಾನವರಿಗಾ ಪ್ರಾಣಲಿಂಗವ[೬]ನಱುಹಿ[೬]ಸುವೆನೆನುತಿ
ತಾನೆ ವರಗುರು ತಾನೆ ಜಂಗಮ
ತಾನೆ ಶಿವಲಿಂಗಸ್ವರೂಪವ
ನೂನವಿಲ್ಲದೆ ಧರಿಸಿಕೊಂಡಾ ಪ್ರಭುವೆ ಬರುತಿರ್ದ ॥ ೨ ॥

ಪಿಂಡದೊಳು ಪಿರಿದೆನಿಪ ನಾಡೀ
ಮಂಡಲಂಗಳ ತಾನೆ ಸಾಧಿಸಿ
ಕ[೭]ಂಡಖಂಡಜ್ಞಾನ[೮]ದಿಕ್ಕೆ[೮]ಯ ಪರಿಯನಿದಿರಿಟ್ಟು
ಮಂಡಲಿಸಿ ಕಲುಮರನೊಳೊಡ್ಡಣೆ
ಗೊಂಡು ಮಾಡಿಸಿ ಹೆಸರುವಡೆದು
ದ್ದಂಡ[೯]ರೀತಿ[೯]ಯ ಸಿದ್ಧರಾಮನ ಪುರಕೆ ಪ್ರಭು ಬಂದ ॥ ೩ ॥

೧. ಥ (ಕ, ಗ, ಜ.) ೨. ಪಥವನು (ಜ.) ೩. ಗಳೆದು (ಇ, ಉ.) ೪. ಣ (ಕ.) ೫. ಸುವ (ಉ.) ೬. ತೋಱಿ (ಉ.) ೭. ಖ (ಕ, ಜ.) ೮. ದೀಕ್ಷೆ (ಖ.) ೯. ವೃತ್ತಿ (ಅ, ಖ, ಚ, ಜ.)

ಹಲವು [1]ದೆಸೆ[1]ಯಲಿ ಚಿತ್ರ[2]ಪತ್ರದ
ಚೆಲುವದಾಗಿರೆ[2] ಪರಿಪರಿಯ ದೇ
ಗುಲವ ಮಾಡಿಸುತಿಪ್ಪ ಗುಡ್ಡಗಳಿಕ್ಕೆವಿಂಡುಗಳ
ನೆಲನೆ ಬೆಸಲಾದಂತೆ [3]ಮಿಗೆ ಮಣ್[3]
ಗೆಲಸದೊಡ್ಡರು ಬಂಡಿಕಾಱರು
ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ ॥ ೪ ॥

ನೂಲ ಸಂಕಲೆಗಡಿದು ಕನಕದ
ಕೋಳವನು ಕಾಲಿಂಗೆ ಕೀಲಿಪ
ಕಾಳುಮತಿಯವನಂತೆ ಸತಿಸುತಕೂಟ ಭಯವೆಂದು
ಬಾಳಿಕೆಯನತಿಗಳೆದು [4]ಮರಳಿಯು[4]
ಬೋ[5]ಳುಮುಂಡೆಯ ಕೀರ್ತಿಗೋಸುಗ
ಕೋಳುಹೋದನೆ ರಾಮನೆನುತಲ್ಲಮನು ಬೆಱಗಾದ ॥ ೫ ॥

ಚಿಕ್ಕ ಸಂಸಾರವನು ಸಡಿಲಿಸಿ
ಹೊಕ್ಕನಲ್ಲಾ [6]ಹಿರಿ[6]ಯ ಸಂಸಾ
ರಕ್ಕಕಟ ವಿಖ್ಯಾತಿಪೂಜಾಲಾಭದಿಚ್ಛೆಯಲಿ
ಸಿಕ್ಕಿ ಬಿದ್ದನು ಸಿದ್ಧರಾಮನು
ಮಿಕ್ಕ ಭವಭಾರಿಗಳನಾದೊಡೆ
ಮುಕ್ಕ[7]ದೇ ವಿಧಿಯೆನುತಲಲ್ಲಮ ನೋಡಿ[7] ಬೆಱಗಾದ ॥ ೬ ॥

ಒಡ್ಡರಾಮನಿದೇನು ಗೊಡವೆಯ
ನೊಡ್ಡಿಕೊಂಡು ವೃಥಾ ಮನಸ್ಸನು
ಗೊಡ್ಡು ಮಾಡಿಯೆ ಕೆಟ್ಟನೆನುತಲ್ಲಮನು ಕೇಳಿದೊಡೆ
ಗುಡ್ಡರೆಲ್ಲರು ಗುರುವನಾವನು
ಖಡ್ಡತನದಲಿ [8]ಜಱೆ[8]ವನೆನುತವ
ರಡ್ಡಹಾಯ್ದರು ತೊಡಗಿದರು ತೋಟಿಯನು ತಮತಮಗೆ ॥ ೭ ॥

೧. ಪರಿ (ಜ.) ೨. ಪತ್ರಾ। ವಳಿಯು। ರಾಜಿಸೆ (ಗ) ೩. ಮೇಣ್ ಬಲು (ಚ.) ೪. ಬಳಿಕೀ (ಐ, ಋ, ಚ.) ೫. ಗೋ (ಕ, ಗ, ಚ.) ೬. ಹೇ (ಕ.) ೭. ದಿಹುದೇ ವಿಧಿಯೆನುತಲಲ್ಲಮ (ಋ, ಗ.) ೮. ನುಡಿ (ಗ.); ಬಯಿ (ಋ.)

ಆರರೆ ಘಡಘಡದಾರು ನಮ್ಮಯ
ಗುರುವನೀ ಪರಿ ಜಱೆದು [1]ಜಾಡಿಸಿ[1]
ಹರಿಹರಬ್ರಹ್ಮಾಮರೇಂದ್ರರು ನುಡಿಯಲಮ್ಮವರೆ
ಮರುಳು ಮಾನವ ನೀನು ನುಡಿದರೆ
ಸರಿಯೆ ಸಿದ್ಧಂಗೆನುತಲಿದ್ದರು
ಕೆರಳಿ ಗುಡ್ಡಗಳೆಕ್ಕೆವಿಂಡುಗಳಲ್ಲಮಪ್ರಭುವ ॥ ೮ ॥

ಅಕಟ ನಿಮ್ಮಯ ಗುರುವಿನಾಗಮ
ಯುಕುತಿ ಪಾಷಾಣಕ್ಕೆ ಬಂದುದೆ
ವಿಕಳಸಿದ್ಧನ ನಂಬಿ ಪಡೆದಿರಿ ಗುಡ್ಡಪದವಿಯನು
ಸಕಲ ಕಲ್ಲನುಕಡಿದು ಕ[2]ಲ್ಲಿಗೆ[2]
ಶಿಖರ-ದೇಗುಲವೆಂದು ಮಾಡಿಸಿ
ಮುಕರಿಸುವರವರೊಡ್ಡರಲ್ಲದೆ ಸಿದ್ಧರಲ್ಲೆಂದ ॥ ೯ ॥

ಎಕ್ಕೆವಿಂಡುಗಳೆಲ್ಲರಾಳ್ದನ
ಮಿಕ್ಕು ಜಱೆವಲ್ಲಮನ ಮಾತಿಗೆ
ಕೊಕ್ಕರಿಸಿ ಕೆಕ್ಕರಿಸಿ ಕೋಪಾಟೋಪವಾವರಿಸಿ
ತಕ್ಕಯಿಸಿ ಕೆಡೆಬಡಿವೆವೆನುತಡ
ಹೊಕ್ಕು ವ್ಯೆ[3]ದುಡಿಕಿದೊಡೆ ನಗುತಲಿ
ಸಿಕ್ಕದವದಿರಿಗಲ್ಲಮಪ್ರಭುರಾಯನಿಂತೆಂದ ॥ ೧೦ ॥

ಸಲುವುದೈದಿಟವಿನ್ನು ನಿಮಗೆ
ಕ್ಕಲನ ಹೆಸರದು ಹುಸಿಯೆ ಅಲ್ಲದೊ
ಡುಲಿದು ಘೂರ್ಮಿಸಿ ಕೆರಳಿ ಮೊಗ್ಗರವಾಯ್ತುಪದೇ ಬಱಿದೆ
ಬಲುಹು ನಿಮ್ಮಯ ಗುರುನಿರೂಪಣೆ
ಕಲಹಕಾರಣರಾದಿರೆನುತಲಿ
ಹಳಿದು ಹೀಹಾಳಿಸಿದನಲ್ಲಮಲಿಂಗನವರುಗಳ ॥ ೧೧ ॥

೧. ನುಡಿವರು (ಉ.); ಜಾಳಿಸಿ (ಅ.); ಜಂಕಿಸಿ (ಇ.) ೨. ಲ್ಲಲಿ (ಜ.)
೩. ಕೈ (ಗ)

ನೋಡು ನೋಡಾ ಮತ್ತೆ ಮಾಣದೆ
ನಾಡ ಮಾತನು ಕಲಿತು ನಮ್ಮೊಡ
ನಾಡುತಿಹರೆ ದೊಠಾರತನದಲಿ ಮರುಳುತನದಿಂದೆ
ಬೇಡ [1]ಬೇಡಿ[1]ನ್ನಿಮ್ಮ ಗುರುವನು
ಪೋಡಿಗಳೆದರೆ ಕೆಡುವೆ ನೀನೆನು
ತಾಡುತಿರ್ದರು ಬಱಿಯ ಬೀರವ ಗುಡ್ಡರಲ್ಲಮಗೆ ॥ ೧೨ ॥

ಗುಡ್ಡಗಳು ನೀವಕಟ ನಮ್ಮಯ
ಖಡ್ಡತನ[2]ಕಾನುವಿರೆ[2] ನಿಮ್ಮಯ
ದೊಡ್ಡನನು ಕರೆತನ್ನಿ ನೋಡುವೆವಾತನಳಬಳವ
ಒಡ್ಡರಾಮನ ರೀತಿಯನು ಭವ
ದೊಡ್ಡವಣೆಯನು ಕಾಂಬೆವೆನುತಲಿ
ಗುಡ್ಡರೆಲ್ಲರು ಕೆರಳುವಂತಿರೆ ನುಡಿದನಲ್ಲಮನು ॥ ೧೩ ॥

ಕೆಡಹಿಕೊಳ್ಳಿನ್ನೀತನಾಳ್ದನ
ಜಡಿದು ನುಡಿದನುಕ್ಕ[3]ವಿ[3]ಸಿ ಹೋಹನೆ
ಹಿಡಿದುಕೋ ಕೋ ಎನುತೆ ಗುಡ್ಡ[4]ಗಳಿಕ್ಕೆವಿಂಡುಗಳು[4]
ಬಿಡದೆ ತೆಕ್ಕೆಯೊಳಲ್ಲಮನ ಬಯ
ಲೊಡಲ ಬಂಧಿಸಲೆಂದು ಬಿಗಿಯಲು
ಹಿಡಿಹಿಗಿಲ್ಲದೊಡವರು ಬೆಱಗಾಗಿರ್ದರದ ಕಂಡು ॥ ೧೪ ॥

ನೆರವಿ [5]ತಾನಾ[5]ಗಿಹನು ತತ್ತಡೆ
ಹೊರಗೆ ಬಂದಿಹ ದೂರ ಹೋಗಿಹ
ತೆರಳ ತಕ್ಕೆಗೆ ಸಿಕ್ಕನೀ ಪರಿ ಹಲವು [6]ವಹಣಿ[6]ಯಲಿ
ಹುರುಳುಗೆಡಿಸಲು ಬಳಿಕ ಗುಡ್ಡರು
ಕೆರಳಿ ಕೆಡೆಯೆನುತಲ್ಲಮನ ಮೇ
ಲುಂಠವಣಿಸಿ ಕವಿದಿಟ್ಟು ಕಱಿದರು ಕಲ್ಲ ಮಳೆಗಳನು ॥ ೧೫ ॥

೧. ಹೋಗಿ (ಅ.) ೨. ಕಾಣುವಿರೆ (ಚ.); ಕಿನ್ನಾರೆ (ಇ.) ೩. ಲಿ (ಅ, ಇ, ಕ, ಗ.)
೪. ದ ಹಿಂಡು ಸಂದಣಿಸಿ (ಜ.) ೫. ಯೊಳು ತಾ (ಜ.) ೬. ಪವಣಿ (ಅ, ಕ, ಗ.)

ಪಿಂಡ[೧]ಭಾರದ[೨] ದೇಹಿಯನು ವೈ
ಗಂಡು ನೋಯಿಸಬಲ್ಲುವಲ್ಲದೆ[೩]
ಖಂಡಿಸುವುವೇ ಬಯಲದೇಹಿಯ[೪]ನಾವ[೪] ಕೈದುಗಳು
ಕಂಡುದುಂಟೇನಲ್ಲಮನ ನಿಡು
ಗುಂಡುಗಳು ಮೈಗಾಣಿಸದೆ ಭೂ
ಮಂಡಲದಲುರುಳಿದುವು ನೋಡುವರೆಲ್ಲ ಬೆಱಗಾಗೆ || ೧೬ ||

ನೊಂದು ಸೈರಿಸದವ ಕನಿಷ್ಠನು
ನೊಂದು ಸೈರಿಸುವವನು ಮಧ್ಯಮ
ನೊಂದೆನೆಂಬುದು [೫]ನೆನಹಿಗಿ[೫]ಲ್ಲದೊಡಾತನುತ್ತಮನು
ಎಂದು ಬಗೆಯುತೆ ತನ್ನ ಮನದಲಿ
ನೊಂದೆನಾದೊಡೆ ಮೂಜಗಂಗಳು
ಬೆಂದು ಹೋಹುವೆನುತ್ತೆ ನಸುನಗುತಿರ್ದನಲ್ಲಮನು || ೧೭ ||

ಆಳು ನೆರೆದುದು ಲಕ್ಕ ಸಂಖ್ಯೆಗೆ
ಮೇಳವಿಸಿ ಕವಿದಿಡುತಲಲ್ಲಮ
ಹೂಳಿಹೋದನು ಕವಣೆಗಲ್ಲಲಿ ಕೈದುಗಳಲೆನಲು
ಹೇಳಲೇನದ ಕಲ್ಲ ರಾಶಿಯ
ಮೇಲೆ ನಿಂದನು ಮತ್ತೆ ತನ್ನಯ
ಲೀಲೆಯಲಿ ನಿರ್ಲೇಪನಿರ್ದನು ನಗುತೆ ಪ್ರಭುರಾಯ || ೧೮ ||

ಮುನಿದು ಮುತ್ತಿಯೆ ಸೆಣಸಿ ಹೋರುವ
ಜನಕೆ ಪ್ರತ್ಯೇಕ[೭]ದಲಿ [೭]ಬಹುರೂ
ಪನೆ ವಿರಾಜಿಸಿ ಹಲಬರ[೭]ಲ್ಲಮರಾದರೆಂಬಂತೆ
ಎನಿತು ಜನ ವಾಜಿರಾಂ[೮]ತು ನಿಂದೊಡೆ
ಯ[೮]ನಿತು ರೂಪಿನಲಾಂತು ನಿಂದನು
ಘನಮಹಿಮನೆಮ್ಮಲ್ಲಮಪ್ರಭು ಲಿಂಗಲೀಲೆಯಲಿ || ೧೯ ||

೧–೨. ವಾಗಿಹ (ಬ.) ೧-೩. ವಾಗವ ದೇಹಿಯನು ಕೈ। ಗಂಡು ನೋಯಿಸ ಲೆಂತು ಬಲ್ಲವು(ಗ.) ೪. ನವರ(ಇ.) ೫. ಮನವೊಳಿ (ಉ.) ೬. ತ್ರೈಷ್ಟ (ಇ, ಗ, ಜ.) ೭. ಮೂರ್ತಿಯು। ನನುಕರಿಸಿ ಪಲಬರುಗಳ (ಗ.) ೮. ತರೆಯು ತಾ। ನ (ಉ.)

ಛಾಯೆಯೊಳು ಕಾಳಿಗವ ಮಾಡುವ
ಾಯುವಶರುಗಳಂತೆ ಕಡೆತನ
ಾಯುಸವೆ ಕೈ[೧]ಗ[೧]ಟ್ಟ [೨]ಹೋಯಿತು[೨] ಕದನಮುಖದೊಳಗೆ
ಾಯುವಿರಹಿತನಲ್ಲಮಪ್ರಭು
ಯನಾರೆಂದಱಿಯಲಱಿಯದೆ
ಾಯುಸವ[೩]ನಾಳಿ[೩]ದರು ಗುಡ್ಡಗಳಿಕ್ಕೆವಿಂಡುಗಳು ॥ ೨೦ ॥

ಪರಿಕಿಸಲು ಹರಿಯಾದೊಡಾಗಳೆ
ರುಹಿ ಚಕ್ರದೊಳಿಡುವ ಮೆಣ್ ಪುರ
ರನು ಮು[೪]ಳಿ[೪]ದೊಡೆ [೫]ಭಾಳನೇತ್ರದ[೫] ಕಿಡಿಯ [೬]ಕೆದರು[೬]ವನು
ರಿಗಳನು ನೋಯಿಸನು [೭]ತಾನೂ
[೭]ರಳನೆನುತಲ್ಲಮನ ಮಹಿಮೆಗೆ
ಶರಣು ಶರಣೆನುತಿರ್ದರೆಲ್ಲರು ಕೂಡೆ ನೋಟಕರು [೮] ॥ ೨೧ ॥

ನಮ್ಮ ಸಿದ್ಧನ [೯]ಸೆಣಸಿದಾತಂ[೯]
ೂಮ್ಮ ಶಿಕ್ಷೆಯ ಮಾಡದನ್ನಕ
ಮ್ಮ ಕೋಪಾಟೋಪ ನಿಲ್ಲದೆನುತ್ತೆ ಪರಿತಂದು
[೧೦]ಮ್ಮನೆಯ್ತಂದೊಬ್ಬ ಜಂಗಮ
ಮ್ಮಗೆಡಿಸಿಯೆ [೧೧]ಹಳಿ[೧೧]ದು ನುಡಿದನು
ಮ್ಮನೆಂದಱಿಪಿದರು [೧೨]ಹದನನು[೧೨] ಸಿದ್ಧರಾಮುಂಗೆ ॥ ೨೨ ॥

ತ (ಜ,ಮು.); ಯು (ಅ,ಓ,ಕ,ಚ.)
ತಲ್ಲದೆ (ಉ.)
ತಾಳಿ (ಉ.); ಮಾಡಿ (ಮು.)
ನಿ (ಬ.)
ಹಣೆಯ ಕಣ್ಣಲಿ (ಇ.)
ತೋಱು (ಬ.); ಕಾರು (ಕ,ಚ.) ೭. ಹಿಂದಕೆ। ತೆ (ಅ.)
ಶರಣೆನುತ ಕೈಮುಗಿವುತಿರ್ದರು ಕೂಡೆ ತಮತಮಗೆ (ಅ.)
ಹಳಿದು ನುಡಿವಂ (ಉ); ನಿಲಸಿದಾತಂ (ಏ.); ನೆಳಸಿದಾತಂ (ಕ,ಚ.)
. ಗ (ಉ.) ೧೧. ಜರಿ (ಬ.); ಮುಳಿ (ಖ.)
. ಹಲಬರು (ಗ.); ಜಗಡವ (ಜ.)

ಆರು ನಮ್ಮನು ಜಱಿದವನು ಜಂ
ಭಾರಿಯೋ ದನುಜಾರಿಯೋ ಕಾ
ಮಾರಿಯೋ [1]ತೋಱ[1]ವನ ಹೆಡತಲೆಗುಗಿವೆ ನಾಲಗೆಯ
ಬೇರು ಸಹಿತವೆ ಕೀಳುವೆನು ಕೈ
ವಾರವೇಕೆನುತೆದ್ದು ಬಂದನು
ಧೀರತನದಲಿ ಸಿದ್ಧರಾಮನು ಗಜಱಿ ಗರ್ಜಿಸುತೆ ॥ ೨೩ ॥

ಲೇಸು ಲೇಸೈ ಸಿದ್ಧರಾಮನ
ವಾಸಿ ಸಂಸಾರಿಗಳಿಗಿಂದಲಿ
ಸಾಸಿರಕೆ ಪೆಗ್ಗಳಿಸಿತಲ್ಲಾ ಸುಡು ಯತಿತ್ವವನು
ಈಸು ಕೋಪಾಟೋಪ [2]ರೋಷಾ
ವೇಶ[2]ವೇತಕೆ ಯೋಗಿಯಾದ ನಿ
ರಾಸೆವಂತಂಗೆನುತಲಿದ್ದನು ನಗುತೆ ಪ್ರಭುರಾಯ ॥ ೨೪ ॥

ಆವ ಪರಿಯಿಂದಾದೊಡೆಯು ಸುಖ
ಸೇ[3]ವೆಯನು[3] [4]ಸೂಚಿ[4]ಸುವನಲ್ಲದೆ
ಸಾವ ಹುಟ್ಟುವ ಕರ್ಮಬಂಧದ [5]ನುಡಿ[5]ಯ[6]ನುಸುರು[6]ವನೆ
ದೇವನಲ್ಲಮ ನುಡಿದು ತೋಱಿದ
ಭಾವ ಸೊಗಸದೆ ಕೋಪದುರಿಯಲಿ
ತೀವಿ ಕಿಡಿಕಿಡಿವೋಗುತಿರ್ದನು ಸಿದ್ಧರಾಮಯ್ಯ ॥ ೨೫ ॥

ಸಾಕು ಸಾಕು ಮಹೇಂದ್ರಜಾಲವ
ನೀ ಕಲಿತು ಬಂದೆಮ್ಮ ಮುಂದಿಯ
[7]ಕಾಕುತನದಲಿ [8]ಕಾಡಿದಾ ಮೊಗ್ಗಿ[8]ನ್ನು[7] ನಮ್ಮೊಡನೆ
ನೂಕಲಱಿಯದು ನಿನಗೆನುತಲು
ದ್ರೇಕದಿಂದಲಿ ಸಿದ್ಧರಾಮನ
ನೇ[9]ರ್ವಹ[9]ಣಿಯುಲಣಕವಾಡುತಲಿರ್ದನಲ್ಲಮನ ॥ ೨೬ ॥

೧. ಹೇಳ (ಉ.) ೨. ವಿರಲಿಕೆ ವೇಷ (ಗ.) ೩. ವನೆಯು (ಉ, ಗ.) ೪. ಜೋಡಿ (ಉ.) ೫. ಬಗೆ (ಜ.) ೬. ನೆಣಿಸು (ಚ.) ೭. ನೂಕಿ ಗರ್ಜಿಸುತಿರ್ದನೆಯಿನುಗಿಸ್ಸೀಗ (ಜ.) ೮. ಕಾಡದಿರು ಹೋಗಿ (ಅ.) ೯. ಹವ (ಅ, ಬ.)

ಭಾಪುರೇ ಮಝು ಪೂತು ನೀನಹು
ದೀ ಪರಿಯಲಿರಬೇಕು ಮನದಾ
ಳಾಪದಂಗವಣೆಗಳು ಮಿಗೆ ಮಾಯಾಪ್ರಪಂಚಿನಲಿ
ಕೋಪ ನಿಮ್ಮಯ ಸಂಪ್ರದಾಯಕ
ಳಾಪದಲಿ ಶಾಶ್ವತವಲಾ ನಿ
ರ್ಲೇಪಗೀ ಪರಿಯುಚಿತವೇ ರಾಮಯ್ಯ ಕೇಳೆಂದ ‖ ೨೭ ‖

ಕೆಣಕದಿರು ನೀ ಸಂಪ್ರದಾಯಗ
ಳೆಣಿಕೆ ನಿನಗೇ[1]ಕಕಟ[1] ಲೋಕವ
ನಣಕವಾಡಿಯೆ [2]ಹೋಹೆ[2]ಯಲ್ಲದೆ ಯೋಗಮಾರ್ಗದಲಿ
ಸೆಣಸದಿರು ನೀ[3]ನಾಚೆಯೀಚೆಯ[3]
ಬಣಗರಂದದಲೆಮ್ಮನೆಂದರೆ
ಹಣೆಯ ಕಣ್ಣಿನ ಕಿ[4]ಡಿಯ[4] [5]ಕೆದ[5]ಱುವೆನೆಂದ ರಾಮಯ್ಯ ‖ ೨೮ ‖

ಚಾಗು ಚಾಗುರೆ ನೊಸಲುಗಣ್ಣಿನ
ಬೇಗೆಯಲಿ ಮುನ್ನೆನಿತ ಕೊಂಡೆಯೊ
ಯೋಗಿಯಹುದೈ ನೀನು ಹಿಂಸಾಧ[6]ರ್ಮಕರ್ಮದ[6]ಲಿ
ರಾಗದಿಂದುರಿದೇಳುತಿಹ ಭವ
ರೋಗಿ ನಿನ್ನೊಳು ಮಾತನಾಡಲಿ
ಕಾಗದೆಮಗೆನುತಿರ್ದನಲ್ಲಮ ಸಿದ್ಧರಾಮಂಗೆ ‖ ೨೯ ‖

ಜಡಿದು ನುಡಿವುದನೀತನಾದೊಡೆ
ಬಿಡನೆನುತ್ತಲಿ ಸಿದ್ಧರಾಮನು
ಘುಡಿಘುಡಿಸಿ ಘೂರ್ಮಿಸುತೆ ಕೋಪಿಸಿ ನೊಸಲ ಕಣ್ದೆಱೆಯೆ
ಸಿಡಿಲುಗಿಡಿಗಳು ಸೂಸೆಯಲ್ಲಮ
ನಡಿಗಳೆಡೆಯನು ಹೊ[7]ದ್ದ[7]ಲಮ್ಮದೆ
ಸಿಡಿದು ಸೀಕರಿ[8]ಗರಿ[8]ಸುತಿರ್ದವು ಸಕಲಜೀವರನು ‖ ೩೦ ‖

೧. ಕೆಸುತ (ಉ.) ೨. ದಣಿವೆ (ಜ.) ೩. ನಿನಿತುಯುದ್ಧಕೆ (ಜ) ೪. ಚ್ಚ (ಅ, ಉ, ಜ.) ೫. ತೋ (ಒ, ಮು.) ೬. ನೀತಿಯ (ಜ.) ೭. ಂದ (ಗ, ಜ.) ೮. ಗೊಳಿ (ಜ.)

ಮಾಡಿಕೊಂಡನು ಪರಮಪುರುಷನ
ಕೂಡೆ ತೋಟಿಯ ಸಿದ್ಧರಾಮನು
ಮೂಢತನದಲಿ ಹವಣನರಿಯದೆ ಶಿವ ಮಹಾದೇವಾ
ನೋಡೆ ಬಡವನ ಕೋಪವವುಡಿಗೆ
ಕೇಡು ತಹವೊಲ್ ತನ್ನ ಪುರವನೆ
ಕೂಡೆ ಸುಡುತಿದೆ ಕಿಚ್ಚುಗಣ್ಣಿಂದೊದಱೆ ತ್ರಿಪುರಜನ ‖ ೩೧ ‖

ಕಡಲನತಿಮಥನವನು ಮಾಡಲು
ಸುಡುತೆ ಬಹ ಹಾಲಾಹಲಾಗ್ನಿಯು
ಕಡುಹ ನಿಲಿಸಿ ಜಗಂಗಳನು ರಕ್ಷಿಸಿದ ಶಿವನಂತೆ
ತೊಡೆದನಾಗಳೆ ನೊಸಲ ಕಣ್ಣಿನ
ಕಿಡಿಯನೆಲ್ಲರನುಳುಹಿದನು ತ
ನ್ನಡಿಯ ಕೃಪೆಯಿಂದಲ್ಲಮಪ್ರಭುರಾಯ ನಿಮಿಷದಲಿ ‖ ೩೨ ‖

ಕಲ್ಲ ತಾಗಿದ ಮಿಟ್ಟಿಗೆಯಂದದ
ಲೆಲ್ಲ ಮುರಿದುವು ನೊಸಲುಗಣ್ಣಿನ
ದಳ್ಳುರಿಯ ನಾಲಗೆಗಳೊಯ್ಯನೆ ಹುಟ್ಟಡೆಡೆಗಾಗಿ
ಬಳ್ಳಿ ಮರನನು ಹಬ್ಬುವಂದದಿ
ನಿಲ್ಲದಡರಲು ಬಳಿಕ ತಾ ತ
ನ್ನಲ್ಲಿ ಸಿಡಿಮಿಡಿವೋಗುತಿರ್ದನು ಸಿದ್ಧರಾಮಯ್ಯ ‖ ೩೩ ‖

ನೊಸಲ ಕಣ್ಣನು ತೋಱುವ[೨]ವರಿಗೆ[೨]
ವಿಷಮತರದಂಗಾಲ ಕಣ್ಣನು
ಪಸರಿಸುವರಂ[೩]ಟಕಟ ಮರುಳ್ಗೇ[೩] ನಿನ್ನ [೪]ಹವಣ್ಗೇ[೪]ನು
ಸಸಿನೆ ಮಾಣೆನ್ನಾಡೊಡೆಯು ಗ
ರ್ವಿಸುವ ಬುದ್ಧಿಯನೆಸುತೆ ಮಿಗೆ ಜೋ
ಧಿಸಿದನೊಲವಿಂದಲ್ಲಮಪ್ರಭು ಸಿದ್ಧರಾಮಂಗೆ ‖ ೩೪ ‖

೧. ಂಟೆ (ಅ, ಬ, ಕ.) ೨. ರಿಗತಿ (ಗ.) ೩. ಟಕಿವಂದಮಿಳಿ ನೀ (ಉ.) ೪. ಹಾಹೇ (ಅ, ಜ.)

ನಾಚಿದುದು ಮನ ನೊಸಲ ಕಣ್ಣಿಗೆ
ಚಾಚಿದುವು ಬಳಿಕೆವೆಯ ಕದಗಳು
ಸೂಚಿಸಿತು ಪರಿಪಾಕಭಾವನೆ ಚಿತ್ತವೃತ್ತಿಯಲಿ
ಆಚರಿಸಿತನುತಾಪ ಗರ್ವ[೧]ಕೆ[೧]
ಮೋಚನ[೨]ವೆ[೨] ಮುಖವಾಯ್ತು ಯೋಗದ
[೩]ಶೌ[೩]ಚಿತೆಗೆ [೪]ಬೇರೂಱಿತಿರ್ದುದು ಸಿದ್ಧರಾಮನಲಿ[೪] ‖ ೩೫ ‖

ತ್ರಿಪುರಸಂಹರನೀತನೆಂಬೊಡೆ
ಕುಪಿತನಾತನು ಶಾಂತನೀತನು
ಚಪಳಕಾಮವಿರೊಧಿಯಾದೊಡೆಯರ್ಧನಾರೀಶ
ಉಪವಿಸುವೊಡೀ ಮಹಿಮನಾದೊಡೆ
ವಿಪುಳತರ ನಿರ್ಲೇಪನೀತ[೫]ನು[೫]
ಕಪಿಲಿಸಿದ್ಧಮಲೇಶನಹನೆನುತಿರ್ದ ರಾಮಯ್ಯ ‖ ೩೬ ‖

ಕುಱುಗಳಾದೊಡೆ ಸಲಹಿದೊಡೆಯನ
ನಱಿದು ಬೆಂಬಿಡವರರೆ ಶಿವ ಶಿವ
ಕುಱುಗಳಿಂ[೬]ದಾ ಕಷ್ಟ[೬]ನಲ್ಲಾ ಎನ್ನ ರಕ್ಷಿಸುವ
ಎಱೆಯನ್ನೈತರಲೆನ್ನ ಮ[೭]ದ[೭]ದಲಿ
ಮಱೆದೆನೆನುತೊಳಗೊಳಗೆ ಮನದಲಿ
ಮಱುಗುತಲ್ಲಮನೆಡೆಗೆ ಬಂದನು ಸಿದ್ಧರಾಮಯ್ಯ ‖ ೩೭ ‖

ತ್ರಾಹಿ ಕರುಣಾಕರನೆ ಸರ್ವ
ದ್ರೋಹವೆನ್ನದು ನಿನ್ನನಱಿಯದೆ
ಮೋಹ-ಮಾಯಾಡಂಬರಕೆ [೮]ಮರುಳಾದೆ[೮]ನಿನ್ನೆಬರ
ಊಹೆಗೇಡುಗನವಗುಣದ ಸಂ
ದೋಹವನು ನೀ ಮಱೆದು ಕರುಣಿಸ
ಬೇಹುದೆನುತಾ ರಾಮನಲ್ಲಮನಂಘ್ರಿಗೆಱಗಿದನು ‖ ೩೮ ‖

೧. ವಿ (ಗ.) ೨. ಕೆ (ಗ.) ೩. ಯಾ (ಜ.) ೪. ಬೆಱಗಾಗುತಿರ್ದನು ಸಿದ್ಧರಾಮಯ್ಯ (ಇ.) ೫ ನೆ(ಅ, ಉ, ಖ, ಚ.) ೬. ದ ಕನಿಷ್ಠ (ಇ.) ೭. ಸ (ಅ.) ೮. ಸಿಕ್ಕಿರ್ದ (ಇ.)

ಮನದೊಳಗೆ ನಸುನಗುತಲೀ ಮೂ
ರ್ಖನ ಗುಣಂಗಳನೇನ ನೋಡುವೆ
ನೆನುತಲಲ್ಲಮ ಸರ್ವಜೀವ[೧]ದಯಾ[೧]ಪ್ರದಾಯಕನು
ತನುಜ ಸಾಕೇಳೇಳು ಖಾತಿಯು
ನೆನಹು ನಮ್ಮೊಳಗಿಲ್ಲವೆನುತಲಿ
ವಿನಯದಿಂದೆತ್ತಿದನು ರಾಮನ ವಿಮಲಮಸ್ತಕವ ॥ ೩೯ ॥

ದೇವ ನೀನೀ ಪರಿಯ ಜಂಗಮ
ಭಾವಭಣಿತೆಯ ಧರಿಸಿ ಬಂದೊಡೆ
ಗಾವಿಲರು ನಾವೆತ್ತ ಬಲ್ಲೆವು ನಿಮ್ಮ ಮಹಿಮೆಯನು
ಜಾವಳಿಗ ನೀನೆಂದು ಬಗೆದಕ
ಟಾವು ಬಳಲಿದೆವಿನ್ನು ಕರುಣಿಸಿ
ಕಾವುದೆನುತ[೨]ಲಿ ಸಿದ್ಧರಾಮನು ನುಡಿದ[೩]ನಲ್ಲಮಗೆ[೪] ॥ ೪೦ ॥

ಹರಸಿಕೊಳ್ಳದೆ ಕೆಲರು ಸಚರಾ
ಚರರಿಗೊಳ್ಳಿತ ಪಕ್ಷಪಾತದಿ
ಹರಸಿ ಗೋ-ಬ್ರಾಹ್ಮರಿಗೆ ಶಾಂತಿಗಳಾಗಲೆಂ[೫]ಬಂತೆ[೫]
ಹಿರಿಯರನು ಸತ್ಕರಿಸಿ ಮಿಕ್ಕಾ
ದರನು ಧಿಕ್ಕರಿಸುವುದು ಯೋಗೀ
ಶ್ವರರಿಗನುಚಿತವೆಂಬರ್ಥ ರಾಮಯ್ಯ ಕೇಳೆಂದ ॥ ೪೧ ॥

ಚಿತ್ತವಿಸು ಗುರುರಾಯ ನಮ್ಮಯ
ಚಿತ್ತದೊಳಗಿನ್ನೊ ವಿಚಾರಿಸ
ಲುತ್ತಮಾಧಮಪಕ್ಷಪಾತಭ್ರಮೆಗಳಿಡಿದಿಹುವು
ಎತ್ತ ಬಲ್ಲೆವು ಸರ್ವರನು ಸಮ
ಚಿತ್ತದಲಿ ಕಾಂಬಜೀವ[೬]ನೀನೊಲಿ
ದಿತ್ತೊಡೆಮಗಿನ್ನಾದೊಡಾಗಲಿ ದೇವ ಕೇ[೬]ಳೆಂದ ॥ ೪೨ ॥

೧. ಸುಖ (ಗ.) ೨-೪. ಲ್ಲಿಮಗೆ ಬಿನ್ನೈಸಿದನು ರಾಮಯ್ಯ (ಅ.); ಲಿ ಮತ್ತೆ ಮೆಯ್ಯಿಕ್ಕಿದನು ರಾಮಯ್ಯ (ಗ.) ೩-೪. ನುಚಿತವನು (ಬ.) ೫. ದೆಂಬ (ಇ.) ೬. ನಮಗಿನ್ನಿತ್ತರಾಗಲಿ ನೀನೊಲಿಯು ಪ್ರಭುರಾಯ ಹೇ (ಜ.)

ಆಗಲದಕೇನೊಂದು ಬಾ[೧]ರಿಯ
ಲಾಗುವುದೆ ಸಮಬುದ್ಧಿ[೧] ಮೆಲ್ಲನೆ
ಲಾಗಿಸುವುದಿರುತಿರುತ[೨]ಲೀ ಪರಿ[೨] ಚಿತ್ತ[೩]ಶುದ್ಧಿ[೩]ಯಲಿ
ಯೋಗಮಾರ್ಗವನಱು[೪]ವೊಡಖಿ[೪]ಳನಿ
ಯೋಗಿಯಾದೊಡೆ ಬಳಿಕಲಾತಗೆ
ಬೇಗ ಸಮತೆ-ಸಮಾಧಿಯಹುದೈ ರಾಮ ಕೇಳೆಂದ || ೪೩ ||

ಎನಗೆ ನಿಮ್ಮಯ [೫]ದರ್ಶನ-ಸ್ಪ
ರ್ಶನವೆ ಸರ್ವಸಮಾಧಿ[೫]ಯೆನಗಾ[೬]
ಮನುಮು[೭]ನಿತ್ರಿದಶರುಗಳಿದಿರೇ[೭] ದೇವ ಕೇ[೮]ಳಿನ್ನು[೯]
ಮನವೊಲಿದು ನೀವಿನ್ನು ಮಲಿಕಾ
ರ್ಜುನನ ನೋಡಲು ಬಿಜಯಮಾಡುವು
ದೆನುತೆ ತನ್ನಯ ಮಠಕೆ ಕರೆದನು ರಾಮನಲ್ಲಮನ || ೪೪ ||

ಬಿಡು ಮರುಳೆ ಮನೆಯೇನು ಮಠವೇ
ನಡವಿಯೇನೂರೇನು ಬೇಱೊಂ
ದೆಡೆಗಳುಂಟೇ ಸರ್ವಗತನಾದಾ ಮಹಾತ್ಮಂಗೆ
[೧೦]ನುಡಿದುದೇ ಶಿವತತ್ವ[೧೧]ದಾ[೧೧]ಗಮ
ನಡೆದುದೇ ಶಿವಮಾರ್ಗ[೧೦]ಶರಣರ
[೧೨]ಬೆಡಗು[೧೨] ತಾನೀ ಪರಿ ಕಣಾ ರಾಮಯ್ಯ ಕೇಳೆಂದ || ೪೫ ||

೧. ರಿಂ। ಗಾಗಲಹುದೇ ಸಮತೆ (ಇ.) ೨. ಬಲುಹಿನ (ಇ.) ೩. ವೃತ್ತಿ (ಗ.) ೪. ದು ಸಕ (ಇ.) ೫. ದರುಶನವು ನೆ।ಟ್ಟನೆ ದೊರಕಿದುದರಿಂದ ನಿರ್ಮಲ।ಘನ ಸಮಾಧಿ ಸಮಸ್ತ ದೊರಕುವುದಾವ ಸೋಜಿಗವು (ಗ.) ೬. ಯೆಂಬುದು (ಇ.) ೭. ನೀಂದ್ರಾದಿಗಳು ಸರಿಯೇ (ಇ.) ೮-೯. ಳೈಸೆ (ಇ.) ೧೦. ನಡೆವುದೇ ಶಿವ ಮಾರ್ಗವಾತನು।ನುಡಿವುದೇ ಶಿವಮಂತ್ರ (ಜ.) ೧೧. ವಾ (ಕ,ಗ.) ೧೨ ತೊಡಕು (ಮು,ಐ.)

ಅಹುದು ನಿಮ್ಮಯ ಚಿತ್ತ ಬಂದ
ಲ್ಲಿಹುದು ನಾವದನೇನ ಬಲ್ಲೆವು
ಸಹಜವಾದೊಡೆ ಸರ್ವತೋಮುಖ[1]ಶರಣರನುಮತವ[1]
ವಿಹಿತವೆಮಗಿನ್ನೇನು ಗತಿ ಘನ
ಮಹಿಮ ಕರುಣಿಸೆನುತ್ತೆ ಕಿಂಕಲ
ಸಹಿತ ಬಿನ್ನಹಮಾಡುತಿರ್ದನು ರಾಮನಲ್ಲಮಗೆ ॥ ೪೬ ॥

ಚಿತ್ತದಲಿ ಪರಿಪಾಕವಾದ ಮ
ಹೋತ್ತಮಂಗಲ್ಲದೆ ನಿರರ್ಥಕ
ಬಿತ್ತಲಾಗದು ತತ್ವಬೀಜವ ಬಹ್ವಭವಿಗ[2]ಳಲಿ[2]
ಹೊತ್ತು ಹೋಗದೆ ಗೋಷ್ಠಿಮಾಡುವ
ಕೃತ್ಯವಲ್ಲಿದು ಸಕಲಸಂಗನಿ
ವೃತ್ತನಾದಂಗಲ್ಲದಾಗದು ರಾಮ ಕೇಳೆಂದ ॥ ೪೭ ॥

ಹಲವು ಬಿನ್ನಹಕಂಜುವೆನು ಕೋ
ಟಲೆಗೆ ನಾನಿನ್ನಾಱೆ ಕರ್ಮದ
ಕಳವಳಕೆ ಬೇಸತ್ತೆ ಖ[3]ಂಡಜ್ಞಾನಮಾರ್ಗದಲಿ
ಹೊಲಬುಗೆಟ್ಟೆನು ನಿನ್ನ ಪಾದದ
ನೆಲೆಯ ಕಾ[4]ಣದೆ[4] ದೇವ ನೀನೇ
ಸಲಹೆನುತಲಲ್ಲಮಗೆ ಮೆಯ್ಯಿಕ್ಕಿದನು ರಾಮಯ್ಯ ॥ ೪೮ ॥

ಮತ್ತೆ ಕರುಣಿಸಿ ಹೆಱೆನೊಸಲ ಹಿಡಿ
ದೆತ್ತಿ ಬಾರೆಂದೆನುತೆ ತನ್ನಯ
ಪತ್ತಿರಕೆ ಕರೆದಾತನನು ಕೈವಿಡಿದು ಕುಳ್ಳಿರಿಸಿ
ಹೆತ್ತ ತಂದೆಯದಾವ ಪರಿಯಲಿ
ಪುತ್ರನನು ಬೋಳೈಸುವಂತಿರೆ
ನಿತ್ಯನಲ್ಲಮ ಸಿದ್ಧರಾಮನನೊಲಿದು ಮನ್ನಿಸಿದ ॥ ೪೯ ॥

೧. ರಾಮ ಶರಣರನು (ಜ.) ೨. ಳಿಗೆ (ಅ, ಗ, ಜ.) ೩. ಕ (ಇ, ಉ, ಖ.) ೪. ಣಿಸಿ (ಉ.); ಣೆಸು (ಚ.)

ಲಕ್ಷಿಸುವೊಡೆಂಬತ್ತುನಾಲುಕು
ಕ್ಷದೇಹಿಗಳೊಳಗೆ ಮಾನವ
ಕ್ಷದೇಹಿಯೆ ಸಕಲಕರ್ಮಕೆ ಕರ್ತನಾಗಿಹನು
ೋಕ್ಷಸಾಧಕರಾದವರುಗಳು
ೇಕ್ಷಿಸದೆ ಸರ್ವೇಂದ್ರಿಯಂಗಳ
ಕ್ಷಿಸಲು ಸುಖಿಯಪ್ಪರೈ ರಾಮಯ್ಯ ಕೇಳೆಂದ || ೫೦ ||

ಇಂದ್ರಿಯಂಗಳನಾವ ಪರಿಯಲಿ
ಂಧಿಸುವ ೧ತೆರ೧ ಮೊಲನ ಕಂಡೊಡೆ
ಂದುದುಂಟೇ ನಾಯಿಗಳು ದಿಟವಾ ಪ್ರಕಾರದಲಿ
ುಂದುವರಿವುವು ವಿಷಯದಿಚ್ಛೆಗೆ
ೊಂದು ಕೂಗುವವತಿಮಹಾಬಳ
ಂದ್ರಿಯಕೆ ನಾನೇಗುವೆನು ಗುರುರಾಯ ಹೇಳೆಂದ || ೫೧ ||

ಊಹಿಸುವೊಡಿಂದ್ರಿಯಕೆ ಮನವೇ
ೇಹ ನಾಯಕನದಱ ಗಮಕದ
ಾಹು ಶಬ್ದ ಸ್ಪರ್ಶ ರೂಪು ರಸ ಪ್ರಗಂಧದಲಿ
ೋಹದಂತಿರೆ ಸೆಳೆದು ಸಮತೆಯ
ಾಹಸದಲಿರದಿಂದ್ರಿಯಂಗಳ
ಾಹುರಂಗಳು ಕೆಡುವುವೈ ರಾಮಯ್ಯ ಕೇಳೆಂದ || ೫೨ ||

ಮನದ ಹರವರಿ ಹೊನ್ನ ಮಣ್ಣಿನ
ನಿತೆಯರ ಮೇಲಿರದೆ ಸದ್ವ
ರ್ತನೆಯಲಿರ್ದೊಡೆ ದೋಷವೇನವಱಿಂದೆ ಯತಿಯಾಗಿ
ನಕೆ ಬೇಡಿದನಿತ್ತು ಸುಖದಲಿ
ನದ ಪುಣ್ಯವನಾರ್ಜಿಸಿರ್ದೊಡೆ
ನಗೆ ನಿಜ೨ಪದ೨ವಾಗದೇ ಗುರುರಾಯ ಹೇಳೆಂದ || ೫೩ ||

. ಪರಿ (ಅ, ಕ, ಗ.); ಬಗೆ (ಉ.) ೨. ಸುಖ (ಅ, ಕ.)

. ಲಿ. ೯. ಆ

ಖ್ಯಾತಿ–ಪೂಜಾ–ಲಾಭ[೧]ದಾಶಾ[೧]
ಪ್ರೀತಿಯಿಂದಲಿ ದಾನ ಧರ್ಮ
ವ್ರಾತವನು ಮಾಡಿದಡೆ ಬಿತ್ತಿದ ಬೆಳೆಯನುಂಬಂತೆ
ಆತು ಬಂದ ಸಮಸ್ತಭೋಗವ
ನೋತು ಭೋಗಿಸುತಿಪ್ಪನಲ್ಲದೆ
ಮಾತ ಮಾತಿಗೆ [೨]ನಿತ್ಯವು[೨]ಂಟೇ ರಾಮ ಕೇಳೆಂದ || ೫೪ ||

ತೊಱೆದು ಸತಿಸುತಮಾತೆಪಿತರುಗ
ಳೆಱಕವನು ಯತಿಯಾಗಿ ಸುಖದಲಿ
ಕೆಱೆಗ[೩]ಳಾರವೆ[೩] ಬಾವಿ ದೇಗುಲಗಳನು ರಚಿಸಿದರೆ
ಅಱಿಯಬಾರದು ಕಂಡ ಬಳಿಕಿ
ನ್ನಱಿವ ಪರಿಯೆಂತಯ್ಯ ನಿಜವನು
ಬಱಿದೆ ಬಣ್ಣಿಸ ಬೇಡವೈ ಗುರುರಾಯ ಹೇಳೆಂದ || ೫೫ ||

ಕಾರಣಿಕವೇ ಮನಸು ಮನ[೪]ಸೇ[೪]
ಬೇ[೫]ರು ಬಿಟ್ಟೆ[೫]ಹುದನ್ಯ[೬]ಕರ್ಮ[೬]ದ
ಕಾರಿಯಂಗಳಲಂತರಂಗವೆ ಹಾಳುಬಿದ್ದಿಹುದು
ಆರು ಬಲ್ಲರು [೭]ಬಳಿಕ[೭] [೮]ಸುಖ[೮]ವನು
ಮಾರಿ ಮುಂಡಿಸಿಯವರ ತನುವನು
ಹೀರಿ ಹಿಪ್ಪೆಯ ಮಾಡದಿ[೯]ಹಳೇ[೯] ರಾಮ ಕೇಳೆಂದ || ೫೬ ||

ಆದೊಡಿನ್ನಾ ಸಾವು ತಪ್ಪುವ
ಭೇದವಾವುದು ಮುಕ್ತಿಮಾರ್ಗದ
ಹಾದಿಯಾವುದು ನಿತ್ಯನಹ ಪರಿಯಾವುದೈ ಗುರುವೇ
ವಾದವೇತಕೆ ನಮಗೆ ನಿಮ್ಮಯ
ಪಾದ ಶರಣೆನಬಲ್ಲೆವಲ್ಲದೆ
ಬೋಧಿಸುವುದೆನಗೆನುತಲಿರ್ದನು ಸಿದ್ಧರಾಮಯ್ಯ || ೫೭ ||

೧. ಖ್ಯಾತಿ ಸು (ಇ,ಗ.); ಪಲಿ ಸಂ (ಉ.); ದಾ ಸಂ (ಬ,ಖ.) ೨. ತತ್ತ್ವವ (ಉ.); ಮುಕ್ತಿ... (ಖ,ಮ.) ೩. ಆರವೆ (ಇ.) ೪. ಸಿಗೆ (ಖ,ಗ,ಜ.) ೫. ರೆ ತೆಗಾಜು (ಉ.) ೬. ಮಾರ್ಗ (ಇ,ಮ.) ೭. ನಿತ್ಯ (ಉ.) ೮. ಲಸು (ಇ,ಮ.) ೯. ಹುಸೀ (ಗ.)

ಹಸನಮಾಡಿಯೆ ಹರಗಿ [೧]ಹೊಲನಲಿ[೧]
ಕಸವ ಬಿತ್ತುವ ಮರುಳನಂತಿರೆ
ಮಿಸುಗುವಂತರ್ಮಾರ್ಗದೋಜೆಗೆ ಬಂದ ತನುಮನವ
ಕಿಸುಕುಳದ ಬಹಿರಂಗದಿಚ್ಛೆಯ
ಬೆಸನದಲಿ ಬೇಯಿಸದೆ ನಿನ್ನಯ
ವಸವ ಮಾಡುಲು ನೀನೆ [೨]ಸುಖಿಯೈ[೨] ರಾಮ ಕೇಳೆಂದ ॥ ೫೮ ॥

ಆವನಾದೊಡೆಯಂತರಂಗದ
ಭಾವದಲಿ ಬಗೆವುಗಲು ಬಹುವೈ
ಜೀವಸಂಗಳು ಮೊದಲಲವನೆಂತಾನು ತಪ್ಪಿದೊಡೆ
ದೇವತಾಭೋಗಾದಿಗಳು ಸಂ
ಭಾವಿಸುವುವವ[೩]ಕೊಲಿ[೩]ದು ಸಿಕ್ಕದ
ದೀವಸಿಯೆ ಸುಖಿಯಪ್ಪನೈ ರಾಮಯ್ಯ ಕೇಳೆಂದ ॥ ೫೯ ॥

ಶಕ್ರನಹನಜನಹನು ತತ್ತಡೆ
ಚಕ್ರಿಯಹನನುಭಾವ[೪]ಭರ[೪]ದಲಿ
ನಕ್ರಕೇತನವೈರಿಯಹ ಭಾಳಾಕ್ಷ ತಾನಹನು
ಈ ಕ್ರಮಂಗಳಿವೆಲ್ಲ ಮುಕ್ತಿಗೆ
ವಕ್ರವಾಗಿಹುವಿವನು ಬಗೆಯದ
ವಿಕ್ರಮನೆ ಸುಖಿಯಪ್ಪನೈ ರಾಮಯ್ಯ ಕೇಳೆಂದ ॥ ೬೦ ॥

ಕೀ[೫]ಳುಮಾಂಸದ ಸವಿಗೆ ಗಂಟಲ
ಗಾಳವನು [೬]ಮಿಗೆ[೬] ಕಚ್ಚಿ ದುಷ್ಟನ
ದಾಳಿಗೊಳಗಹ ಮೀನಿನಂ[೭]ತಿರೆ[೭] ವಿಷಯಸುಖಗಳಿಗೆ
ಲೋಲರಾದರು ಹರಿ[೮]ಹರ[೮]ರಬ್ರ
ಹ್ಮಾಳಿಗಳು ಮೊದಲಾಗಿ ಕಾಲನ
[೯]ಕಾಳ[೧೦]ಬಾಯಿಗೆ[೧೦] ಬೀಳ್ವ[೯]ರೈ ರಾಮಯ್ಯ ಕೇಳೆಂದ ॥ ೬೧ ॥

೧. ದಿಳಿಯೊಳು (ಬ.) ೨. ನಿತ್ಯನು (ಇ,ಮ.) ೩. ಸವಿ (ಅ,ಕ,ಜ.) ೪. ಮುಖ (ಜ,ಮ.) ೫. ಕೇ (ಅ,ಗ,ಜ. (೬. ಸೆಜ್ಜೆ (ಉ.) ೭. ಪಟಿ (ಜ.) ೮. ಸು (ಇ, ಉ,ಜ.) ೯. ನಾಲಗೆಯ ತುತ್ತಾಪ (ಗ.) ೧೦. ಬಾಘೆಯು (ಜ.); ಬಾಗಿಲಿ (ಉ,ಕ.)

ದೇಹಿಗೊಳಹೊಱಗೆಂಬ ನೆಲೆಯಲಿ
ಬಾಹಿರಂಗವೆ ಸಕಲಮಾಯಾ
ಮೋಹದಿಂದಿಹುದಂತರಂಗವೆ ನಿಷ್ಪ್ರಪಂಚಿನಲಿ
ಬೇಗಿಹುದಾ[1]ಗಿಹುದಂತುಕಾರಣ
ಸಾಹಸಿಗತನದಿಂದಲಾ ನಿ
ರ್ಮೋಹದಲಿ ನಿಲುವವನೆ ನಿತ್ಯನು ರಾಮ ಕೇಳೆಂದ ॥ ೬೨ ॥

ಒಳಗು ಹೊಱಗೆಂಬೆರಡು ಬಟ್ಟೆಗ
ಳೊಳಗೆ ನೀತಿ ಪ್ರೀತಿ ಮಾರ್ಗಗ
ಳೊಳವು ತಾವೆರಡೆರಡು ಪಥದಲಿ ಕವಲುವಟ್ಟೆಗಳು
ತಿಳಿವೊಡವಱೊಳು ಮಧ್ಯಮಾರ್ಗದ
ಬಳಿವಿಡಿವ ಬಗೆಯುಳ್ಳೊಡಾತನೆ
ನೆಲೆಯ ಕಾಂಬನು ನಿತ್ಯನಪ್ಪನು ರಾಮ ಕೇಳೆಂದ ॥ ೬೩ ॥

ವಿಷವ ಹೊಱಮೈಗಿಕ್ಕಿದೊಡೆ ವ
ರ್ಜಿಸಲು ಬಹುದೆಂತಾದೊಡೆಯು ತ
ದ್ವಿಷವನೊಳಮೈಗಿಕ್ಕಿದೊಡೆ ಬಳಿಕಾರು [2]ಕಾವ[2]ವರು
ವಿಷಯವಂತರ್ಮಾರ್ಗದಲಿ ಮೋ
ಹಿಸಿ[3]ದನಾ[3]ದೊಡೆ ಬಳಿಕಲಾತನ
ಘಸಣಿ ದುಃಖವನೀವುದೈ ರಾಮಯ್ಯ ಕೇಳೆಂದ ॥ ೬೪ ॥

ಸಿದ್ಧಸಾಧಕರುಗಳನೇಕರು
ಬಿದ್ದು ಸಿಕ್ಕಿದರಂತರಂಗದ
ಹೊದ್ದಿಗೆಯಲಿದಿರಿಟ್ಟು ತೋಱುವ ಸುಖದುಃಖಂಗಳಲಿ
ಬುದ್ಧಿವಂತನದಾವವನು ಹೊಗ
ದಿರ್ದನಾದೊಡೆ ಬಳಿಕ ಬಗೆವೊಡೆ
ಸಿದ್ಧನೆನಿಸುವನಾತನೈ ರಾಮಯ್ಯ ಕೇಳೆಂದ ॥ ೬೫ ॥

೧. ಹರಾ (ಇ.) ೨. ಕಳೆವ (ಒ, ಕ.); ಬದುಕು (ಖ, ಜ.) ೩. ದುವಾ (ಏ.)

ಆನೆ ಕೆಸಱೊಳಗದ್ದಿ ಬಿದ್ದೊಡೆ
ತಾನೆ ತನ್ನಯೆ ಭುಜಬಲದ ಸುಯಿ
ದಾನದಿಂದೊದೆದೇಳ್ವುದಲ್ಲದೆ ಯಾರು ನೆಗಹುವರು
ನೀನೆ ತಪ್ಪಿದ ನಿನ್ನ ನಿಜವನು
ನೀನೆ ಸಾಧಿಸಿ [1]ಕಂಡೆ[1]ಯಾದೊಡೆ
ನೀನೆ ಸದ್ಯೋನ್ಮುಕ್ತನೈ ರಾಮಯ್ಯ ಕೇಳೆಂದ || ೬೭ ||

ರಾಯನಾರೋಗಿಸುವ ಸುಧೆಯನು
ನಾಯಿಗಿಕ್ಕದೆ ನಿನ್ನ ಚಿತ್ತೋ
ಪಾಯವನು ಕೇಡುಳ್ಳ ಕರ್ಮದ ಕೋಟಿಕೋಟಲೆಗೆ
ಬೀಯಮಾಡದೆಯಾತ್ಮಲಿಂಗದ
ಬಾಯಲರ್ಪಿಸ[2]ಲಾಪೆ[2]ಯಾದೊಡೆ
ಮಾಯೆಯನು ನೀ ಗೆಲುವೆಯೈ ರಾಮಯ್ಯ ಕೇಳೆಂದ




ಕರಣಗಳು ಕೈಗೂಡಿಪಾಗಳೆ
ಮರಣವನು ಗೆಲ ಕಲಿತು ಸಂತತ
ಶರಣಪದದಲಿ ನಿಂದು ಪರಮಾನಂದ ಸುಖದಿಂದೆ
ಪರಿಣಮಿಸಿ ನಿರ್ಲೇಪನಾಗಿರು
ತಿರಲು ಬಲ್ಲೊಡೆ ಬಳಿಕ ನೀನೇ
ಪರಮನಪ್ಪುದು ತಪ್ಪದೈ ರಾಮಯ್ಯ ಕೇಳೆಂದ

ಹಲವು ಮುಖದಲಿ ಹರಿವ [3]ಮನವನು[3]
ನಿಲಿಸುವುದು ಲಿಂಗದಲಿ ಲಿಂಗದ
ಸೊಲಬ ತಿಳಿದಾ ಪ್ರಾಣಲಿಂಗವನಱಿದು ಚೆನ್ನಾಗಿ
ತಿಳಿದು ತೃಪ್ತಿಸ್ಥಾನದಲಿ ನಿ
ರ್ಮಳದ ಜ್ಯೋತಿರ್ಲಿಂಗವನು ನೆಲೆ
ಗೊಳಿಸ [4]ಕಲಿತೊಡೆ[4] ನೀನೆ [5]ಸುಖಿಯೈ[5] ರಾಮ ಕೇಳೆಂದ || ೬೯ ||

೧. ಕೊಂಡೆ (ಉ.); ತಿಳಿದೆ (ಐ.) ೨. ಬಲ್ಲೆ (ಜ.) ೩. ಬುದ್ಧಿಯು (ಉ, ಐ, ಕ, ಗ, ಚ.) ೪. ಬಲ್ಲರೆ (ಅ.) ೫. ನಿತ್ಯನು (ಇ.)

ಕಾಗುದುರೆಗತ್ಯಂತ ಶಿಕ್ಷೆಗ
ಳಾಗಬೇಕಲ್ಲದೆ ವಿಚಾರಿಸ
ಲಾ ಗರುವ ಜಾತ್ಯಶ್ವಗೊಂದೇ ರಾಯ ರಾವುತನ
ರಾಘೆ-ವಾಘೆಯೆ ಸಾಲದೇ ಸಬು
ದಾಗಮಂಗಳ ಶಿಕ್ಷೆ ನಿನಗಿ
ನ್ನೇಗುವುವು ಸಂಸ್ಕಾರಿ ನೀನೇ ರಾಮ ಕೇಳೆಂದ || ೨೦ ||

ಎಂದು ಬಳಿಕೇಕಾಂತದಲಿ ಮುದ
ದಿಂದಲೊಪ್ಪುವ ಕಾಯಕರಣದ
ಸಂದು-ಸಂಬಂಧವನು ಸೂಚಿಸಿ ಜೀವಪರಮರನು
ಒಂದು ಮಾಡುವ ಶಕ್ತಿಭಕ್ತಿಯ
ಹೊಂದಿಕೆಯನುಪದೇಶ ಮಾಡಿದ
ನಂದು ಕರುಣದೊಳಲ್ಲಮಪ್ರಭು ಸಿದ್ಧರಾಮಂಗೆ || ೨೧ ||

ತಿಳಿದುದಾಗಳೆ ಬಳಿಕ ಹೃದಯ
ಸ್ಥಳದ [೧]ಮತಿಮಾನಸಸರೋವರ[೧]
ಹೊಳೆದುದಾಗಳೆ ಪರಮ[೨]ಹಂಸನ[೨] ನೆಳಲು ನೆಲೆಗೊಂಡು
ತಳಿತ ನವಚಕ್ರಾಂಬುಜಂಗಳ
ಕುಳವನರಿದನು ಮನದ ಸಂಶಯ
ವಳಿಯಿತಲ್ಲಮಲಿಂಗನೊ[೩]ಲಿದೊಡೆ[೩] ಸಿದ್ಧರಾಮಂಗೆ || ೨೨ ||

ಗುರುವೆ ನಿನ್ನಯೆ ಚಾರುಚರಣಾಂ
ಬುರುಹಮಕರಂದದಲಿ ಮಿಗೆ ಮಧು
ಕರನ ಪರಿ ನಾನಾದ ಕಾರಣವೆನ್ನ ಭವತಿಮಿರ
ಹ[೪]ರಿವ[೪] ದಿವ್ಯಜ್ಞಾನದೀಪಾಂ
ಕುರುವನರಿದೆನು ನಿನ್ನ ಕೃಪೆಯಲಿ
ಪರಮಪಾವನನಾದೆನೈ ಪ್ರಭುರಾಯ ಕೇಳೆಂದ || ೨೩ ||

೧. ಮುಳ ಸುಮನಸ್ಸರೋಜವು (ಇ.) ೨. ಪುರುಷನ (ಇ.) ೩. ಲವಿಂ (ಇ.)
೪. ರನ (ಉ.)

ಎತ್ತ ಹೋದುದೊ ಸಿದ್ಧರಾಮನ
ಮತ್ತತನವಾ ಬಾಹಿರಂಗದ
ಕೃತ್ಯದಲ್ಲಿಹ ಮೋಹ-ಕೀರ್ತಿಯ ಮೇಲಣಭಿಲಾಷೆ
ಕಿತ್ತು ಕೆಡೆದುವು ಸಕಲಭಾವನೆ
ಚಿತ್ತ (ಚಿತ್ತುವನ)[1] ಪ್ಪುತಿರ್ದುದು
ತತ್ತ್ವಡುತ್ತಮಸಂಗವೀಯದೆ ಸುಖವನಿಖಿಳರಿಗೆ || ೭೪ ||

ಶುದ್ಧರಾಗದರಾರು ಸಮತೆಯ
ಶ್ರದ್ಧೆಯಾಗದರಾರು ನಿರುಪಮ
ಸಿದ್ಧಿಯಾಗದರಾರು ನಿತ್ಯವ ಪಡೆಯದವರಾರು
ಸಿದ್ಧರಾಗದರಾರು ಸೌಖ್ಯಸ
ಮೃದ್ಧಿಯಾಗದರಾರು ಪರಮಾ
ರಾಧ್ಯರೆನ್ನಯ ಗುರುಗುಹೇಶ್ವರಲಿಂಗಲೀಲೆಯಲಿ || ೭೫ ||

**ಅಂತು ಗತಿ ೧೩ಕ್ಕಂ ಪದ ೬೧೨ಕ್ಕಂ ಮಂಗಳಂ**

೧. ಚೇತನವ (ಉ.)

# ೧೪ ಪ್ರಭುದೇವರು ಕಲ್ಯಾಣಕ್ಕೆ ಬಂದ ಗತಿ

**ಸೂಚನೆ:**

ಬಸವವೊಪ್ಪ[1]ಲಾಗಿರ್ದ[1] ಭಕ್ತರ
ನಸಮುನಲ್ಲಮ ಬಂದು ಕಂಡನು
ವಸುಮತಿಗೆ ಚೆಲುವಾದ ವರಕಲ್ಯಾಣಪುರದೊಳಗೆ

ಶರಣರೆಲ್ಲರು ಕೇಳುವುದು ಸತ್
ಕರಿಸಿ ಮುಂದಣ ಸಂಗತಿಯ ಸಡ
ಗರಣೆಯನು ಸಲೆ ಸಿದ್ಧರಾಮನ ಬೋಧಿಸಿದ ಬಳಿಕ
ಗುರು ಗುಹೇಶ್ವರನೊಲಿದು ಭಕ್ತರಿ
ಗೊರೆದ ಶಿವಪಥದಾದಿ ಗತಿಯನು
ವರಮನೋಹರವೆನಿಸುವೀ ಪ್ರಭುಲಿಂಗಲೀಲೆಯಲಿ ॥ ೧ ॥

ಬಸವರಾಜನ ಚಾರುಚರಿತೆಯ
ಬಿಸಿಲಿಗಖಿಲರ ಮನದ ಭಕ್ತಿಯ
ಬಿಸರುಹಂಗಳು ವಿಕಸಿತವನೈದಿರಲು ತಾನಱಿದು
ವಸುಮತಿಗೆ ಕಲಿಕಾಲದೊಳಗಿದು
ಪೊಸತಲಾ ಎಂದೆನುತೆ ಸಂತೋ
ಷಿಸುತಲಿರ್ದನು ಗುರುಗುಹೇಶ್ವರಲಿಂಗ ಲೀಲೆಯಲಿ ॥ ೨ ॥

[2]ಕಾಡಲೇ[2]ಕಿನ್ನೆನ್ನ ಭಕ್ತರು
ಬೇಡಿದಿಷ್ಟಾರ್ಥಂಗಳುನು ಕೈ
ಗೂಡಿಸುವೆನೆಂದೆನುತೆ ಕರುಣರಸಾರ್ದ್ರಚಿತ್ತದಲಿ
ಹಾಡುತಾಡುತೆ ಸಿದ್ಧರಾಮನ
ಕೂಡಿಕೊಳುತಲಿ ಬಸವರಾಜನ
ನೋಡಲಿಕೆಯಲ್ಲಮನು ಸೊನ್ನಲಪುರವ ಹೊಱಪ್ಪೊಂಟ ॥ ೩ ॥

೧. ದಖಿಳ (ಉ.) ೨. ನೋಡಬೇ (ಜ.)

ಕೆಱೆ[೨] ಸರೋವರ ಬಾವಿ ಕಾಲುವೆ
ಯೊಱತೆ ಪೂಗಿಡು ತೋಟ ಕಿಕ್ಕಿಱಿ
ಗಿಱಿದ ಮಾದಲ ಮಾವು ನೇಱಿಲ ಹಲಸು ನಾರಂಗ
ಅಱವಟಿಗೆ ಛತ್ರಗಳು ಪಥದಲಿ
ತುಱುಗಿದುವು ಬಸವೇಶ ಮಾಡಿಸೆ
ಮೆಱೆದುವಾ ಕಾನನದ ಪಥಿಕರ ಡಗೆಯನಾಱಿಸುತೆ ॥ ೪ ॥

ಲೇಸೆ[೧]ನಿಸಿ[೧] ವಿಶ್ರಮಿಸುವರಿಗೆ ನಿ
ವಾಸ-ಗೇಹಗಳಲ್ಲಿಗಲ್ಲಿಗೆ
ಹಾಸುಗಳು ಹಲವಂದದುಪಚಾರದ ಪದಾರ್ಥಗಳು
ಭಾಸುರತೆಯೆನಿಸಿರ್ದುವಾ ಬಸ
ವೇಶ ಮಾಡಿಸಲಡವಿಯಲಿ ಸಂ
ತೋಷವನೆ ಸಲೆ ಬೀಱುತಿರ್ದುವು ಸಕಲಪಥಿಕರಿಗೆ ॥ ೫ ॥

ಕೂಡಿ ವಿಪಿನದ ಬಟ್ಟೆ ಸುಖವನೆ
ನೀಡುತಿರಲಾ ಸಿದ್ಧರಾಮನ
ಕೂಡೆ ಹೇಳುತಲಲ್ಲಮಪ್ರಭು ಲಿಂಗ[೩]ಲೀಲೆಯಲಿ[೩]
ನೋಡಿದನು ಕಣ್ತುಂಬಿ ಮಿಗೆ ಕೊಂ
ಡಾಡಿದನು ಬಾಯ್ತುಂಬಿ ಹರುಷವ
ಮಾಡಿದನು ಮನತುಂಬಿ ಬಸವನ ಧರ್ಮದುನ್ನತಿಗೆ ॥ ೬ ॥

ಬರುತ ಬರುತಲಿ ತನ್ನ ಪಾದ
ಸ್ಪರುಶನಕೆ ಸಯವಾದ ಸಚರಾ
ಚರ[೪]ರ[೪]ನೆಲ್ಲರ ಪಾವನವ ಮಾಡುತೆ ಮಹಾತ್ಮೆಯಲಿ
ಹರುಷದಿಂದಲಿ ಬಂದು ಕಂಡನು
ಪರಮಜಂಗಮಲಿಂಗವಾಗಿಯೆ
ಗುರು ಗುಹೇಶ್ವರನೊಲಿದು ಕಲ್ಯಾ[೫]ಣವನು [೬]ಕರುಣ[೬]ದಲಿ[೫] ॥ ೭ ॥

೧. ಸಲು (ಏ.) ೨. ತೋ (ಇ.) ೩. ನೈತರುತಂ (ಜ.) ೪. ವ (ಇ, ಕ, ಗ.) ೫. ಣಾಖ್ಯ ಪುರವರವ (ಗ.) ೬. ಹರುಷ (ಚ.)

ಎತ್ತ ನೋಡಿದೊಡತ್ತ ನಗರದ
ಸುತ್ತ ಹೊಱವಳಯುದಲಿ ಕಾಣಿಸಿ
ಕತ್ತಲಿಸುವ ಸಮಸ್ತ ಭೋಗಾರುಹದ ತರುಲತೆಯ
ಮುತ್ತಿ ಮೋಹಿಸಿ ಮಿಗೆ ವಿಳಾಸತೆ
ವೆತ್ತ ಶುಕ ಪಿಕ ಕೇಕಿ ಕೋಕದ
ಮೊತ್ತಗಳ ನಡೆ ನುಡಿಗಳುದ್ಯಾನವನು ಪ್ರಭು ಕಂಡ ॥ ೮ ॥

ಪುರದೊಳಗೆ ಚರಿಯಿಸುವಸಂಖ್ಯಾ
ತರ ಮಹೋನ್ನತಭಕ್ತಿರಸವಾ
ಪುರದೊಳಗೆ ನೆಗೆದುಕ್ಕಿ ವಿಸಟಂಬರಿದು ಚೆಲುವಾಗಿ
ಪುರದ ಹೊಱವಳಯುದಲಿ ಬಳಿಸಿತೊ
ಹಿರಿದು ಗಂಭೀರತೆ[1]ಯು ಲೆ[2]ನಲಾ[3]
[4]ಪರಿಖೆ ಕಲ್ಯಾಣದಲಿ[4] ಕಣ್ಗೆದಿರಾಯಿತಲ್ಲಮಗೆ ॥ ೯ ॥

ನ[5]ಲವಿನಲಿ ಗಿರಿರಾಜನತಿನಿ
ಶ್ಚಲದ ಶಿವಭಕ್ತರ ಚರಿತ್ರಂ
ಗಳ ವಿಳಾಸವ ಸುತ್ತ ನೋಡುವೆನೆಂದು ಮಂಡಳಿಸಿ
ನೆಲಸಿದನೊ ಪೇಳೆನಲು ಕೋಟೆಯು
ವಳಯು[6]ವರ್ತಿಸಿ[6] ಮೆಱೆದು ತೋಱುವ
ತೊಳ[7]ತೊಳಪ ಕಲ್ಯಾಣ ಕಣ್ಗೆದಿರಾಯಿತಲ್ಲಮಗೆ[7] ॥ ೧೦ ॥

ಬಸವಚಾಪದಗೆವಕ್ಕಿಗಲ್ಲಮ
ವೆಸರ ಘನ ನಿಜಕರುಣವರುಷವ
ನೊಸೆದು ಸುರಿದ[8]ಪ್ರದಲ್ಲಿ[8]ಯೊಕ್ಕುದನುಂಬೆವಾಸೆಸುತ್ತಿ
ಮುಸುಱಿದಮರರ ವರವಿಮಾನ
ಪ್ರಸರಗಳೊ ಪೇಳೆನಲು [9]ಗಗನದೊ[9]
ಳೆಸೆದುವಟ್ಟಳೆಯೋಳೆ ಕಲ್ಯಾಣದಲಿ ಚೆಲುವಾಗಿ ॥ ೧೧ ॥

೧-೨. ಯು ನೆ (ಇ,ಚ.) ೧-೩. ಯೆಸಲ್ಕಾ (ಅ,ಬ,ಮ.) ೪. ಸಿರಿಯುಗಳ ಕಲ್ಯಾಣ (ಜ.) ೫. ಒ (ಖ,ಜ.) ೬. ದಲು ತಾ (ಉ.) ೭. ಪ ಕಲ್ಯಾಣವನು ಪ್ರಭುರಾಮಯ್ಯಗಳು ಕಂಡು (ಜ.) ೮. ಗ್ಗದಲಿ (ಖ.) ೯. ವವಸಿಯೊ (ಅ,ಕ,ಜ,ಮ.)

ಹುಲಿಮುಖಂಗಳ ಮಂಕದಾರದ
ಹಲವು ನೆಲೆಯುಪ್ಪರಿಗೆಗಳ ಬಾ
ಗಿಲಗಳಂಗಡಿಬೀದಿಗಳ ಸಂಪದದ ಜನ[1]ಪದದ[1]
ಕಳಕಳದ ಕಲ್ಯಾಣಪಟ್ಟಣ
ದೊಳಗೆ ನೋಡುತೆ ಬಸವರಾಜನ
ನಿಳಯಕಲ್ಲಮಸಿದ್ಧರಾಮರು ಬಂದರೊಲವಿನಲಿ ‖ ೧೨ ‖

ಬಂದು ಮೆಲ್ಲನೆ ಬಸವರಾಜನ
ಮಂದಿರಕೆ ಚೆಲುವಾದ ಬಾಗಿಲ
ಮುಂದೆ ನಿಂದಿರಲಲ್ಲಮಪ್ರಭುಸಿದ್ಧರಾಮರನು
ಅ[2]ಂದು ಭಾವಿಸಿ ನೋಡಿಯಿವರೇ
ನಿಂದುಮೌಳಿಯ ಸಗುಣನಿರ್ಗುಣ
ದಂದವಿಗರೋ ಶಿವಶಿವಾ ಎನುತಿದ್ದುದಖಿಳಜನ ‖ ೧೩ ‖

ಹಡಪದಪ್ಪಣ್ಣಗಳು ಕಾಣುತೆ
ತಡೆದಿರದೆ ಹರಿತಂದು ಮಾಗಣ
ದೊಡನೆ ಶಿವಲಿಂಗಾರ್ಚನೆಯ ವಿರಚಿಸುವ ಕಾಲದಲಿ
ಮೃಡನ ದೃಶ್ಯಾದೃಶ್ಯರೂಪುಗ
ಳೊಡೆಯರಿಬ್ಬರು ಬಂದರೆನುತಲಿ
ಸಡಗರಿಸಿ ಬಿನ್ನೈಸುತಿರ್ದನು ಬಸವರಾಜಂಗೆ. ‖ ೧೪ ‖

[3]ಕರತಳ[3]ದೊಳಿಡಿಗೊಂಡು ಪೂಜಾ
ತುರ[4]ತೆಯಿ[4]ಂದಿರುತೊಲಿದು ತಾನೇ
ಚರವನಂಗೀಕರಿಸಿ ಬಂದೊಡೆ ಲೇಸು ಲೇಸೆನುತೆ
ಕರೆಯಿರೇ ಇನ್ನೊಳಯಕೆನ್ನೊಡೆ
ಯರನು ತಳುವೇಕೆನುತೆ ಬಸವನು
ಹರುಷದಿಂದಲಿ ಹಡಪದಪ್ಪಣ್ಣಂಗೆ ನೇಮಿಸಿದ ‖ ೧೫ ‖

೧. ಪಗಳ (ಜ.) ೨. ಬ (ಇ.) ೩. ತರತರ (ಕ.) ೪. ಕೆ ನಿ (ಚ, ಜ.)

ಬಸವರಾಜನು ಭಕ್ತಿಯಿಂದಲಿ
ಬೆಸಸಿದರೆಯಪ್ಪಣ್ಣನತಿಭರ
ವಸವಲೆಯ್ತಂದಲ್ಲಮಪ್ರಭು ಸಿದ್ಧರಾಮರಿಗೆ
ಒಸೆದು ಮಿಗೆ ಶರಣಾರ್ಥಿಯೆನುತವೆ
ಸಸಿನೆ ಸಮ್ಮುಖದಲ್ಲಿ ಕರಯುಗ
ಬಿಸರುಹಂಗಳ ಮುಗಿದು ಬಿನ್ನಹವಾಡಲನುಗೆಯ್ದು || ೧೬ ||

ದೇವ ಕರುಣಾಕರನೆ ಬಿಜಯಂ
ಗೆಯ್ವುದೊಳಕಡೆಗೆಂದೊಡೆಮಗೊಳ
ಗಾವ ತತ್ತವಸರವು ನಮಗೇಕರಸುಮನೆಗಳಲಿ
ಭಾವಿಸಲು ಸಂಚಾರವೆನುತಲಿ
ದೇವನಲ್ಲಮು ನುಡಿಯಲದ [೧]ತಂ
ದಾ[೧]ವರಿಸಿಯಪ್ಪಣ್ಣನಱುಹಿದ ಬಸವರಾಜಂಗೆ || ೧೭ ||

ಹರಹರಾ ನಾನಕಟ ಗರ್ವದ
ಗಿರಿಯನೇನಡರಿರ್ದೆನೋ ಮೇಣ್
ದುರಳತನವಲಿಯೆನ್ನ ನಡೆ ನುಡಿ ತಪ್ಪನಪ್ಪಿದುವೋ
ಗುರುವೆ ಕರುಣಿಸಿ ಬಂದು ಬಾರದೆ
ತರಹರಿಸಲೇಕೆನುತೆ ಚಿಂತಾ
ಶರ[೨]ಧಿಯೊಳಗ[೨]ದ್ದಿದನು ಕೇಳುತೆ ಬಸವ ಮನದೊಳಗೆ || ೧೮ ||

ತನಗೆ ತಾನೇ ಭಕ್ತರೆಲ್ಲರ
ಮನವ ನೋಡಿಹೆನೆಂದು ಕರುಣಿಸಿ
ಮನೆಯ ಬಾಗಿಲಿಗಾ ಮಹಾಘನಮಹಿಮನೈತರಲು
ಅನುವನಱಿಯದೆ ರಾಜಸದ ಹ
ಮ್ಮಿನಲಿ ಬಳಿಯಟ್ಟುವುದು ಬಸವಾ
ನಿನಗಿದುಚಿತವೆ ಎಂದನಾ ಮಡಿವಾಳ ಮಾಚಯ್ಯ || ೧೯ ||

೧. ಕಂ। ಡಾ (ಅ, ಕ, ಖ.); ನಂ। ದಾ (ಚ.) ೨. ಸಿಧಿಯಂಲ (ಬ, ಕ, ಚ.)

ಕಡಲನೀಸಾಡುವಗೆ ತಾಮಸ
ಪ[1]ಡರಿದಂತಾಯ್ತಕ್ಕಟಕ್ಕಟ[2]
ಮಡಿವಳಯ್ಯನ ಮಾತಹುದು ತಪ್ಪಿನ್ನದೆಂದೆನುತೆ
ನಡೆದು ಶಿವಗಣಸಹಿತವಲ್ಲಮ
ನಡಿಯೊಳತಿಭಯಭಕ್ತಿಯಲಿ ತ
ನ್ನೊಡಲನೀಡಾಡಿದನು ಭರದಲಿ ಬಸವದಂಡೇಶ ॥ ೨೦ ॥

ನಾನು ಮಱವೆಯ ಮರುಳು ಸಂತತ
ನೀನೆಯಱಿವಿನ ತಿರುಳು ತಿಳಿವೊಡೆ
ನಾನು ರಂಜಕನಖಿಳರಱಿಯಲು ನೀ ನಿರಂಜಕನು
ನಾನು ಭಾವಿಸೆ ಪಶು ವಿಚಾರಿಸೆ
ನೀನು ಪಶುಪತಿಯೆನ್ನ ತಪ್ಪನು
ನೀನೆ ತಿದ್ದುವುದೆನುತೆ ಮೈಯಿಕ್ಕಿದನು ಬಸವಣ್ಣ ॥ ೨೧ ॥

ಭ್ರಮಿಸಿದೆನು ನಾನೆನ್ನ ಮ[3]ದ[3]ವಲಿ
ಕ್ಷಮಿಸುವುದು ನೀ ನಿನ್ನ ಗುಣದಲಿ
ರಮಣರಾದವರೆನ್ನ ಕೊಱತೆಯ ನೋಡಬೇಡೆನುತೆ
ವಿಮಳಮತಿ ಭಯಭಕ್ತಿ[4]ಸಹಿತ[4]
ಲ್ಲಮನ ಪಾದಪಯೋಜದಲಿ ನೆಱೆ
ನಮಿಸುತಿರ್ದನು ಬಸವದಂಡಾಧೀಶನಡಿಗಡಿಗೆ ॥ ೨೨ ॥

ಶಿಶುಗಳಲಿ ಗುಣದೋಷವನು ಭಾ
ವಿಸುವರೇ ಕರುಣದಲಿ ಮಿಗೆ ರ
ಕ್ಷಿಸುವ ಮೋಹದ ತಂದೆ-ತಾಯಿಗಳಾ ಪ್ರಕಾರದಲಿ
ಬಸವರಾಜಗೆ ಮಾತೆ ಪಿತ ನೀ
ನೊಸೆದು ಕರುಣಿಸಬೇಕೆನುತೆ ವಂ
ದಿಸುತಲಿದ್ದನು ಚೆನ್ನಬಸವನು [5]ಅಲ್ಲಮನ ಪದಕೆ[5] ॥ ೨೩ ॥

೧. ತೊ (ಇ.) ೨. ಕಟಕಟ ದಿಟ (ಇ.); ಕಟನೋಳ್ಪರೆ (ಗ.) ೩. ನ (ಅ,ಇ,ಉ, ಕ,ಜ.) ೪. ಮುಳಿಯ (ಬ,ಜ.) ೫. ಅಲ್ಲಮಪ್ರಭುವ (ಕ,ಜ,ಮು.); ವಾಧೀಶ ನಲ್ಲಮಗೆ (ಗ.)

ಪ್ರ. ಲಿ. ೧೫.

ಅರಿಗಳಿದಿರಲಿ ತಪ್ಪಿದೊಡೆ ಸಂ
ಗರದೊಳೂಣೆಯವಪ್ಪುದಲ್ಲದೆ
ಗರುಡಿಯಲಿ ಕೈಮಱೆದೊಡಾವುದು ಕೊಱತೆಯುದಱಿಂದೆ[1]
ಗುರುವೆ ಬಾಲಾಭ್ಯಾಸಭಕ್ತಿಯು
ಪರಿಚರಿಯ[2]ದೂಣೆಯವ[3] ನೋಡದೆ
ಕರುಣಿಸೆನುತಲ್ಲಮಗೆ ವ್ಪೈಯಿಕ್ಕಿದನು ಮಾಚಯ್ಯ ॥ ೨೪ ॥

ತನ್ನ ಕಾಯವೆ ಲಿಂಗ ನೆಟ್ಟನೆ
ತನ್ನ [4]ಜೀವ[4]ವೆ ಚಾರುಜಂಗಮ
ತನ್ನ ತಾ[5]ನೇ ತಿಳಿದ[5] ಬಸವಣ್ಣಂಗೆ ನಿಮ್ಮಡಿಗೆ
ಭಿನ್ನಭಾವನೆ[6] ಯಾವುದೈ ಸಾ
ಕಿನ್ನು ಕೃಪೆಮಾಡೆನುತಲಾಗಳು[6]
ಕಿನ್ನರಿಯ ಬೊಮ್ಮಣ್ಣ ಬಿ[7]ನ್ನಪಗೈದನ[7]ಲ್ಲಮಗೆ ॥ ೨೫ ॥

ಶ್ರುತಿಗೆ [8]ನಿಲುಕದ ಸಕಲ[8]ಶಾಸ್ತ್ರ
ಸ್ಮೃ[9]ತಿ ಗೆ ಸಿಕ್ಕದ ದಿವಿಜ ಮುನಿಗಳ
ಮತಿಗೆ ವ್ಪೈದೋಱದ ಮಹಾಘನಮಹಿಮ ನೀನೊಲಿದು
ಕ್ಷಿತಿಗೆ ಬಸವನಿಮಿತ್ತ ಬಂದಿ
ನ್ನತಿಗಳೆಯಬೇಡೆನುತೆ ದೇವಗೆ
ಸ್ತುತಿಸಿ ವ್ಪೈಯಿಕ್ಕಿದರು ಶಿವಗಣವೆ[10]ಲ್ಲ ತಮತಮಗೆ ॥ ೨೬ ॥

ನೋಡಿದೈ ರಾಮಯ್ಯ ಭಕ್ತರು
ಮಾಡುವುದು ತಾನೊಂದು ಮಿಗೆ ಮಾ
ತಾಡುವುದು ಬೇಱೊಂದು ಜಂಗಮವೊಲಿದು ನಡೆತರಲು
ಪಾಡನೇ ಪರುಠವಿಸಿ ನುಡಿವ ಸ
ಗಾಡಿಕೆಯನೊಡ್ಡಯಿಸಿ ತಮ್ಮಯ
ಷೋಡಿಯನು ತಾವಱಿಯರೆಂದನು ನಗುತೆ ಪ್ರಭುರಾಯ ॥ ೨೭ ॥

೧. ಡಪಕನಪ್ಪವ ಕೊರತೆಗಳು (ಇ.) ೨. ಪರಡೆಹುದ. (ಗ.) ೩. ಜ್ಞಾನ (ಇ.) ೪. ಪರಿಪೂತ (ಅ.); ನಿಂತರಿಪ (ಇ, ಉ); ನಿಂತಳಿಪ (ಕ, ಖ, ಮ.) ೫. ಯುಂಟೆ ಕೃಪೆಯಿಂದಿನ್ನು ರಕ್ಷಿಸಬೇಕೆನುತಲಾ (ಗ.) (೬. ) ನ್ನೈಸಿದನು ಅ (ಅ, ಕ, ಗ.) ೭. ಮುಲ್ಗಭವೆಸಿಪ (ಅ.) ೮. ಸ್ತು (ಅ, ಕ.) ೯. ಲ್ಲ (ಅ, ಗ.)

ಸಲಹಬೇಕೆಂದಖಿಳಭಕ್ತರಿ
ಗೊಲಿದು ನೀನೇ ಲೀಲೆಯಿಂದಲಿ
ಸುಲಭವಾಗಿಯೆ ಸುಳಿದ ಬಳಿಕಿನ್ನವರ ಗತಿನುತಿಯ
ಹಳಿವನೆಣಿಸುವುದೇನುಕಾರಣ
ವೆಲೆ ಮಹಾತ್ಮನೆ ಕರುಣಿಸೆನುತಲಿ
ಸಲುಗೆಯಲಿ ಬಿನ್ನೈಸುತಿರ್ದನು ಸಿದ್ಧರಾಮಯ್ಯ ॥ ೨೮ ॥

ದೇವ ದೇವಾ ಸಿದ್ಧರಾಮಯ
ದೇವರೆಂದೋಪಾದಿಯಲಿ ಮು
ನ್ನಾವ ಭಕ್ತಿಯ ಕಂಡು ಬಿಜಯಂಗೆಯ್ದೆ ನಮಗೊಲಿದು
ಪಾವನವ ಮಾಡಲಿಕೆ ಬಂದಿ
ನ್ನಾವ ಕೊಱತೆಯನೆಣಿಸದೆಮ್ಮನು
ಕಾವುದೆನುತಲಿ ಮತ್ತೆ ಮಣಿದನು ಬಸವನಲ್ಲಮಗೆ ॥ ೨೯ ॥

ಮುನ್ನ ನಿರುಪಾಧಿಯಲಿ ಕರುಣಿಸಿ
ನಿನ್ನ ಲೀಲೆಯಲೊಲಿದು [೧]ನೀ ಬಂ
ದಿನ್ನುಪಾಧಿಯನಱಸುವದು ಮರಿಯಾದೆಯಲ್ಲೆ[೧]ನುತೆ
ಚೆನ್ನಬಸವನು ಹಿರಿಯಬಸವನು
ಮನ್ನಣೆಯ ಶಿವ[೨]ಭಕ್ತ[೨]ರೆಲ್ಲರು
ಬಿನ್ನಹವ ಮಾಡಿದರು [೩]ಮಹಿಮರು ಮತ್ತೆ ತಮತಮಗೆ[೩] ॥ ೩೦ ॥

ಮಾತನೇ ಮಕರಿಸಿದರಲ್ಲದೆ
ಜಾತಿಭಕ್ತಿಯ [೪]ಹೋದ[೪] ಹೊಲಬಿನ
ರೀತಿಯನು ತಾವಱಿಯರಾವಿನ್ನು ಚಿತ್ರ[೫]ಭಕ್ತಿಯನು[೫]
ಈತಗಳಿಗಱುಹಿಸಲು ಬೇಕೆನು
ತೋತು ಬಳಿಕೆಮ್ಮಲ್ಲಮಪ್ರಭು
ಪಾತಗಳಿಗಿಂತೆಂದು ನುಡಿದನು ಮತ್ತೆ ಕರುಣದಲಿ ॥ ೩೧ ॥

೧. ಬಂದಿರಿ। ಯೆನ್ನ ಕೊರತೆಯನೆಣಿಸದೆಮ್ಮನು ಕಾಯಬೇಕೆ(ಖ.) ೨. ಶರಣ (ಇ.)
೩. ತಮತಮಗೈದೆ ಭಕ್ತಿಯಲಿ (ಗ.); ಮಂಗಳಮೂರ್ತಿಯಲ್ಲಮಗೆ (ಜ.)
೪. ಭಾವ (ಇ.) ೫. ವಚನದಲಿ (ಗ.)

ನಡೆವಳಿಗಳೇನಾದೊಡಾಗಲಿ
ನುಡಿವಳಿಯಲತಿ ಜಾಣರಾದಿರಿ
ಪ್ರೌಢವಿಯಲಿ ನೀವಹುದು ಮಝು ಭಾಪೆನುತೆ ನಸುನಗುತೆ
ನಡೆಯಿರೈ ಶಿವಲಿಂಗಭಕ್ತಿಯ
ಬೆಡಗನೇಕಾಂತದಲಿ ನಿಮಗೊಡ
ಬಡಿಸಿ ಹೇಳುವೆನೆನುತೆ ಬಂದನು ಬಳಿಕ ಪ್ರಭುರಾಯ ॥ ೩೨ ॥

ಅಂತು ಗತಿ ೧೪ಕ್ಕಂ ಪದ ೬೪೪ಕ್ಕಂ ಮಂಗಳಂ

# ೧೫ ಮರುಳುಶಂಕರದೇವರ ಗತಿ

ಸೂಚನೆ:

ಮರುಳುಶಂಕರದೇವರಿಗೆ ನಿಜ
ಪರಮಪದವಿಯನಿತ್ತು ಮೆಱೆಸಿದನು
ಧರಣಿಯಱಿಯಲು ಗುರು ಗುಹೇಶ್ವರ ಲಿಂಗಲೀಲೆಯಲಿ

ಕರಣವೆಲ್ಲವು ಕರಗಿಯಂತಃ
ಕರಣ[1]ಶುದ್ಧಿಯ ಪಡೆದು[1] ಸಲೆ ಶಂ
ಕರನ ಸಾಧಕರೊಕ್ಕುಮಿಕ್ಕುದನುಂಬ ಮಹಿಮಂಗೆ
ಗುರುವೆ ಪ್ರತ್ಯಕ್ಷದಲಿ ಕರುಣಿಸಿ
ಪರಮಪದವಿಯನೀವ ಭೇದವ
[2]ಶರಣರೆಲ್ಲರು[2] ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ನಿಂದು ನಿಲ್ಲದ ನೆಲಕೆ ನೆಟ್ಟನೆ
ಹೊಂದಿ ಹೊಂದದ ರೂಪು ರೇಖೆಗೆ
ಬಂದು ಬಾರದ ಸಚ್ಚಿದಾನಂದೈಕರಸಮಯನ
ವಂದಿಸುತೆ ನಾನಾಪ್ರಕಾರಗ
ಳಿಂದಲೊಳಕಡೆಗಾಗಿ ತನ್ನಯ
ಮಂದಿರಕೆ ನಡೆಗೊಳಿಸಿದನು ಬಸವಣ್ಣ ಭಕ್ತಿಯಲಿ ॥ ೨ ॥

ಬರುತೆ ಕಂಡನು ಪರಮಪಾವನ
ಕರದ ಪಾಪಕ್ಷಯದ ಭವಭೀ
ಕರ[3]ವನಳಿದ[3] ಮಹಾಪ್ರಸಾದದ ಕುಂಡತೀರದಲಿ
ಇರುಳು-ಹಗಲೆಡೆಬಿಡದೆ ಸೇವಿಪ
ಮರುಳುಶಂಕರದೇವರನು ನಿಜ
ಕರುಣದಲಿ ಬಸವಣ್ಣನರಮನೆಯೊಳಗೆ ಪ್ರಭುರಾಯ ॥ ೩ ॥

೧. ವನು ಶುದ್ಧಗೊಳಿಸಿ (ಜ.) ೨. ಹರುಷದಿಂದವೆ (ಉ.) ೩. ವೆನಿಸುವ (ಬ.)

ಅಲ್ಲಮಪ್ರಭು ಬರುತೆ ಕಾಣುತೆ
ಮೆಲ್ಲಮೆಲ್ಲನೆ ಬಂದು ತನುಮನ
ವೆಲ್ಲವನು ಕವಿದೊಕ್ಕು [1]ಸಾಷ್ಟಾಂಗಪ್ರಣತನಾಗಿ[1]
ಪಲ್ಲವಿಸಿ ಪರಿಣಮದ ಪಸರಣೆ
ಯಲ್ಲಿ ಹಿಗ್ಗುತೆ ಭಕ್ತಿಭಾವದ
ಬುಲ್ಲವಣೆಯಲಿ ಮರುಳುಶಂಕರದೇವನಿಂತೆಂದ ॥ ೪ ॥

ಗುರುವ ಕಂಡೆನು ಎನ್ನ ಭಾಗ್ಯದ
ತರುವ ಕಂಡೆನು ಎನ್ನ ಮುಕ್ತಿಯ
ಸಿರಿಯ ಕಂಡೆನು ಚಾಗು ಮಝು ಭಾಪೆನುತಲಡಿಗಡಿಗೆ
ಕರಣಗಳು ಪರಿಣಮಿಸಿ ಹರ್ಷೋ
ತ್ಕರುಷದಲಿ ಹಾರಯ್ಸಿ ಹೆಚ್ಚುತೆ
ಮರುಳುಶಂಕರದೇವ ಸ್ತುತಿಸಿದನಲ್ಲಮಪ್ರಭುವ ॥ ೫ ॥

ಶಿಲೆಯ ಮಱೆಯಲಿ ಹೊನ್ನು ನೆಟ್ಟನೆ
ತಿಲದ ಮಱೆಯಲಿ ತೈಲ ಭಾವಿಸೆ
ನೆಲದ ಮಱೆಯೆ ನಿಧಾನವಿಹ[2]ವೊಲು[2] ಮರುಳ ವೇಷದಲಿ
ಬಳಿಯಲಿರೆ ಸಾಕಾರಶಂಕರ
ನೆಲಸಿ ತನ್ನಂಗಣದಲಾತನ
ಹೊಲಬನಱಿಯನು ಬಸವನೆನುತಲ್ಲಮನು ಜೀಜಾದ ॥ ೬ ॥

ಪ್ರೇಮದಿಂದಲಿ ಮರುಳುಶಂಕರ
ನಾಮದಲಿ ಶಂಕರನೆ ಬಂದಿರೆ
ಭೂಮಿಜ[3]ರು[3] ತಾವಱಿಯದಾಡಂಬರದ ಭಕ್ತಿಯಲಿ
ತಾಮಸವ ತಕ್ಕೈಸಿ ಸಾತ್ವಿಕ
ಸೀಮೆಯನು ತಾವಱಿಯಲಱಿಯರು
ರಾಮ ನೋಡೆನುತಲ್ಲಮಪ್ರಭುರಾಯನಿಂತೆಂದ ॥ ೭ ॥

೧. ತಿರೆ ಸಾಷ್ಟಾಂಗವೆರಗಿದನು (ಜ) ೨. ಪರಿ (ಅ.) ೩ ನ. ಜ.

ಭಾವಿಸಲು ಶಿವಲಿಂಗಭಕ್ತಿಯ
ನಾವ ಪರಿಯಲಿ ಮಾಡಬೇಕೆಂ
ಬಾ ವಿಧಾನವನಱಿಯದುದ್ದೇಶದಲಿ ಮಾಡಿದೊಡೆ
ಹಾವಸೆಯಲಡಿಯಿಡುವನಂತೆಯ
ದಾವ [1]ಪಾರವನೈದ[2]ಬಲ್ಲುದು
ದೇವನೀ ಪರಿ ಸಿಕ್ಕುವನೆ ರಾಮಯ್ಯ ಕೇಳೆಂದ || ೮ ||

ಅಱಿಯಬೇಕಾರಾವ ವೇಷದ
ಮಱೆಯಲಿಹರೋ ಮೇಣು ಲಿಂಗದ
ಬೆಱಗಿನಲಿ ಕಂಡವರ ಕಣ್ಣಿಗೆ ಮರುಳರಾಗಿಹರೊ
ಮೆಱೆವ ಭಕ್ತರ ಮನವ ನೋಡಲು
ಮಱೆಸಿಹರೊ ದಿಟವಿವನು ತಿಳಿಯದೆ
[2]ಬಱಿದೆ ಬಹುದೇ ಭಕ್ತಿಸುಖ [2]ರಾಮಯ್ಯ ಕೇಳೆಂದ || ೯ ||

ಗುರುವೆ ಬಿನ್ನಹ ನಿನ್ನನೊಲಿಸುವ
ಪರಿಯ ಭಕ್ತಿಯ ಮಾಡಿ ಮೆಚ್ಚಿಸಿ
ಪರವ ಹಡೆಯಲದಾರು ಬಲ್ಲರು ಭಾವಿಸಲು ನಿನಗೆ
ಶರಣು ಶರಣೆಂದೆಂಬಶಬ್ದ
ಸ್ಮರಣೆಯಿಂದಲಿ ಶುದ್ಧರಲ್ಲದೆ
ಹಿರಿದು ಮಾತೇಕೆನುತಲಿದ್ದನು ಸಿದ್ಧರಾಮಯ್ಯ || ೧೦ ||

ನಿನ್ನ ಕೃಪೆಯುಳ್ಳವನೆ ಭಕ್ತನು
ನಿನ್ನ ಕೃಪೆಯುಳ್ಳವನೆ ಯುಕ್ತನು
ನಿನ್ನ ಕೃಪೆಯುಳ್ಳವನೆ ಮುಕ್ತನು ದಿಟ ವಿಚಾರಿಪೊಡೆ
ನಿನ್ನ ಕೃಪೆಯೊಂದಿಲ್ಲದಿರೆ ಮಿ
ಕ್ಕನ್ಯಭಕ್ತಿಯೊಳೇನು ಫಲವೈ
ನಿನ್ನ ಕರುಣವೆ [3]ಕಾರಣವಲಾ ಗುರುವೆ[3] ಕೇಳೆಂದ || ೧೧ ||

೧. ಭಕ್ತಿಯುನ್ನೈದ (ಜ, ಮು.) ಪರಿ ಮುನ್ನೈದ (ಗ.) ೨. ಬಱಿಯ ಭಕ್ತಿಯುಲೇಸ ಮುಮು (ಗ.) ೩. ಕಾರಣವು ಗುರುರಾಯ (ಉ.); ಕರಣನ್ನು ಗುರುರಾಯ (ತ್ರಿ.)

ಲೇಸು ಭಕ್ತಿಯು ಬಂಧುತನದಭಿ
ಲಾಷೆಯಿಂತಿರಬೇಕು ಮರ್ತ್ಯರ
ಹೂಸಿ [೧]ಹುಂಡರ[೧] ನಡೆವಳಿಯು ಸೇನೊಪ್ಪವಿಟ್ಟಿಯಲಾ
ಐಸೆ ಮತ್ತೇನಹುದು ದಿಟ ನೀ
ನೀಸುವೊಲವರಕಾಣಿನೆಂಬುದ
ನೀಸುದಿನ ನಾವಱಿಯೆವೈ ರಾಮಯ್ಯ ಕೇಳೆಂದ ॥ ೧೨ ॥

ವಸುಮತಿಯ ಶಿವಭಕ್ತರೆಸಗುವ
ಕುಸಲದೊಯ್ಯಾರವನು ನವಿಂ
ಮಸುಳಿಸಿದ ಮತಿಗಱಿಯ[೨]ಬಹುದೇ[೨] ಸಾಕದಂತಿರಲಿ
ಅಸಮಶಂಕರನೆಂಬ ಮಹಿಮನ
ಹೊಸ ಪರಿಯ ರೀತಿಯನು ನಮಗಱು
ಒಸಲುಬೇಕೆನುತಲ್ಲಮನ ಕೇಳಿದನು ರಾಮಯ್ಯ ॥ ೧೩ ॥

ಮರುಳುಶಂಕರನೆಂಬನಱುವಿನ
ತಿರುಳು ಲಿಂ[೩]ಗಾಗಮದ[೩] ಹೊಳಹಿನ
ಹುರುಳು ನಿರ್ಮಳಧರ್ಮಮರ್ಮದ ಚಾರುಚಾರಿತ್ರ
ನಿರುತ ಶಾಂತಿಯ ಚಿತ್ತವೃತ್ತಿಯ
ಪರಮಪಾವನಮೂರ್ತಿಯಾತನ
ಪರಿಗಳನುಪಮತರ ಕಣಾ ರಾಮಯ್ಯ ಕೇಳೆಂದ ॥ ೧೪ ॥

ಜೀವಿ ತನ್ನೊಂದುದರಕೋಸುಗ
ಜಾವ ಕೃತ್ಯವ ಮಾಡುತಿರ್ದೊಡೆ
ಜೀವಜಾಳಕೆ ನೋವು ತಪ್ಪದೆನುತ್ತೆ ಕರುಣದಲಿ
ಭಾವಿಸುತೆ ಶಿವಲಿಂಗಭಕ್ತರು
ಸೇವಿಸಿದ ಶೇಷಪ್ರಸಾದವ
ಸಾವರಿಸಿದ ಮಹಾತ್ಮನೀತನು ರಾಮ ಕೇಳೆಂದ ॥ ೧೫ ॥

೧. ಸಾತಿಶಯ (ಗ.) ೨. ಹಾರಿಸು (ಗ.) ೩. ಗಾಂಗಸಲಿ (ಕ.)

ಕಾಮದಲಿ ಕಣ್ಗೆಡದೆ ಕ್ರೋಧ
ಸ್ತೋಮದಲಿ ಮುಂಗೆಡದೆ ಲೋಭದ
ಸೀಮೆಯಲಿ ಸಿಕ್ಕದೆ ವಿಮೋಹದ ಬಲಿಗೆ [1]ಬಗೆ[1]ಗುಡದೆ
ಆ ಮದೋನ್ನತಮತ್ಸರಂಗಳ
ನೇಮಿಸದೆ ಲಿಂಗಪ್ರಸಾ[2]ದ
ಪ್ರೇಮಿಯಾ[2]ದ ಮಹಾತ್ಮನೀತನು ರಾಮ ಕೇಳೆಂದ ॥ ೧೬ ॥

ಕೇಳುವಾಳೋಕಿಸುವ ರುಚಿಸುವ
ಲೀಲೆಯಿಂ ಕಂಪಱಿವ ಸೋಂಕುವ
ಕಾಳು ವಿಷಯೇಂದ್ರಿಯದ ತವಕ[3]ವ ತೆಗೆದು[3] ತರಹರಿಸಿ
[4]ಬಾಳಿಕೆಗೆ ನಿರ್ಬಾಧಕದ ಸಂ
ಮೇಳವೆಂದೀ[5]ಶ ಪ್ರಸಾದದ
ಮೇಲೆ ಮಚ್ಚಿದ ಮಹಿಮನೀತನು ರಾಮ[4] ಕೇಳೆಂದ ॥ ೧೭ ॥

ತರಣಿಯುದಯಿಸೆ ರತ್ನಕಾಂತಿ
ಸ್ಫುರಣೆ ಕಣ್ಗೆದಿರಾಗಿ ತೋಱುವ
ಪರಿಯಲಾಸೀ ಮರುಳುಶಂಕರನೆಂಬ ಮಹಿಮನನು
ಗುರುವೆ ನೀನ್ನೈತರಲು ಕಂಡೆನು
ಪರಮಪಾವನ ನಾನಲಾ ಹರ
ಹರ ಎನುತೆ ಪರಿಣಮಿಸುತಿರ್ದನು ಬಸವದಂಡೇಶ ॥ ೧೮

ಬಸವ ನಿನ್ನಯೆ ಭಕ್ತಿವೃಕ್ಷದ
ಪಸರಣೆಯನಾಕ್ರಮಿಸಬೇಕೆಂ
ದೊಸೆದು ಬಂದ ಮಹಾತ್ಮರಗಣಿತವವರೊಳೀತಂಗೆ
ವಸುಮತಿಯೊಳೆಣೆಗಾಣೆನಿಂತ
ಪ್ಪಸಮತೆಲ್ಲರು ನಿನ್ನ ಬಾಗಿಲ
ಮುಸುಱಿಕೊಂಡಿಹರಾಗಿ ನೀನೆ ಕೃತಾರ್ಥನಹುದೆಂದ ॥ ೧೯ ॥

೧. ಮನ (ಗ.) ೨. ಪದ। ಸೀಮೆಯರಿ (ಜ.) ೩. ಪ ತೆಗಹ (ಉ, ಜ.) ೪–೪. ಕೇಳು ಮಾಡಿಯೆ ಲಿಂಗದಲಿ ಸುಮ್ಮೇಳದಲಿ ಸಹ ಜಿರೆಪನೀತನು। ಹೇಳುವರೆ ಸಾಮಾನ್ಯನೇ ರಾಮಯ್ಯ (ಇ.) ೫. ಸು (ಅ, ಬ.); ಸ (ಕ, ಗ, ಜ.) ೬. ಕಿ (ಇ.)

ದೇವ ನೀನೊಲಿದನೆ ಕೃತಾರ್ಥನು
ಭಾವಿಸಲು ನೀನಾಡಿಸುವ ಸೂ
ತ್ರಾವಳಿಯ ಬೊಂಬೆಗಳು ನಮಗುಂಟೇ ಸ್ವತಂತ್ರಗುಣ
ನೀವೆ ಬಲ್ಲಿರಿ ನಿಮ್ಮ ಮಹಿಮೆಯ
ನಾವು ಬಲ್ಲೆವೆ ಎನುತಲಲ್ಲಮ
ದೇವರಿಗೆ ಬಿನ್ನೈಸುತಿರ್ದನು ಬಸವವಂಡೇಶ || ೨೦ ||

ಮನವ ನೋಡುವೆನೆಂದು ನಿನ್ನನು
ಕನಲಿದೆವು ನಾವಿನ್ನೆ ಬರ ನಿನ
ಗಿನಿತು ಮುನಿಸಿನ ವೊಳಕೆ ಪ್ರೈದೋಜಾಸವ ಪರಿ ಲೇಸು
ಘನಮಹಿಮ ನೀನಹುದು ಸಮತೆಯ
ನೆನಹು ನೆಲೆಸಿತು ಚಾಗು ಚಾಗೆಂ
ದೆನುತೆ ಬಸವನ ಹೊಗಳುತಲ್ಲಮಲಿಂಗನಿಂತೆಂದ || ೨೧ ||

ಕಾರಣವ ಬಲ್ಲವರಿಗಜಿಯಲು
ಧಾರುಣಿಯಲೀ ಬಸವನಂಗಣ
ವಾರಣಾಸಿವಿಮುಖ್ಯತೀರ್ಥಕ್ಷೇತ್ರದಿಂದಧಿಕ
ಆರು ಪಡೆವರು ಭಕ್ತರಿಕ್ಕೆಯ
ಸಾರಿ ಸದ್ಗತಿ ಪಡೆವುದನು ನಿ
ರ್ಧಾರಿಸಲು ಸಾಮಾನ್ಯವೇ ರಾಮಯ್ಯ ಕೇಳೆಂದ || ೨೨ ||

ದೇವ ನಿನ್ನಯ ೆ ಕರುಣವೇ ೆ ಸಂ
ಭಾವಿಸಿದ ಕಾರಣವಲಾನೀ
ಘೋವಳಯದಲಿ ಬಸವಮುಖ್ಯಸಮಸ್ತಭಕ್ತರನು
ತೀವಿ ಕಂಡು ಕೃತಾರ್ಥನಾದೆನಿ
ದಾವ ಪುಣ್ಯದ ಫಲವೊ ಶಿವ ಮಾ
ದೇವ ಎನುತಲಿ ಹಿಗ್ಗುತಿರ್ದನು ಸಿದ್ಧರಾಮಯ್ಯ || ೨೩ ||

ಬಸವರಾಜನ ಭಕ್ತಿಯನು ಬ
ಣ್ಣಿಸುವೊಡಾತನ ಭಕ್ತಿಯನು ಲೆ
ಕ್ಕಿಸುವೊಡಾರಿವಗಣಿತವಲಾ ಕೇಳ್ ಸಿದ್ಧರಾಮಯ್ಯ
ಪಸರಿಸುವದಂತಿರಲಿ ನಾವಿ
ನ್ನಸಮಶಂಕರಗೈಕ್ಯಪದವಿಯ
ನೊಸೆದು ಕೊಡಬೇಕೆನುತಲಲ್ಲಮಲಿಂಗನಿಂತೆಂದ || ೨೪ ||

ಇಂದ್ರಿಯವಸತಿಗಳೆದನಳುಪಿನ
ದಂದುಗವ ಧಿಕ್ಕರಿಸಿದನು ಭವ
ಬಂಧನದ ಬೇರಿಂಗೆ ಕಿಚ್ಚಿಕ್ಕಿದನಲಾ ಎನುತೆ
ಅಂದು ಬಳಿಕಾ ಮರುಳುಶಂಕರ
ತಂದೆಯನು ತಾನೊಲಿದು ಪರಮಾ
ನಂದದಿಂ ನೋಡಿದನು ನಮ್ಮಯ ಗುರು ಗುಹೇಶ್ವರನು || ೨೫ ||

ಹಲವು ಯುಗಯುಗ ಜನ್ಮಜನ್ಮಂ
ಗಳಲಿ ಸಾಧಿಸಿ ಭೇದಿ[೧]ಸುವ[೧] ನಿ
ರ್ಮಳನಿರಾಕುಳಸಿದ್ಧಶಿವತತ್ವಾನುಭಾವನೆಯ
ಫಲವನೊಂದೇ ನಿಮಿಷದಲಿ ನೆಱೆ
ನಿಲಿಸಿ ನಿಜಪದವಿಯನು ಕೊಟ್ಟನು
ಸುಲಭದಲಿ ಶಂಕರಗೆ ನಮ್ಮಯ ಗುರು ಗುಹೇಶ್ವರನು || ೨೬ ||

ಆಡಿ ಕೆಲರಿಗೆ ಕರುಣದಲಿ ಮಾ
ತಾಡಿ ಕೆಲರಿಗೆ ನುಡಿಸಿ [೨]ಕೆಲರಿಗೆ
ನೋಡಿ ಕೆಲರಿಗೆ ಜಱಿದು ಕೆಲರಿಗೆ ಜಡಿದು ಕೆಲಬರಿಗೆ
ಹಾಡಿ ಕೆಲರಿಗೆ ಹರಸಿ ಕೆಲರಿಗೆ
ಕೂ[೩]ಡಬಲ್ಲನು ನಿತ್ಯ ಸುಖವನು
ರೂಢಿಯೊ[೪]ಳು ಘನಮ[೫]ಹಿಮನೆಮ್ಮಯ[೬] ಗುರು ಗುಹೇಶ್ವರನು[೭] || ೨೭ ||

**ಅಂಕು ಗತಿ ೧೫ಕ್ಕಂ ಪದ ೬೭೧ಕ್ಕಂ ಮಂಗಳಂ**

೧. ಪ (೧.) ೨. ಕೇಳು ೩. ನೋಡಿದಿಚ್ಛೆಯನಿತ್ತು ತುಷ್ಟಿಯು ಬಡಿಸಿ ಕೆಲರಿಂಗೆ ನೋ ಡಿ ಕೆಲರಿಗೆ ಜಱಿದು ಕೆಲರಿಗೆ ರೂಢಿಗಚ್ಚರಿವಡಿಸಿ ಮುಕ್ತಿಯ ಗಾಣಿಸಿದ ನಮ್ಮಯ ಗುಹೇಶ್ವರಲಿಂಗಲೀಲೆಯು ೪. (ಜ.) ೫. ಮಾ (ಜ.) ೬. ಕಗೆಮ್ಮಲ್ಲಿಮುಪ್ರಭು (ಉ, ಗ.)

# ೧೬. ಇಷ್ಟಲಿಂಗದ ಗತಿ

**ಸೂಚನೆ:**

ಬಸವ ಮೊದಲಾಗಿರ್ದ ಭಕ್ತರಿ
ಗೊಸೆದು ಲಿಂಗದ ಮಾರ್ಗವನು ಬೋ
ಧಿಸಿದನೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ

ನಿಷ್ಠೆ [೧]ನೆಲಸಿರೆ[೧] ಮೊಟ್ಟಮೊದಲಲಿ
ಯಿಷ್ಟಲಿಂಗದ ಭಕ್ತಿಮಾರ್ಗದ
ಶಿಷ್ಟತೆಯ ಶೀಲವನು ಸಕಲಾಗಮದ ಸಾರವನು
ಕಷ್ಟಕರ್ಮಭ್ರಮೆಯ ಕೇಡನು
ದೃಷ್ಟಜನ್ಮದಲಿರ್ದು ಕಾಂಬರೆ
ಶ್ರೇಷ್ಠಭಕ್ತರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ಮರುಳುಶಂಕರಗೈಕ್ಯಪದವಿಯ
ಪರುಟವಿಸಿ ಕೊಟ್ಟೊಲವಿನಿಂದಲಿ
ಪರಿಮಿತಾಲಯಕೆಯ್ದಿ ಪರಮಾನಂದ[೨]ಲೀಲೆ[೨]ಯಲಿ
[೪]ಕರುಣೆ[೫] ಮಿಗೆ[೬] [೭]ನಡೆ[೭]ತಂದು ಬಸವೇ
ಶ್ವರನು ಮಾಡುವ ಭಕ್ತಿಯುಕ್ತಾ
ದ[೮]ರಣೆಯನು ಕೈಕೊಳುತಲಿರ್ದನು ಗುರು ಗುಹೇಶ್ವರನು ॥ ೨ ॥

ಮಣಿಖಚಿತ ಮಂಗಳದ ಪರುಷದ
ಕಣಿಯ ಪೀಠದ ಮೇಲೆ ನೆಱೆ[೩] ನಿ
ರ್ಗುಣದ ಸಗುಣದ ನಿರ್ಮಲದ ನಿರ್ವಾಣಗುರುವಿರಲು
ಎಣಿಸಬಾರದ ಬಹುಳಭಕ್ತಿಯ
ಗಣನೆಯಲಿ ಕೈಮುಗಿದು ಮೆರೆಯಳಿಯ
ಮಣಿದು ಮಹಿಮೆಗೆ ಬಸವ ಚೆನ್ನಹಮಾಡಲಸುಗೆಯು ॥ ೩ ॥

೧. ಯಲಿ ನೆಱೆ ನಿಲಿಸಿ(ಆ.) ೨. ಮ(ಉ, ಖ, ಚ.) ೩. ಮಹಿಮೆ(ಅ, ಕ, ಚ,) ೪–೫. ಹರುಷ (ಗ.) ೪–೬. ಕರುಣಿಸಿಯೆ (ಜ.) ೭. ಯ್ಯ (ಉ, ಜ.) ೮. ಚ (ಮ.)

ಕುರುಡ ಕನ್ನಡಿವಿಡಿದ ಮಾಟದ
ರಿಯಲಿದೆ ಶಿವಭಕ್ತಿಯೆಂಬುದು
ರುಳು ಕಂಡಾ ಕನಸಿನಂತಿರೆ ಮಾತಿಗರಿದಾಯ್ತು
ರುವೆ ನಾನಿದನಜೀವವೊಲು ವಿ
ರಿಸಿ ಪೇಳೆಂದೆನುತಲಾ ವರ
ರು ಗುಹೇ[1]ಶಗೆ ಬಿನ್ನಹವ ಮಾಡಿದನು ಬಸವಣ್ಣ[1] ॥ ೪ ॥

ಚಾಗು ಭಲರೇ ನೀನಹುದು ನಿಗ
ಾಗಮಂಗಳ ಸ[2]ತ್ವಸಾರವ
ಾಗುಮಾಡಲು ಬಂದ ಕಾರಣಪುರುಷ ನೀ[3]ನೆನುತೆ[3]
ಗಳಾ ಪ್ರಶ್ನೆಗೆ ಮನೋಮುದ
ಾಗಿ ಮೆಚ್ಚುತಲಲ್ಲಮಪ್ರಭು
ಾ ಗುಣಾರ್ಣವ ಬಸವದಂಡಾಧೀಶಗಿಂತೆಂದ ॥ ೫ ॥

ಭಾವಿಸಲು ಭಾಸ್ಕರನ ಬಟ್ಟೆಗೆ
ೀವಿಗೆಯ ಹಂಗೇಕೆ ತಿಳಿವೊಡೆ
ಾವಕನ ಪಸಿವಿಂಗೆ ಪಚನಾರಂಭವಿಧಿಯೇಕೆ
ವಿಚಾರತೆಯಂತೆ ನಿನಗಿ
ನ್ನಾವ ಬೋಧೆಗಳ ಪ್ರಯೋಜನ
ವಪುರುಷನು ನೀ ಕಣಾ ಬಸವಣ್ಣ ಕೇಳೆಂದ ॥ ೬ ॥

ಹರ ಹರಾ ನಾನಾರು ನಿನ್ನಯಿ
ಕರಣಶರಣರ ಶರಣರೊಳು[4] ಕಿಂ
ರರ ಕಿಂಕರ ನಾನೆಲೈ ಎನಗಿಲ್ಲಿಪರಿಯಂತ
ುರುವೆ ಭರಭಾರವನು ಹೊರಿಸಲು
ರುಣವಿಲ್ಲವೆ ನಿನಗೆಯೆನುತಲಿ
ುತನಿರಹಂಕಾರನಿಧಿ ಬಸವಣ್ಣನಿಂತೆಂದ ॥ ೭ ॥

. ಶ್ವರಲಿಂಗನಿಗೆ ಬಿನ್ನೈಸಿದನು ಬಸವ (ಇ.) ೨. ತ (ಇ, ಉ, ಖ, ಗ.)
. ನ ಹುದು (ಜ.) ೪. ಕಮಲವನರ್ಚಿಸುವ (ಖ.)

ಬಿತ್ತಿ ಬೆಳೆಯದ ಮುನ್ನ ಪೊಳಕೆಯ
ಕಿತ್ತು ನೋಡುವರೆ ವೃಥಾ ನಾ
ನೆತ್ತಲೀ ಸ್ತುತಿಯೆತ್ತ ಶಿವ ಶಿವ ಗುರುವೆ ನೀ ಬಲ್ಲೆ
ಚಿತ್ತವಿಸು ಮನ್ಮನದ ಮಧ್ಯದ
ಕತ್ತಲೆಯು ಕಳೆದಱುವಿನರ್ಕನ
ತೆತ್ತಿಸೆನ್ನೊಳಗೆನುತಲಿರ್ದನು ಬಸವದಂಡೇಶ || ೮ ||

ಸುಧೆಯ ನಿರುಪಮರುಚಿಗೆ ಬೇಱೊಂ
ದಿದಿರ ೧ಸವಿ೧ಗಲಿಸುವರೆ ಆದರೆ
ಹದನ ನೀ ಕೇಳಿದರೆ ಸಾವದನಲ್ಲವೆನಲೇಕೆ
ವಿದಿತನಿರಹಂಕಾರಿ ನಿನಗ
ಲ್ಲದೆ ಬಳಿಕ್ಕಿನ್ನಾರಿಗೈ ಲಿಂ
ಗದ ಮಹಾಸೇವಾನುಭವಸುಖ ಬಸವ ಕೇಳೆಂದ || ೯ ||

ತಿಳಿವೊಡೀ ಮಾಯಕದ ಜನ್ಮಂ
ಗಳ ಶರೀರಗಳಪ್ರಯೋಜನ
ಕುಲಗಳಾಗಿಹುವಲ್ಲಿ ಮಾನವದೇಹವವಱೊಳಗೆ
ಸಲುವ ಕರ್ಮಂಗಳಿಗೆ ಕರ್ತನು
ಗಳಿಸಿ ಕೊಡುವುದು ಪುಣ್ಯ ಪಾಪಂ
ಗಳನು ಮುಂದಕೆ ಬಸವದಂಡಾಧೀಶ ಕೇಳೆಂದ || ೧೦ ||

ಮನುಜದೇಹಿಗಳಾದರೆಯು ತನು
ಮನಗಳಲಿ ಪಟುವಾಗಿ ದುರ್ವಾ
ಸನೆಯ ಬುದ್ಧಿಗೆ ಸಿಲುಕದಿಹುದರಿದಾ ಶರೀರದಲಿ
ಅನಿತಱೊಳಗೆಚ್ಚೆತ್ತು ಜನ್ಮದ
ಜನುಗಿಗಾಸಿಸ್ನಾಱೆನೆಂಬಾ
ಮನುಜನೇ ಕೃತಕೃತ್ಯನಹನೈ ಬಸವ ಕೇಳೆಂದ || ೧೧ ||

೧. ಪಾಠ (ಅ.)

ಹಾಲು ಹಯನುಳ್ಳಲ್ಲಿ ಹಬ್ಬವ
ಹೇಳದೆಯು ಕೇಳದೆಯು [1]ಸವೆವು[1]ದು
ಗಾಳಿ ಬೀಸುವ ದಿನದಲೇ ತೂಱುವುದು ಹೊಟ್ಟುಗಳ
ಕಾಲು ಕೈ ಕಣ್ಣುಗಳು ತನುವಿಹ
ಕಾಲದಲಿ ಕಾಲನ ನಿವಾರಿಸಿ
ಮೇಲುಗತಿಯ[2]ಜಾಸು[2]ವನೆ ಜಾಣನು ಬಸವ ಕೇಳೆಂದ ‖ ೧೨ ‖

ಅದು ನಿಮಿತ್ತದಲಾಗಮಂಗಳ
ಹೃದಯದಲಿ ಹುರುಳಱಿದು ತನ್ಮಾ
ರ್ಗದಲಿ ಬುದ್ಧಿಯನಿಕ್ಕಿ ಗುರುಕಾರುಣ್ಯವನು ಪಡೆದು
ಮೊದಲು ತನು-ಮನ-ಧನದ ಮೇಲಣ
ಮದ-ವಿಮೋಹಾದಿಗಳನೆಲ್ಲವ
ಕೆದಱಿ ಕೆಡಿಸುವನವನೆ ಜಾಣನು ಬಸವ ಕೇಳೆಂದ ‖ ೧೩ ‖

ಪ್ರಾಣವಿದು ನೋಡೆಂದ ಪ್ರತಿ ಗುರು
ವಾಣತಿಯ[3]ನಿ[3]ದಿರ[4]ಡಲು[4] ಕಣ್ಣಿಗೆ
ಕಾಣಿಸುವ ತನ್ನಿಷ್ಟಲಿಂಗವನತಿಸಮೇಳದಲಿ
ಮಾಣದಾಗಳು ಹಿಡಿದು ಹಿಂಗದೆ
ಕೇಣವಿಲ್ಲದೆ ನಿಂದ ನಿಷ್ಠೆಯ
ಜಾಣ[5]ನೇ ಶಿವ[5]ಭಕ್ತನಹನೈ ಬಸವ ಕೇಳೆಂದ ‖ ೧೪ ‖

ಕೆಯ್ಯೊಳಗೆ ಶಿವಲಿಂಗವಿರ್ಪೊಡೆ
ಮೆಯ್ಯ [6]ಸೋಂಕಿ[6]ರಬೇಕು ವಸ್ತ್ರದ
ಹುಯ್ಯಲಿಗೆ ಹೂ-ಪತ್ರಿಗಳ ಜಂಜಡಕೆ ಜೊಂಪಿಸದೆ
ಒಯ್ಯನೀಕ್ಷಿಸಿ ತನ್ನಲಿಹ ಮೂ
ಮೆಯ್ಯ ಪಸ್ತ್ರಪ ಮಾಡುವನೆ ಜಗ
ದಯ್ಯನೆನಿಸುವ ಭಕ್ತನಹನೈ ಬಸವ ಕೇಳೆಂದ ‖ ೧೫ ‖

೧. ಮಾಳ್ಪ (ಅ.) ೨. ಜಾವ (ಕ.) ೩. ಲಿ (ಇ,ಕ.) ೪. ಟ್ಟ (ಇ.)
೫. ಪವನೇ (ಶಾ.) ೬. ಪಙ್ಗಿ (ಇ)

ಲಿಂಗದೇವಗೆ ತನ್ನಲಿಹ ಮೂ
ಱಂಗವೇ ವಸ್ತ್ರಂಗಳಾದೊಡೆ
ಲಿಂಗನೆನಱನಲಹುದು ಸಕಲಾರಂಭವನು ಮಱೆದು
ಅಂಗಸುಖವನೆ ಬಯಸು[1]ವೊಡೆ[1] ಶಿವ
ಲಿಂಗಪೂಜೆಯ ಮಾ[2]ಡುತಿಹುದಾ[2]
ಲಿಂಗಪೂಜೆಯ ಮಾಡುವಂದವ ಬಸವ ಕೇಳೆಂದ ॥ ೧೬ ॥

ಕರಣದಲಿ ಸಲೆ ಸಕಲಸಚರಾ
ಚರಚಯಂಗಳ ಮೇಲೆ ಕರಗುವ
ಕರುಣೆಯಾಗಿಯೆ ಬಳಿಕ ಲಿಂಗಕೆ ಮಜ್ಜನಕ್ಕೆಱೆದು
ಪರಮಶಾಂತಿಯ ಚಿತ್ತ ತನಗಾ
ವರಿಸಿದೊಡೆ ಲಿಂಗಕ್ಕೆ ಗಂಧವ
ನೊರೆಯ ಬಲ್ಲೊಡೆ ಭಕ್ತನಹನೈ ಬಸವ ಕೇಳೆಂದ ॥ ೧೭ ॥

ಕರ್ಮಗಳ ಕಡೆಗಣಿಸಿ ಯುಕ್ತಿಯ
ಮರ್ಮವನು ತಾನಱಿದು ಸಲೆ ಶಿವ
ಧರ್ಮದಲಿ ನೆಱೆ ನಿಲುವೊಡಕ್ಷತೆಯಿಂದಲರ್ಚಿಪುದು
ಕೂರ್ಮೆಯಿಂದಲಿ ತನ್ನ ಬಗೆಯನು
ನಿರ್ಮಲತೆಯೆನಿಸುವೊಡೆ ಪುಷ್ಪದ
ಮರ್ಮಪೂಜೆಯ ಮಾಡಕಲಿವುದು ಬಸವ ಕೇಳೆಂದ ॥ ೧೮ ॥

ಒಡಲ ದುರ್ಗುಣಗಣವನೆಲ್ಲವ
ಸುಡುವೊಡೀವುದು ಧೂಪಧೂಮವ
ನಿಡಿದ ತನುವಿನ ತಮವನಳಿಯಲು ಬಲ್ಲೊಡರ್ತಿಯಲಿ
ಬಿಡದೆ ಬಗೆ ಬಂದಿಸಿತು ದೀಪದ
ಗಡಣಗಳನೆತ್ತುವುದು ಭಕ್ತಿಯ
ಬೆಡಗನಱಿವಂಗಿಸಿತುಬೇಹುದು ಬಸವ ಕೇಳೆಂದ ॥ ೧೯ ॥

೧. ವರು (ಉ.) ೨. ಡ ಬೇಹುದು (ಉ.)

ರುಚಿಪದಾರ್ಥವ ಲಿಂಗನೆನಹಿನ
ರಚನೆಯಲಿ ರಂಜಿಸಿದ ಬೋನವ
ಶುಚಿತನವಲಾಗೆನಿಸಿ ನೈವೇದ್ಯವನು ಮುಟ್ಟಿಸುತೆ
ಪ್ರಚುರವೆನಿಪಾನಂದಸಹವಾ
ದುಚಿತದಗ್ಗವಣಿಗಳನೀಂಟಿಸ
ಲಚಲಭಕ್ತಿಯನಱಿವನಾತನು ಬಸವ ಕೇಳೆಂದ ॥ ೨೦ ॥

ಬಿಟ್ಟು ಸತ್ವರಜಸ್ತಮೋಗುಣ
ದೊಟ್ಟಿಲನು ಬಳಿಕಲ್ಲಿ ಲಿಂಗಕೆ
ಮುಟ್ಟಿಸು[೧]ಗೆ[೧] ತಾಂಬೂಲವನು ವಿತ್ತಾನುಸಾರದಲಿ
ನೆಟ್ಟನೀ ಪರಿ ಲಿಂಗನೆನ[೨]ಹೇ[೨]
ಗಟ್ಟಿಯಾದರೆ ಪ್ರಾಣಲಿಂಗದ
ಬಟ್ಟೆಯನು ಭೇದಿಸುವನಾತನು ಬಸವ ಕೇಳೆಂದ ॥ ೨೧ ॥

ಪ್ರಾಣವೆಂತಾ ಮೂಱು ತನುವಿನ
ಕೋಣೆಯೊಳಗಿಪ್ಪಂತೆ ಲಿಂಗಕೆ
ಮಾಣದೊಂದೊಳವಸ್ತ್ರವಿಷ್ಟ್ರಿಯರ್ ಸಜ್ಜೆ ಸೇರಿಸಿದ
ಕಾಣಿಸುವ ಶಿವದಾರಸಹ ನಿ
ರ್ವಾಣದೊಳಗ[೩]ಳವಡಿ[೩]ಸ ಬಲ್ಲೊಡೆ
ಜಾಣ ಭಕ್ತಿಯನಱಿವನಾತನು ಬಸವ ಕೇಳೆಂದ ॥ ೨೨ ॥

ತ್ರಿಳಿ[೪]ವೊಡಾ[೪] ಶಿವದಾರ ಸಜ್ಜೆಗ
ಳಳ[೫]ವಡುವೊಡಾ[೫] ಮೂಱು ತನುವಿನ
ಮುಲುಕಿನಂತಿರಲೊಂದಱಿಂದೊಂದು ಪಿರಿದಾಗಿ
ಲಲಿತವಸ್ತ್ರ[೬]ತ್ರಯವನೊ[೬]ಂದಿಸಿ
ಬಳಿಕಲವಱೊಳಗಿಷ್ಟಲಿಂಗವ
ನಿಲಿಸುವ[೭]ನೆ [೮]ಶಿವಭಕ್ತ[೮]ನಹನೈ ಬಸವ[೭] ಕೇಳೆಂದ ॥ ೨೩ ॥

೧. ತೆ (ಲ.) ೨. ಪಮು (ಅ.); ಪನ (೦.ಕ,ಗ.) ೩. ವಧರಿ (ಅ,ಕ,ಚ.)
೪. ಪ್ರದೀ (ಉ.) ೫. ಕೆಡಿರಲ್ (ಗ.) ೬. ಪ ತನ್ನಿಳಿತ (ಉ.) ೭. ವನೇ ಭಕ್ತನೈ ಬಸವಣ್ಣ (ಇ.) ೮. ಕೃತಕೃತ್ಯ (ಬ,ಜ.)

ಪರಿವಿಡಿಯಲಿಂತಿಷ್ಟಲಿಂಗವ
ನಿ[೧]ರಿಸಿ ಗಂ[೨]ಟಿರಡೆ[೨]ರಡನಿಂತೀ
ಪರಿಯಲಿಕ್ಕುವುದೆರಡು ವಸ್ತ್ರಕೆ ಮೇಲುವಸ್ತ್ರವನು
ನಿರುತ ತನ್ನಂಗ[೩]ದಲಿ ಬಿಡದವ[೩]
ಧರಿಸಿಕೊಂಡಿರಬಲ್ಲನಾದೊಡೆ
ಪರಮಭಕ್ತಿಯನಱಿವನಾತನು ಬಸವ ಕೇಳೆಂದ ॥ ೨೪ ॥

ಮೂಱು ತನುವಿನಲಾ ಷಡುಸ್ಥಳ
ತೋಱುವಂತಿರೆ ಮೂಱು ವಸ್ತ್ರವ
ಬೇಱ[೩] ಮಾಡದೆ ಬಲಿದ ಬಳ[೪]ಕಿ[೪]ಡಿದಾಱುಗಂಟುಗಳು
ಮೀಱಿದಳವಡುತಿರ್ದುವಾದೊಡೆ
ಸಾಱಿ ಶಾಶ್ವತಭಕ್ತಿ ನೆಲೆಗೊಂ
ಡೇಱಿ ತೊಡಗುವುದಾತನಲಿ ಬಸವಣ್ಣ ಕೇಳೆಂದ ॥ ೨೫ ॥

ಅಂಗವಿಸಲೀ ಪ್ರಾಣವಿದು ಶಿವ
ಲಿಂಗಪದಕೆ ತನುತ್ರಯಂಗಳ
ಸಂಗ್ರಹವೆ ವಸ್ತ್ರತ್ರಯಂಗಳು ಸಲೆ ಷಡುಸ್ಥಲದ
ಇಂಗಿತದಲಾ ಗ್ರಂಥಿಗಳು ವ
ಸ್ತ್ರಂಗಳಲಿ ಬಲಿದಂಗದಲಿ ನಿಲೆ
ಲಿಂಗಪದವನು ಕಾಂಬನಾತನು ಬಸವ ಕೇಳೆಂದ ॥ ೨೬ ॥

ಲಿಂಗವೇ ಪ್ರಾಣಸ್ವರೂಪೆಂ
ದಂಗವಿಸಿ ತಾನೋತು ಬಳಿಕಾ
ಲಿಂಗವನು[೫] ಬೇಱೂರಿಸಲಾಗದು ಭಕ್ತಿಭಾವುಕರು[೫]
ಅಂಗಸಂಗ[೬]ದಲಗಲವಂತಿರೆ[೬]
ಲಿಂಗಧಾರಣವಾದುದಾದರೆ
ಮಂಗಳಾತ್ಮಕನಾತನೇ ಬಸವಣ್ಣ ಕೇಳೆಂದ ॥ ೨೭ ॥

೧. ಧ (ಚ.) ೨. ಟುಗಳೆ (ಅ.); ಟಡಲೆ (ಉ.) ೩. ದೊಳು ಲಿಂಗವ (ಉ.) ೪. ವಿ (ಇ, ಕ.) ೫. ತಾ ಲಿಂಗಲಾಗದು ಸಂಗಸಮರಸವಿ (ಇ.) ೬. ದಿ ಲಿಂಗದಿ ದೊರ್ಡೆ (ಇ.)

ಪ್ರಾಣಲಿಂಗಕೆಯಿಷ್ಟಲಿಂಗ[೧]ದ[೧]
ಣಿಸಿದ ಷಡುರುಚಿಯ ದ್ರವ್ಯ
ೀಣಿಯನು [೨]ನೆಜು[೨] ಲಿಂಗನೆನಹಿನೊಳಿತ್ತು ತನ್ನೊಳಗೆ
ಾಣದಾ ಸಂತುಷ್ಟಿ ಸೌಖ್ಯ
್ರಾಣವ[೩]ನು ಮಿಗೆ ತೃಪ್ತಿಲಿಂಗಕೆ
ಣಿಕೆಯಲೀವವನು [೪]ಚದುರ[೪]ನು ಬಸವ ಕೇಳೆಂದ ‖ ೨೮ ‖

ವರಸಮಾಧಿಯಲೊಳಗೆ [೫]ಫಲಿ[೫]ಸುವ
ಿಯಲೀ ಗುರುಲಿಂಗಜಂಗಮ
ರುಣಿಸಿದ ಪಾದೋದಕವನಾ ಸುಪ್ರಸಾದವನು
ಿಸುತಿರ್ದೊಡೆ [೬]ಸತ್ಯ[೬] ಭಕ್ತಿಯ
ರುಟವಣೆಗಧಿಕಾರಿಯಾಗಿಯೆ
ರಮಪದವಿಯ ಪಡೆವನೈ ಬಸವಣ್ಣ[೭] ಕೇಳೆಂದ ‖ ೨೯ ‖

ಇಷ್ಟಗುರುವಿಗೆ ತನುವ ಸಲಿಸುತ
ಷ್ಟಲಿಂಗಕೆ ಮನವ ಸಲಿಸುತ
ಷ್ಟಜಂಗಮಕರ್ಥವನು ಸಲೆ ಸ[೮]ಲಿ[೮]ಸ ಕಲಿತಂಗೆ
ಷ್ಟ[೯]ವಹ[೯] ಗುರುಲಿಂಗಜಂಗಮ
ೀಷ್ಟವಾಗಿಯೆ ತನ್ನೊಳಗೆಯು
ಷ್ಟವಾಗಿಯೆ ಕಾಣಿಸುವುದೈ ಬಸವ ಕೇಳೆಂದ ‖ ೩೦ ‖

ಇದ್ದ ನೆಲೆಗಳವಡುವ ಭಕ್ತಿಯ
ಶ್ರದ್ಧೆಯಲಿ[೧೦] ವಿತ್ತಾನುಸಾರದ
ಉದ್ದಿಗೆಯನಜುವದಜುದು ನಿರ್ವಂಚನೆಯನನುಕರಿಸಿ
ುದ್ಧಿಯಲಿ ತನುಮನದ ತವಕವ
ದ್ದಿ ತ್ರಿಳಿ[೧೧]ದ[೧೧]ಳವಟ್ಟೊಡಾತನೆ
ದ್ಧ ಭಕ್ತಿಯನಜುವನೈ ಬಸವಣ್ಣ ಕೇಳೆಂದ ‖ ೩೧ ‖

ಕೆ (ಅ.) ೨. ಶಿವ (ಜ.) ೩. ಶ್ರೇಣಿಯ (ಇ.) ೪. ಭಕ್ತ (ಇ.) ೫. ಬೆರ
ು.); ಸಲಿ (ಗ.) ೬. ಯುಚ್ಚ (ಗ.) ೭. ಸೆರಿವನೆನ್ನನು ಬಳಿಕಲಾತನು ಬಸವ
.) ೮. ವೆ (ಜ.) ೯. ಪಲಿ (ಇ.) ೧೦. ಸಿದ್ಧಿಯನು (ಉ.) ೧೧. ವ (ಉ.)

ದಿಟ ವಿಚಾರಿಸಲಿಷ್ಟಲಿಂಗದ
ಘಟಣೆಯೆಂ[೧]ಬುದು[೧] ಸರ್ವಸಂಗವ
ಸಟೆಮುಟಿಸಬೇಕಾಗಿಯಂತರ್ಮಾರ್ಗದೊಳವರಿಗೆ
ಪಟುವೆನಲು ಪತಿಯಾಗಿ ಮಾಯೆಯು
ನಟಣೆಯನು ನೈ[೨]ವಾರಿಸು[೩]ವ[೪] ಸಂ
ಘಟಕೆ ಸಾಧನವೆನಿಸುವುದು ಬಸವಣ್ಣ ಕೇಳೆಂದ ॥ ೩೨ ॥

ಅದು ನಿಮಿತ್ತದಲಿಷ್ಟಲಿಂಗವೆ
ಮೊದಲು ಬೇಹುದು ನಿತ್ಯನಿರ್ಮಲ
ಪದವ ಪಡೆದಹೆನೆಂಬ ಪಾವನಬುದ್ಧಿವಂತಂಗೆ
ಹೃದಯದೊಳಗಾ ಪ್ರಾಣಲಿಂಗದ
ಹದನನಱವೊಡೆ ಸಚ್ಚಿದಾನಂ
ದವಲಿ ನಿಲುವೊಡೆ ಮುಖ್ಯವಿದು ಬಸವಣ್ಣ ಕೇಳೆಂದ ॥ ೩೩ ॥

ತನ್ನ ತಾನಿಂತಱವ ಭಕ್ತಿಯ
ಬಿನ್ನಣವ ತಾನಱಯಲಱಯದೆ
ಭಿನ್ನಭಾವಭ್ರಮೆಯಲೊಂದಾನೊಂದು ಕಲ್ಪನೆಯ
ಗನ್ನ[೪]ಗತಕದೊಳಿದ್ದನಾದೊ[೪]ಡೆ
ಮುನ್ನಿನಿಂ ಮಿಗಿಲಾಗಿ ಭವದೊಳು
ಬನ್ನಬಡುತಿಹನಾತನೈ ಬಸವಣ್ಣ ಕೇಳೆಂದ ॥ ೩೪ ॥

ಶಿವಯುತರ ಸಂಗವನು ಮಾಡದ
ಶಿವಯುತರ ಸಂಗತಿಯ ಕೇಳದ
ಶಿವಯುತರ ನವಿದೊಕ್ಕುಮಿಕ್ಕುದ ಹಾರಿಕೊಂಡಿರದ
ಶಿವಯುತರ ನೆಱಸಂಜೆ ಸಜ್ಜದ
ಶಿವಯುತರ ದಾಸೋಹಿಯಾಗದ
ಭವವಿಕಾರಿಗೆ ಭಕ್ತಿಯಹುದೇ ಬಸವ ಕೇಳೆಂದ ॥ ೩೫ ॥

೧. ಜೀ (ಉ.) ೨. ಕೈ (ಅ. ಉ, ಗ.) ೩. ತ (ಉ.) ೪. ಘಾತಕತನದಲಿದೊರ್ದ (ಅ, ಮು.)

ಕಾಲನಿಯಮಗಳೆಂಬ ಕರ್ಮದ
ಕಾಲಸರ್ಪನ ಬಾಯ್ಗೆ ಸಿಲ್ಕುವ
ಕೀಲಕೀಲಗಳೆಂಬ ಶೂಲಕೆ ಸಿಕ್ಕಿ ನೋಯುವಾಗಿನ
ಹಾಳು ಸಂಕಲ್ಪವ್ರತಂಗಳ
ಕಾಳುಕಿಚ್ಚಿನಲುರಿವ್ರತಿಹ ದು
ಕೀಲವಂತಗೆ ಭಕ್ತಿಯಹುದೇ ಬಸವ ಕೇಳೆಂದ || ೩೬ ||

ವಂದನೆಗೆ ಮೈಗೊಟ್ಟು ನಿಲ್ಲದೆ
ನಿಂದೆಗೆಡೆಗೊಟ್ಟೋಡಿ ಹೋಗದೆ
ಬಂದ ತಾಗು-ನಿರೋಧದಲಿ ಕಳವಳಿಸಿ ಕಂಗೆಡದೆ
ಹಿಂದು ಮುಂದಣ ನೆರವ ಹಾರದೆ
ನಿಂದ ಧೀರೋದಾತ್ತರಿಗಲ್ಲದೆ
ಹಂದೆಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೭ ||

ಭುಲ್ಲಸಣೆಯಲಿ ಮಾತನಾಡಲು
ಬಲ್ಲೆನೆನುತಲಿಂಪನುಭವಂಗಳ
ಸೊಲ್ಲುಸೊಲ್ಲಿಗೆ ಪಾತ್ರಿಸಿ ಬಗೆ ಪಾತ್ರತನದಿಂದೆ
ಡೊಳ್ಳುಗಳೆದನ್ಯರನು ಬಿಗೆ ಪಾವ
ಪಲ್ಲಿ ಪೆಬ್ಬನೆ ಬೆಜಾತ್ರ ಬೀಗುವ
ಖುಲ್ಲಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೮ ||

ಕೋಪಮುರಿಯಲಿ ಕೊಳಗ ದರ್ಪದ
ತಾಪದಲಿ ಲಯವಾಗಿ ಮತ್ಸರ
ಕೂಪದಲಿ ಕುಕ್ಕುರಿಸಿ ಡಂಬಿನ ಸೀಮೆಯಲಿ ಸಿಲುಕಿ
ಲೋಪಬುದ್ಧಿಗೆ ಲೋಲನಾಗುವ
ಪಾಪರಾಧದಲುಕ್ಕಿ ಸೊಕ್ಕುವ
ಪಾಪಿಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೯ ||

೧. ದ (ಕ, ಜ.) ೨. ಬಿ (ಅ.) ೩. ದಾತ್ತ (ಮು.) ೪. ಕ (ಉ.)

ಗುರುವೆ ನೀವೀ[1] ಪೇಳ್ದ ಮಾರ್ಗ[2]
ಚರಣೆಯನು ಕೇಳಿದೊಡೆ ಸಾಲದೆ
ಪರಿಪಡಿಯಸಿ[3]ದನೆಲ್ಲ ಮುಟ್ಟಲಿ ಮಾಡುತಿರಬೇಕು
ಪರಿಕಿಸಲು ಸಾಪಲ್ಲಿ ಪರಿಯಂ
ತರವು ಸಾಧನೆ ಮಾಡಿ ಸಮರಕೆ
ಗರುಪನಸಹ ದಿನವಿಸ್ನ ದಾವುದು ದೇವ ಹೇಳೆಂದ ॥ ೪೪ ॥

ಈಸುವನು[4] ವನು ಕೇಳಿದರೆ ಮೇ
ಣೇಸು ದಿನ ತಾ ಕಂಡರೇನ
ಭ್ಯಾಸಿಯಾಗದೆ ಯಾರು ತೇಲುವ [5]ತೆಜನ ತಿಳಿವವರು
ಗಾಸಿಯಾಗದೆ ತನುಮ[6]ನದ ಮೇ
ಲಾಸೆ ಹಿಂಗದೆ ಭಕ್ತಿಮಾಡದೆ
ಹೂಸಿಹುಂಡನಲೇನು ಫಲವೈ ಬಸವ ಕೇಳೆಂದ ॥ ೪೫ ॥

ಹೊನ್ನಿನೊಳಗೊಂದೊರೆಯ ವಸ್ತ್ರದ
ಮನ್ನಣೆಯಲೊಂ[7]ದೆಳೆಯನಥವಾ[8]
ಧಾನ್ಯದೊಳಗಣುಮಾತ್ರವೆನಗೆನ್ನವರಿಗಿರಲೆಂಬ
ದೈನ್ಯತೆಯಲಾ ಜಂಗಮವನತಿ
ಮನ್ನಿಸದೆ ಮಲೆತಿರ್ದನಾದೊಡೆ
ನಿನ್ನ ಪಾದಕೆ ದೂರನಾನಹೆ ದೇವ ಕೇಳೆಂದ ॥ ೪೬ ॥

ಕನಕಗಿರಿ ರಜತಾದ್ರಿ ಹಾಲಿನ
ವನಧಿ ಸುರಕುಜ ಕಾಮಧೇನುಗ
ಳಿನಿತು ನಿರುಪಮದಷ್ಟಮಹದೈಶ್ವರ್ಯ[9] ಮೊದಲಾದ
ವಿನುತವಸ್ತುಗಳೆಲ್ಲವಾ ಲಿಂ
ಗನವು ಪ್ರಮಥರವಕಟ ಮರುಳೇ
ನಿನಗವೆಲ್ಲಿಯವೇನ್ ನಿತ್ರ್ಯ ಬಸವ ಕೇಳೆಂದ ॥ ೪೭ ॥

೧. ನೀನೆ (ಎ.) ೨. ಪರಿಯ ಪೇಳ್ದ (ಅ.) ೩. ಲಿ (ಆ, ಉ, ಓ, ಕ, ಖ, ಎ, ಏ.)
೪. ಈಸುದಿನ (ಜ.) ೫. ನಾನು ಪೇಳಿದ (ಜ.) ೬. ಧ (ಕ.) ೭. ಬಣ್ಣದೊಳಗೊಂ
(ಇ, ಜ, ಮು.) ೮. ನಾ ಧನ (ಅ, ಜ.) ೯. ವಿನುತ (ಎ.)

ದೇವ ನಾನಾ ಪರಿಗಳಲಿ ಮೋ
ಣಾವ ಮುಖದಲಿ ಬಂದು ಬೇಡಿದೊ
ಡೀವೆ ನೀ ದಣಿವಂತೆಯೆನ್ನಯ ಧನವ ತನು ಮನವ
ಈ ವಿಚಾರಕೆ ಹುಸಿದೆನಾದೊಡೆ
ಭಾವಿಸಲು ಬಳಿಕಾನೆ ನಿನ್ನಯ
ಸೇವೆಗತಿ ದೂರಸ್ಥನೈ ಗುರುರಾಯ ಕೇಳೆಂದ ॥ ೪೮ ॥

ಧನವ ಕೊಟ್ಟೆನು ತನುವ ಕೊಟ್ಟೆನು
ಮನವ ಕೊಟ್ಟೆನು ಕೊಟ್ಟೆನೆಂಬೀ
ಬಿನುಗು ಬಿಂಕವನಾಡಲಾ ಧನತನುಮನಂಗಳನು
ನಿನಗೆ ಕೊಟ್ಟವರಾರು ನೀನಾ
ರ[1]ಸಿತನಱಿಯದೆ ಬಱಿದೆ ನುಡಿವುದು
ನಿನಗಿದುಚಿತವೆ ಬಸವದಂಡಾಧೀಶ ಕೇಳೆಂದ ॥ ೪೯ ॥

ಅಂತು ಕಾರಣವಿ[2]ದನು[2] ಹಮ್ಮಿನ
ಭ್ರಾಂತಿಯನು ಬಱಿದೆನಿಸಿ ತಾನೋ
ರಂತೆ ನಿಜನಿರ್ಲೇಪಭಕ್ತಿ[3]ಯನಱಿಯಬೇಕಾಗಿ[4]
ಮುಂತೆ ಕಾಣಿಸುವಿಷ್ಟಲಿಂಗದ
ಚಿಂತೆಯಲಿ ಚಿ[5]ರನಾ[6]ಗಿ ತನ್ನಯ
ಚಿಂತಿತಾರ್ಥವ ಹಡೆಯಬೇಹುದು ಬಸವ ಕೇಳೆಂದ ॥ ೫೦ ॥

ದೇವ ಬಿನ್ನಹವಿಷ್ಟಲಿಂಗದ
ಸೇವೆಯನು ಸಲೆ ಮಾಡುತ್ತಿದ್ದರೆ
ಭಾವಿಸಲು ಶಿವಭಕ್ತನಹಪರಿ ಬಳಿಕಲಹುದೆಂದು
ನೀವು ಚಿತ್ತೈಸಿದಿರಿ ದಿಟವಿ
ನ್ನಾವ ಪರಿಯಲಿ ಭಕ್ತಿಯನುವನು
ತೀವಿ ತಿಳಿವಂತೆನಗೆ ಪರಗುರುರಾಯ ಪೇಳೆಂದ ॥ ೫೧ ॥

೧. ಮರುಳೆ ಇ (ಇ.); ನೀನಿಂತಿ (ಜ.) ೨. ದ್ಧ (ಎ.) ೩. ವೃತ್ತಿ (ಅ, ಜ.)
೪. ಬಗೆಯನನುಕರಿಸಿ (ಅ, ಜ.) ೫. ಷ್ಟ (ಉ.) ೬. ಚಿರಗ (ಅ, ಖ, ಗ, ಜ.)

ಕುಸುಮ ಸೌರಭವಿಂತುಟೆಂದಾ
ರುಸುರಬಲ್ಲರು ತುಂಬಿಯೊಳು ಭಾ
ವಿಸಲು ಭಕ್ತಿಯ ಮಾರ್ಗವಂತಿಂತೆಂದು ನಿನ್ನೊಳಗೆ
ಬೆಸಸ ಬಲ್ಲವರಿಲ್ಲವೈ ಪರಿ
ಕಿಸಲು ನೀನೇ ಪರಮಪುರುಷನು
೧ಬಸವ ಕೇಳೆನುತಲ್ಲಮಪ್ರಭುರಾಯನಿಂತೆಂದ೧ || ೫೨ ||

ಕೇಳಿದೈ ಬಸವಣ್ಣ ಮೊದಲಲಿ
ಕೋಲುವಿಡಿದಭ್ಯಾಸ ಮಾಡಿಯೆ
ಮೇಲೆ ರಣರಂಗದಲಿ ಕೈದುವ ಹಿಡಿದು೨ ಹಗೆಗಳನು
ಸೋಲಿಸುವನಂತಿಷ್ಟಲಿಂಗವ
ಕೀಲಣೆಯನಱಿದಲ್ಲದಾಗದು
ಹೇಳುವೊಡೆ ಶಿವಭಕ್ತಿಯದು ಸಾಮಾನ್ಯವಲ್ಲೆಂದ೩ || ೫೩ ||

ಗುರುವೆಯಮೃತವನುಂಡ ಬಳಿಕೇ
ನರುಚಿಯುಱುದಿಂಗಳಿಗೆ ಹೋಹುದೆ
ಸುರುತ ನಿನ್ನ ಕಟಾಕ್ಷವಿ೪ಕ್ಷೇಪಂಗಳಿನ್ನೊಳಗೆ
ಬೆರಸಿ ಬಳಿಕಿನ್ನೆಲ್ಲಪರಿಯಂ
ತರವು ಕಾಲಕ್ಷೇಪವನು ವಿ
ಸ್ತರಿಪ ಕಾರಣವಾವುದೈ ಪ್ರಭುರಾಯ ಹೇಳೆಂದ || ೫೪ ||

ಶಶಿಕಳಾಲಂಕಾರವೆಂತಾ
ಶಶಿಧರಂಗಳವಟ್ಟುದಂತಾ
ಶಶಿಕಳಾಮೃತಸೇವನಾಸದ್ಭಕ್ತಿಸಾರಾಯ
ಬಸವ ನಿನಗೊಚ್ಚತವಲಾ ಭಾ
ವಿಸಲು ಬಳಿಕಿನ್ನಾರಿಗದು ವೇ
ದಿಸುವುದೇ ಕೇಳೆನುತಲಾ ಪ್ರಭುರಾಯನಿಂತೆಂದ || ೫೫ ||

೧–೧. ಅಸಮಸೌಖ್ಯದ ಶರಣಸಮುದ್ಯ ಬಸವ ಕೇಳೆಂದ (ಅ.) ೨. ಕೊಂದು (ಜ.)
೩. ತವಸಲ್ಲ (ಬ, ಜ.) ೪. ಸಿ (ಅ, ಆ, ಬ, ಗ, ಜ.)

ನಿನ್ನ ಹೆಸರನು ಕೇಳಿದೊಡೆ ಪೇಳ್
ನಿನ್ನ ಮೂರ್ತಿಯ ನೋಡಿ ಕಂಡೊಡೆ
ನಿನ್ನ ನೆನೆದೊಡೆ ನಿನ್ನ ನೆಱಿದೊಡೆ[1] ನಿನ್ನ ಹೊಗಳಿದೊಡೆ
ನಿನ್ನ ಭಜಿಸಿದೊಡವರು ಭಕ್ತಿಯ
ಬಿನ್ನಣವನಱಿದೈಕ್ಯರಹರೆನೆ[2]
ನಿನ್ನ ಮಹಿಮೆಯನೇನನೆಂಬೆನು ಬಸವ ಕೇಳೆಂದ ‖ ೫೬ ‖

ಹುಸಿವುದೇ ಕೈ ನೆಲನ ಹೊಯ್ದರೆ
ಹುಸಿವುದೇ ಕಣ್ ಗಿರಿಯನೆಚ್ಚೊಡೆ
ಹುಸಿವುದೇ ಕೇಳ್ನಿನ್ನನಱಿದಹೆನೆಂಬ ನಿನ್ನಱಿವು
ಹುಸಿಯಲಱಿವುದೆ [3]ನ[4]ನ್ನ ಕಾರಣ
ವಸುಮತಿಗೆ ನೀ[5] ಬಂದೆಯದಱಿಂ
ಹುಸಿಯ ಮಾಯೆಯ ಹುಸಿಸಿ ತೋಱುವೆ ಬಸವ ಕೇಳೆಂದ ‖ ೫೭ ‖

ಈ ತೆಱದೊಳ[6]ಱಿ[7]ದಿಷ್ಟಲಿಂಗ
ಪ್ರೀತಿಮಾರ್ಗಾಚಾರವನು ವಿ
ಖ್ಯಾತಿಯುತ[8] ಬಸವಣ್ಣ ಮೊದಲಾದಖಿಳಭಕ್ತರಿಗೆ
ಓತು ನಿಯಮಿಸಿ ನಿರ್ವಿಕಾರದ
ನೀತಿನಿಷ್ಠೆಯ ಭಕ್ತಿಮಾರ್ಗದ
ರೀತಿನಾಯಕನೊಪ್ಪುತಿರ್ದನು ಗುರು ಗುಹೇಶ್ವರನು ‖ ೫೮ ‖

**ಅಂತು ಗತಿ ೧೬ಕ್ಕಂ ಪದ ೭೨೯ಕ್ಕಂ ಮಂಗಳಂ**

೧. ಭಾವಿಸಿ (ಅ, ಪ.) ೨. ದೈ (ಉ, ಕ, ಗ.) ೩. ಯುಮ (ಇ, ಖ) ೪. ನಿ (ಇ, ಉ, ಚ.) ೫. ನಾ (ಇ, ಉ, ಚ.) ೬. ನನ (ಅ, ಬ, ಗ, ಚ, ಜ.) ೭. ಕೊಲಿ (ಉ, ಖ.); ನನೊಲಿ (ಕ, ಎ.) ೮. ತನಗ (ಜ.)

# ೧೭ ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನವಾದ ಗತಿ

ಸೂಚನೆ:

ಶರಣರೊಳ್ಳಿಯೊಲು ಪ್ರಾಣಲಿಂಗಾ
ಚರಣೆಯಲಿ ಮಹಾದೇವಿಯಕ್ಕಗೆ
ಕರುಣಿಸಿಯೆ ಕಳುಹಿದನು ಸಮ್ಮಯ ಗುರು ಗುಹೇಶ್ವರನು

ಇಷ್ಟಲಿಂಗದ ಮಾರ್ಗದಲಿ ಸಂ
ಷ್ಟರಾಗಿ ಶಿವಾನುಭಾವದ
ೀಷ್ಟಿಯನು ಸಲೆ ಕೇಳಿ ಕೇಳಿ ಮನೋನುರಾಗದಲಿ
ಷ್ಟದುರ್ವಾಸನೆಯ ನೀಗಿ ವಿ
ಷ್ಟವೆನಿಪಾ ಪ್ರಾಣಲಿಂಗದ
ಷ್ಕರಪ್ಪರು ತಿಳಿವುದೀ ಪ್ರಭುಲಿಂಗಲೀಲೆಯಲಿ ‖ ೧ ‖

ಗುರುವನಜಸುವೆನೆಂದು ತಿಜ್ರನೆ[೧]
ುಗಿದಳು ಗಿರಿಗಹ್ವರಂಗಳ
ರುವನಜಸುವೆನೆಂದು [೨]ತೊಟ್ಟನೆ ತೊಳಲಿದಳು[೩] ಧರೆಯ
ರುವನಜಸುವೆನೆಂದು ಕಾಯವ
ಗುತಿರ್ದಳು ಕಾತರಿಸಿ ಸದ್
ರುವನಜಸುವ ವೇಧೆ[೪]ಯಲಿ ಮೊಜೆ[೫]ದಳು ಮಹಾದೇವಿ ‖ ೨ ‖

ಹೊಂಪ್ರಳಿಯ ಘನಸೌಖ್ಯ ಪಿಕ್ಕಳಿ
ಪುಗಳ[೬]ಲಿಲ್ಲೆನುತೆ ತನ್ನೊಳು
ಂಪಿಸುವ ಮನವೆಂಬ[೭] ತುಂಬಿಯು ಭಾವ ಪಿಗೆ ತುಂಬಿ
ಪಗೆಯ ಸಾರ್[೮]ವಂತೆ ಬಂದಳ
ಪಿನಲಿ ಮಾದೇವಿ ಮುಕ್ತಿಯ
ಂಪ್ರ ಶೋಭಿಸುವಲ್ಲಮಪ್ರಭುರಾಯನಿದ್ದೆಡೆಗೆ ‖ ೩ ‖

ತೊಟ್ಟನೆ (ಎ,ಬಿ.) ೨. ತಿಜ್ರನೆ ತಿರುಗಿದಳು (ಎ); ತಿಟ್ಟನೆ ತಿರುಗಿದಳು (ಬಿ.)
ವೇಧೆ (ಎ) ೬-೭. ಪೂಜಿಂದೆ ಪೂಜಿಸು ಹೊಂಪ್ರಳಿಯನಿಕ್ಕಿದಳು [illegible] (ಕ.)
[illegible] (ಕ.ಜ.)

೧ಜಜಲುಗೊಂಡವನಿದಿರ೧ಲಿ೨ಮೃತದ
ತೊಱೆಯನೇ ಕಂಡಂತೆ ಕುರುಡಗೆ
ನೆಱೆವ ಕೂದಲಿ೩ ಕೂಸವಲ್ಲಭ ಕಂಗಳಾ೪ದಂತೆ
ನೆಱೆ ನಿರಂತರ ನಿರ್ವಿಕಾರದ
ನಿಜಾಂಗಯುಮಲಜ್ಞಾನವನು ಕ
ಣ್ಬೆಳಸುವಾ ಪ್ರಭುರಾಯನನು ಕಂಡಳು ಮಹಾದೇವಿ || ೪

ನೋಡಿ ಕಂಡಳು ನೇದಗೆತ್ತಿ ನೈ
ನೀಡಿವರೆ ಕೈ ನಿಲುಕದಾತನ
ಹಾಡಿ ಹೊಗಳುತ್ತಲೊಡಲನೀಡಾಡಿದಳು ಚರಣದಲಿ
ಕೂಡಿ ಶರಣೆನೆ ಶಿವಗಣಕ್ಕೆ ಕೈ
ಗೂಡಿ ಶರಣೆಂದೆನುತೆ ಭಕ್ತಿಯು
ಗೂಡು ತಾನೆಂಬಂತೆ ಕಾಣಿಸಿದಳು ಮಹಾದೇವಿ || ೫

ಬಸವ ನೋಡಾ ಭಕ್ತೆ ಬೇಟದ
ಬೆಸನದಲಿ ಮೈಮಱೆತು ಲಜ್ಜೆಯ
ಹೆಸರ ಹೆಮ್ಮೆಯು ಕೆಡಿಸಿ ತನುಮೋಹವನು ಪಲ್ಲಟಿಸಿ
ಹಸು-ತೃಷೆಯ ಹರವರಿಗಳನು ಭಂ
೭ಗಿಸಿ ದಿಗಂಬರೆಯಾಗಿ ಬಗೆ- ಕಾ
ಣಿಸುವ ಮಾಹೇಶ್ವರಿಯನೆನುತಾ ಪ್ರಭು ನಿರೀಕ್ಷಿಸಿದ || ೬

ಬತ್ತಲೆಯ ಬಗೆಗೊಂಡು ಹೆಂಗೂ
ಸಿತ್ತಲೇತಕೆ ಬಂದೆ ಕಾಮದ
ಕತ್ತಲೆಯು ಕಳೆಯದೆ ವೃಥಾ ವೈರಾಗ್ಯವೇಷದಲಿ
ಹತ್ತಿರಿದ್ದರೆ ನಮ್ಮ ಶರಣರು
ಚಿತ್ತದಲಿ ಕೆರಳುವರು ಕೇಳೆನು
ತೆಕ್ಕಿ ನೋಡಿದನಾಕೆಯಂತಸ್ಥವನು ೮ಪ್ರಭುರಾಯ || ೭

೧–೧. ಅರತ ತೃಷೆ ತರುಗಿರಿಯು(ಗ.) ೨. ಬಿರ್ದವಂಗೆ (ಇ.) ೩. ಸುಂದ
ರೋಮನ (ಇ.) ೪. ಕಾಣಬಂ (ಬ.) ೫. ದೇವ (ಕ.) ೬. ಭಕ್ತರಿಗೆ (ಗ.)
೭–೭. ಗಿಸುತೆನಿಗೆ ಗಂಭೀರತೆಯು (ಉ.) ೮. ತಃಕರಣ (ಇ.)

ಸಾರೆಯಲಿ ಶಿವ[೧]ಸಂಗ[೧]ವೆಂದೇ
ಹಾರವಿಸಿಕೊಂಡಿದ್ದೆನಂತದ
ದೂರ [೨]ದೂರವದೆಂದು ನೀನೇ ಪೇಳ[೨]ಸಿದೊಡೆನಗೆ
ಆರು ಕರುಣಿಸಿ ಕಾಣಿಸುವರೆನ
ಗಾರು ಗತಿಮತಿಯೆನುತೆ ಕರುಣಾ
ಕಾರಗಾ ಮಾದೇವಿ ಬಿನ್ನೈಸಿದಳು ಭಕ್ತಿಯಲಿ || ೧೩ ||

ಆರು ನನ್ನನು ತಿಳಿವೆವೆನುತಲಿ
ಸಾರೆಯೆಂದಿದಿರಿಟ್ಟು ನೋಡಲು
ದೂರವಾಗಿಹೆನಲ್ಲದಿರ್ದೊಡೆ ದೂರವೆಂದೆನಲು
ಸಾರೆಯಾಗಿಹೆನೀ ಪರಿಯನಿದ
ನಾರಿಗುಪಮಿಸಬಹುದು ಭಕ್ತಿವಿ
ಚಾರವನು ಬಸವಣ್ಣನಲಿ ಮಾದೇವಿ ಕೇಳೆಂದ || ೧೪ ||

ಎನ್ನಜೀವು ಬಸವಣ್ಣನೆನಗಾ
ಚೆನ್ನಬಸವನೆ ಗುರುವೆಲೈ ದಿಟ
ವೆನ್ನ ಲಿಂಗವೆ ನೀನು ಜಂಗಮವೆನಗೆ ರಾಮಯ್ಯ
ಎನ್ನ ತನುವೇ ಮಡಿವಳನು ನಾ
ನಿನ್ನು ಸುಖಿಯುಹುದೇನು ಸೋಜಿಗ
ನಿನ್ನ ದಾಸರ ದಾಸಿಯಾನೆಂದಳು ಮಹಾದೇವಿ || ೧೫ ||

ಲೋಕದೊಳು ಸತಿಜನ್ಮವನು ತಾ
ಸ್ವೀಕರಿಸಿ ತನುಮೋಹಲೋಭದ
ನೂಕಿ ನಿಸ್ಪೃಹೆಯಾಗಿ ನಿಲುವವರಾರು ಸೃಷ್ಟಿಯಲಿ
ಈಕೆಗಾರೆಣೆ ಶಿವ ಶಿವಾ ಎನು
ತಾಕೆಯನು ಬಸವಣ್ಣಮುಖ್ಯರ
ನೇಕಪರಿಯಲಿ ಹೊಗಳುತಿರ್ದರು ಶರಣು ಶರಣೆನುತೆ || ೧೬ ||

೧-೧. ಶಿವಲಿಂಗ (ಐ.); ಶಿವಪಥ (ಗ.) ೨-೨. [illegible] (ಇ.) ೩. [illegible] (ಕೆ ಆ. ಒ, ಜ, ಮು.) ೪. ಧರಣಿ (ಇ.)

ಕರಣಗಳು ಸಲೆ ಶುದ್ಧವಾದುವು
ಣರನು ನೆನೆನೆನೆದು ಸಂತತ
ಣರಿಗೆ ಶರಣೆಂದು ಕಾಯವುನೀತವುಯವಾಯ್ತು
ಣರಿಂದಾನಿಂದು ಶುಚಿ[1]ಯಾ
ಲು ತನುಮನಗಳ ವಿಕಾರದ
ರಕೆ ನಾನಂಜುವೆನೆ ಎಂದಳು ಮತ್ತೆ ಮಾದೇವಿ ॥ ೧೬ ॥

ಇಂತು ನಿರಹಂಕಾರದಿಂದೋ
ತಿ ಕಾಯಮನೋವಿಕಾರದ
ತತಿಯ ಸೈತಿಟ್ಟು ಪರಿಪಾಕಪ್ರ[2]ಭಾವ[3]ದಲಿ
ತಗೊಂಡು ಸಮಸ್ತಭಾವ
ಭ್ರಾಂತಿಯಳಿದೊಮ್ಮುಖವನೈದಿ ನಿ
ತರದಲತಿ ಮೆಜ[4]ವುತಿರ್ದಳು ಮತ್ತೆ ಮಾದೇವಿ ॥ ೧೭ ॥

ನೆರೆತೆರೆಗಳಿಡಿವಡರಿ[5] ತನು ಜ
ರಿತವಾಗಿಹುನೇಕದಿನದಲಿ
ಿಯುಹಿರೆಂದೆನಿಸಿವರೆ ಹಿರಿಯರೆ[6] ಜೆಟ್ಟಪಂದದಲಿ
ಿಮು ದಿನವಿರೆ ಹಿರಿಯರಹರೇ
ುತ ನಿರಹಂಕಾರವಿಲ್ಲದೆ
ಿಸುತನ ಮಾದೇವಿಗಾಯಿತ್ತೆಂಪುದಭವಗಣ ॥ ೧೮ ॥

ಬಳಿಕಲಾಕೆಯ ಚಿತ್ತವತಿ[?]ನಿ
ಳತೆಯಾದುದನಜುದು ತಾ ತ
ಳಗೆ ಸಂತೋಷಿಸುತೆ ಹೋ ಮಝು ಮಾಯೆ ಎಂದೆನುತೆ
ಮುಬೇಕೆಂಬೆನ್ನ ಕಾರಣ
ಳಿ ಬಳಲಿದಳಿನ್ನು ಕರುಣಿಸಿ
ಿಸಬೇಕೆಂದಲ್ಲಮಪ್ರಭುರಾಯನಿಂತೆಂದ ॥ ೧೯ ॥

ಸುಚಿ (ಕ, ಗ.) ೨. ಕೈಕ (ಇ.) ೩. ನಾದ (ಜ.) ೪. ಕಿಡಿದ (ಜ.); ಸಿ (ಗ.)
೫. ರಸಿಸಿಬಿಕೊಂಡು ಜೆಳಿದಿರೆ (ಗ.) ೬. ದಲಿ (ಇ, ಕ.)

ಆಯತವನಳವಡಿಸಿ ದಿಟವಾ
ಸ್ವಾಯತವನವಗಯಿಸಬೇಕೆಂ
ಬಾಯತಕೆ ಸರ್ವಾಂಗವನು ಸಲೆ ಸವೆದರಾರುಂಟು
ಬಾಯ ನುಡಿಗಳ ಚದುರರಲ್ಲದೆ
ಕಾಯದಲಿ ಕಲಿಯಾರು ಭಕ್ತಿಯ
ದಾ[1]ಯ ನಿನ್ನಲಿ ನೆಲಸಿತೌ ಮಾದೇವಿ ಕೇಳೆಂದ || ೨೦

ಹಾಲ ಹದದಲಿ ಹೆಪ್ಪನೆರ[2]ದರೆ
ಮೇಲೆ ತುಪ್ಪವನುಂಬರಾ ಪರಿ
ಹೇಳಬಲ್ಲೊಡ ನಿನ್ನ ನಿರ್ಮಳಭಾವಭೂಮಿಯಲಿ
ಲೀಲೆ ಮಿಗೆ ಶಿವತತ್ತ್ವಬೀಜವ
ಹೂಳಿದರೆ ಫಲಿಸುವುದೆನುತೆ ಕರು
ಣಾಳು ವರಗುರುರಾಯನಾ ಮಾದೇವಿಗಿಂತೆಂದ || ೨೧

ಆನು ನೀನೆಂಬುಭಯದನುಸಂ
ಧಾನವನು ಮಿಗೆ ಮೀ[3]ರಿ ಸಮಸಂ
ಸ್ಥಾ[4]ನದಲಿ ಸುಯಿಧಾನಿಯಾಗಿ ನಿರಾಳದಲಿ ನಿಂದು
ಜ್ಞಾನಜ್ಯೋತಿಯ ಬೆಳಗಿ ಕಾಯದ
ನೂನಕದಳಿಯ ಗೆಲಿ[5]ದು ನಿನ್ನಲಿ
ನೀನೆ ಮುಕ್ತಿಯನರ[6]ವುದೌ ಮಾದೇವಿ ಕೇಳೆಂದ || ೨೨

ಎನುತಲಾ ಮಾದೇವಿಯಕ್ಕಗೆ
ತನುಮನೋವಾಯುಗಳ ಸಂಚವ
ನನಲನಲಿ ಸಲೆ ಸುಡುವ ಸುಮತಿ[7]ಯ ಜೀವಪರಮರನು
ಅನುಗೊಳಿಸಿ ನಿರ್ಣಯವ ಮಾ[8]ಡುವ
ನೆನಹಿನುಪದೇಶವನು ಮಾಡಿದ
ನನುಪಮೋಪಮ ಸಗುಣನಿರ್ಗುಣ ಗುರು ಗುಹೇಶ್ವರನು || ೨೩ ||

೧. ಕಾ (ಉ.) ೨. ಕೊ (ಉ.) ೩. ಘಾ (ಉ.) ೪. ತಿಕೆ (ಕ. ಖ. ... ಉ.)
೬. ಸಮತಿ (ಇ, ಉ.) ೭. ಕ (ಇ.)

ಪರುಷ ಮುಟ್ಟಲು ಮುಂದೆ ಕಬ್ಬಿನ
ವರುಷದಲಿ ಹೊನ್ನಹುದೆ ನಿಮಿಷಕೆ
ಗುರುನಿರೂಪಜ್ಞಾನ[1]ಜ್ಯೋತಿಪ್ರಭೆ ಪ್ರಕಾಶಿ[2]ಸಲು
ಹರಿದುದಾಗಳೆ ಸಂದ[3] ಸಂಶಯ
ನೆರವಿಗತ್ತಲೆ ನಿತ್ಯ[4]ನಿರ್ಮಳ
ಗಿರಿಯ ಗಹನಕೆ ಗಮಿಸಿದಳು ಮಾದೇವಿ ಮನದೊಳಗೆ[5] ॥ ೨೪ ॥

ಎಲ್ಲರಲಿ ಶರಣಾರ್ಥಿಯೆಂದೆನು
ತೆಲ್ಲರಲಿ ಹರಕೆಯನು ಕೈಕೊಳು
ತೆಲ್ಲ ಶರಣರ ಚರಣವನು ನೆನಹಿನಲಿ ನೆಲೆಗೊಂಡು
ಬುಲ್ಲವಿಸಿ ವೈಮಣಿ[6]ದು ಪಸರಿಸಿ
ಪಲ್ಲವಿಸಿ ಮಾದೇವಿ ಬಳಿಕೆ
ಮ್ಯಲ್ಲಮಪ್ರಭುರಾಯನನು ಬೀಳ್ಕೊಂಡಳರ್ತಿಯಲಿ ॥ ೨೫ ॥

ನಡೆದು ಬಳಿಕೇಕಾಂತವಾಸದೊ
ಳಿಡಿದ ಕಾಯದ ಕದಳಿಯನು ಹೊ
ಕ್ಕಡರಿ[7] ನಿಜ ಸಿರಿಗಿರಿಯ ಶಿಖರದ ಸಿದ್ಧಪೀಠದಲಿ
ಬಿಡದೆ ನೆಲಸಿದಳಚಲಪದವಿಯ[8]
ಪಡೆದಳಾ ಮಹದೇವಿ ಸುಖದಲಿ[9]
ಪೊಡವಿಯುಜಿಯಲು ಗುರು ಗುಹೇಶ್ವರಲಿಂಗ ಲೀಲೆ[10]ಯಲಿ ॥ ೨೬ ॥

ಅಂತು ಗತಿ ೧೭ಕ್ಕೆ ಪದ ೭೫೫ಕ್ಕೆ ಮಂಗಳಂ

೧. ವಿಸಜ್ಞತೆಯಿಂದೆ (ಚ.) ೨. ಪಿಕಾಸಿ (ಅ, ಖ, ಗ, ಚ.); ವಿರಾಜಿ (ಇ, ಜ.)
೩. ಮಾನವ (ಗ.) ೪. ನೀಗಿ (ಕ.) ೫. ಮ (ಎ.) ೬. ಮರೆ (ಇ, ಉ.)
೭. ಗ (ಉ.) ೮. ದಲಿ (ಇ.) ೯. ವಸು (ಇ.) ೧೦. ನೊಲುವೆ (ಗ.)

# ೧೮ ಸಾಧಕಾಂಗದ ಗತಿ

**ಸೂಚನೆ:**

ಬಸವರಾಜಗೆ ಸಾಧಕಾಂಗದ
ಬೆಸುಗೆಯನುವಿನ ಭೇದವನು ಬೋ
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ

ಆರು[೧] ಮೊದಲಲಿ[೨] ಭಕ್ತಿ[೧] ಮಾರ್ಗದ
ದಾರಿಯನು ಸಲೆ ತೆರಹು ಮಾಡಿ ಮ
ನೋರಥವ ಹಡೆವವರು ಕಾಯದ ಕೀಲನರಿವವರು
ಕಾರಣಂಗಳ ಮೂಲವನು ಕ
ಣ್ಣಾರೆ ಕಾಬ ಮಹಾಂತ[೩]ರುಗಳವ
ಧಾರಿಪುದು ಮುದದಿಂದಲೀ ಪ್ರಭುಲಿಂಗ ಲೀಲೆಯನು ॥ ೧ ॥

ನಿಲಿಸಿ ನಿರ್ವಯಲಿನ ಸಮಾಧಿಯ
ನೆಳವಡಿಸಿ ಮಹದೇವಿಯಕ್ಕನ
ಕಳುಹಿ ತದನಂತರದಲಗ್ಗದ ಬಸವರಾಜಂಗೆ
ತಿಳುಹುವೆನು ಶಿವತತ್ತ್ವಭಕ್ತಿಯ
ಬಳಕೆಯನುಭಾವದ ವಿವೇಕ
ಸ್ಥಳವನೆಂದೆನುತಲ್ಲಮಪ್ರಭುರಾಯನಿಂತೆಂದ ॥ ೨ ॥

ಒಸೆದು ತಾ ಹಿಡಿದಿಷ್ಟಲಿಂಗದ
ಬೆಸನದಲಿ ಗುರುಲಿಂಗಜಂಗಮ
ವಶದಲಿಂತಿರುತಿರಲಿಕಂತಃಕರಣವೃತ್ತಿಗಳ
ಬೆಸುಗೆ ಬಿಡುವುದು ಪ್ರಾಣಲಿಂಗದ
ದೆಸೆಗೆ ಮನವೆಳಸುವುದು ಮಾಯೆಯ
ಮಸುಕನೆಲ್ಲವು[೪] ಮಾದು ಹೋಹುದು ಬಸವ ಕೇಳೆಂದ ॥ ೩ ॥

೧-೧. ಭಕ್ತಿಯು ಜ್ಞಾನ (ಹ.) ೨. ಕೆಳವರು (ಗ.) ೩. ಸಾತ್ವ (ಅ, ಬ, ಗ, ಜ, ಸಾ.)
೪. ಪಡುತಾ (ಉ.)

ದೇವ ಚಿತ್ತೈಸಾದೊಡಾನಿ
ನ್ನಾವ ಪರಿಯಲಿ ಭಕ್ತಿಭರಸಂ
ಭಾವಿಸುವೆನೈ ಸಹಜಭಕ್ತಿಯನಱಿವ ಪರಿಯೆಂತು
ಈ ವಿಕಾರವ ಕಳೆದು ಕಾಯ ಕ
ಳಾವಿಳಾಸವ ತಿಳಿದು ನಿಖಿಲ ನಿ
ರಾವಲಂಬವನೆಂತು[1] ಕಾಂಬೆನು ಗುರುವೆ ಹೇಳೆಂದ ॥ ೪ ॥

ಉಣ್ಣೆ ಕೆಚ್ಚಲಲೇಸುದಿನವಿ
ದ್ದಣ್ಣೆವಾಲುಣಬಲ್ಲುದೇ ಕೇ
ಳಿನ್ನ ಭಕ್ತಿದ್ವಾರವನು ಹುಗದನ್ಯಮಾರ್ಗದಲಿ
ಕಣ್ಣುಗಾಣದೆ ನಡೆದರದಱಲಿ[2]
[3]ನಿನ್ನ ನಸಾಪ್ರದು ಹುಸಿ ಕಣಾ ಬಸ
ವಣ್ಣ ಕೇಳೆನುತಲ್ಲಮಪ್ರಭುರಾಯನಿಂತೆಂದ[3] ॥ ೫ ॥

ಗಿಡುವಳುಕೆ ಹೂ ಪತ್ರೆಗೋಸುಗ
ಮಡು ನಡುಗೆಯುಗ್ಗವಣಿಗೋಸುಗ
ನೀಡಿದುಪಹಾರಕ್ಕೆ ಸಕಲೌಷಧಿ ವನಸ್ಪತಿಯ
ಕೆಡಿಸುತೀಪರಿ ಹೆಱರುಗಳ ತ
ನ್ನೊಡಲ ವಂಚಿಸಿ ಬಾಹ್ಯಭಕ್ತಿಯ
ನಡಸುವರ ನಾ ಮೆಚ್ಚೆನೈ ಬಸವಣ್ಣ ಕೇಳೆಂದ ॥ ೬ ॥

ತೇಗು ಬಿಕ್ಕುಳು ಸೀನು ಉದುಗರ
ನಾಗಳಿಕೆಯಾಲಸ್ಯ ಕೆಮ್ಮುಗ
ಳೋಗಡಿಕೆ ಮದ ನಿದ್ರೆ ತೂಕಡು ಕನಸು ಕಳವಳಿಕೆ
ಆಗುಹೋಗೆಂದೆಂಬ ಗೊಡವೆಯ
ನೀಗಿ ನಮ್ಮಯ ಸಿದ್ಧರಾಮನ
ಲಾಗಿನಂತಿರಬೇಕು ಭಕ್ತರು ಬಸವ ಕೇಳೆಂದ ॥ ೭ ॥

೧. ದು (ಅ, ಉ, ಮ.); ನನೊಡು (ಕ.) ೨. ವ ಮನುಜರು (ಜ.) ೩–೩. ಮುನ್ನಿನಿಂ ತಿರ್ಲಾಗ ಭವದಲಿ ಬನ್ನಬಡುತಿಹನಾತನೈ ಬಸವಣ್ಣ ಕೇಳೆಂದ (ಖ.) ೪. ದೊಡೆ ಪರಿಯೆ (ಉ.) ೫. ಮು (ಮ.)

ಉಸುರುಗರಗಸದಲ್ಲಿ ತನುವಿನ
ಬೆಸುಗೆಯನು ಬಿಡುವಾಡಿ ಬಿಸುಡದೆ
ಹಸುತೃಷೆಯ ಹರಿಹುಗಿಲಿನ[೧]ಪಟಳಕಂಜಿ ಮುಖಗೊಡದೆ
ದಶವಿಧೇಂದ್ರಿಯ ದಾಳಿಯುಲಿ ಶಂ
ಕಿಸದೆ ನಿಲುವೊಡೆ[೨] ಸಿದ್ಧರಾಮನ
ದೇಸೆಯ ನೆನೆಯಲು ಭಕ್ತರಹರೈ ಬಸವ ಕೇಳೆಂದ ॥ ೮ ॥

ದೇವ ದೇವ ಮಹಾಪ್ರಸಾದವಿ
ದಾವ ಶಬ್ದವ ಚಿತ್ತವಿಸಿದಿರಿ
ನೀವು ನಿಮ್ಮಯ ಕಿಂಕರರೊಳಿನ್ನಾರ ಹೋಲುವೆನು
ದೇವ ನೀ ಮನ್ನಿಸಿದೊಡಧಮನೆ
ಪಾವನಾತ್ಮಕನಲ್ಲದೊಡೆ ಜಡ
ಜೀವರಿಂದತಿಕಷ್ಟನೆಂದನು ಸಿದ್ಧರಾಮಯ್ಯ ॥ ೯ ॥

ಪರಮ ಪೂರ್ವಾಚಾರ್ಯ ಬಸವೇ
ಶ್ವರನು ಘನ ಗುರು ಚೆನ್ನಬಸವನು
ನಿರುಪಮಜ್ಞಾನೈಕ[೩]ನಿಧಿ ಮಡಿವಾಳ ಮಾಚಯ್ಯ
ವರ ಮಹಾಗಣ ತಿಂತಿಣಿ[೪]ಯೊಳನಿ
ಬರೊಳು ಗಣಿಸುವೊಡಾನದೇಸ[೪]ಜ
ಹುರುಳು ಹೇಳಾ ದೇವ ಎಂದನು ಸಿದ್ಧರಾಮಯ್ಯ ॥ ೧೦ ॥

ಪೂತು ಮಝುರೇ ಸಿದ್ಧರಾಮನ
ಮಾತು ತಪ್ಪದು ಭಕ್ತರುಪಮಾ
ತೀತರಹುದೈ ಬಸವ ಮಡಿವಳ ಚೆನ್ನಬಸವಣ್ಣ
ಈತಗಳು ಸಾಕ್ಷಾತ ಲೋಕ
ಖ್ಯಾತಪುರುಷರು ಸತ್ಯವೆನುತ ಪ್ರ
ಣಾತರನು ಮಿಗೆ ಹೊಗಳುತಾ ಪ್ರಭುರಾಯನಿಂತೆಂದ ॥ ೧೧ ॥

೧. ಪವರಿಗಳು (ಅ.) ೨. ನಿಮ್ಮಯ (ಅ.) ೩. ಜ್ಞಾನಸಂಪೈಕ್ಯ (ಜ.); ಕ್ಯ (ಗ)
೪-೪. ಯು ನಿ ಭರದೊಳಗೆ ಗಣಿಸುವೊಡನೇಕ (ಬ.)

ಆದಿಪುರುಷನು ಬಸವರಾಜನ
ನಾದಿಪುರುಷನು ಬಸವರಾಜನು
ನಾದಪುರುಷನು ಬಸವರಾಜನು ಬಸವರಾಜನನು
ವೇದಶಾಸ್ತ್ರಗಳಱಸ[೧]ಲಱಯದೆ
ಜೋದುವೆನುತಲಿ ಬಸವರಾಜನ
ನೆಯ್ದಿ ಹೊಗಳುತಲಲ್ಲಮಪ್ರಭುರಾಯನಿಂತೆಂದ ॥ ೧೨ ॥

ಆದೊಡಾಲಿಸಿ ಕೇಳು ಭಕ್ತಿಯ
ಹಾದಿಗೊಂದೇ ಕೀಲು ದಿಟ ಬೇ
ಕಾ[೨]ದುದೀ ತನು ತನು[೨]ವಿಡಿದು ಕಾಬುದು ಸಮಸ್ತ[೩]ವನು
ಆದರಿಸಿಯೀ ತನುವ ಲಿಂಗೋ
ಪಾಧಿಯಲಿ ಜೋಗ್ಯೈಸಿಕೊಳುತಲಿ
ಸಾಧಿಸುವುದು ಸಮಾಧಿಯನು ಬಸವಣ್ಣ ಕೇಳೆಂದ ॥ ೧೩ ॥

ಅನುಶ್ರವಣ ಮನನದ ನಿಧಿಧ್ಯಾ
ಸನದಲೊಚ್ಚತಸಾಗಿ ತನ್ನಯ
ತನುಮನೋವಾಕ್ಕಾಯಕರ್ಮಗಳೊ[೪]ಂದು ಹುರಿಯಾಗಿ
ನೆನಹು ನೆಲೆಗೊಂಡಾ ಮಹಾತ್ಮಗೆ
ಘನವದಾವುದು ಗಮಿಸಿದರೆಯಾ
ತನೆ ಕಣಾ ಸ್ವಾತಂತ್ರಭಕ್ತನು ಬಸವ ಕೇಳೆಂದ ॥ ೧೪ ॥

ತನ್ನೊಳಗೆ ಗುರುಲಿಂಗಜಂಗಮ
ತನ್ನೊಳಗೆ ಪಾದೋದಕಾಮೃತ
ತನ್ನೊಳಗೆ ಪರಮಪ್ರಸಾದ ಸಮಸ್ತವೆಲ್ಲವನು
ತನ್ನೊಳಱಯದೆಯಿದಿರೊಳಱಸುವ
ಭಿನ್ನಭಾವಭ್ರಾಂತಭವಿಗಳು
ನನ್ನ ಸಾಧಿಸಲಱಯರ್ರೈ[೫] ಬಸವಣ್ಣ ಕೇಳೆಂದ ॥ ೧೫ ॥

೧. ರಿಯ (ಕ.) ೨–೨. ಜೊಡೀ ತನುವಿಡಿದು ಕಾಂಬುದು ಸರ್ವವೆಲ್ಲ (ಇ.)
೩–೩. ವಿಡಿದು ಕಾಂಬುದು ಸುಖಸಮಸ್ತ (ಜ.) ೪. ವೆಲ್ಲವನೊಂ (ಇ.)
೫. ಬಲ್ಲರೇ (ಇ.)

ಅದು ನಿಮಿತ್ತದಲಂತರಂಗದ
ಪದರ[೧]ದೊಳು ಗುರುಲಿಂಗಜಂಗಮ
ದೊಡವನಾ[೨] ಪಾದೋದಕಾಮೃತ[೩] ಸುಪ್ರಸಾದವನು
ಹೃದಯದಲಿ ಕಾಂಬನ್ನಬರ ತ
ಪ್ಪಿದಿಱಸಲಿ ಪೂಜಿಪರೆಲ್ಲೈ ಪ್ರತಿ
ನಿಧಿಯ ನಿಯಮಿಸಿ ಪೂರ್ವಪುರುಷರು ಬಸವ ಕೇಳೆಂದ || ೧೬ ||

ವ್ಯಾಧಿಗಳ ನೆಱೆ[೩]ಗೆಲಿದು ಶೀತೋ
ಷ್ಣಾದಿಗಳ ಪರಿಹರಿಸಿ ತಾಗು ನಿ[೪]
ರೋಧವೆಲ್ಲವ ನೀಗಿ ನಿಂದಾಸ್ತುತಿಗೆ ಸಮನಾಗಿ
ಐದು ಮುಖದಲಿ ಹರಿವ ಮನವನು
ಸೇದಿ ನಿಶ್ಚಲವೆನಿಸಿ ಸತ್ಯಸ
ಮಾಧಿಯು[೫]ಲಿ ನಿಂದವನೆ ಭಕ್ತ[೫]ನು ಬಸವ ಕೇಳೆಂದ || ೧೭ ||

ಮನವನೊಬ್ಬುಳಿ ಮಾಡಿದಲ್ಲದೆ
ತನುವಿನೊಳಗನು ಕಾಣಬಾರದು
ತನುವಿನೊಳಗನು ಕಾಣದಿರ್ದೊಡೆ ಭಕ್ತಿರತಿಯಿಲ್ಲ
ವಿನುತ[೬]ಭಕ್ತಿಯು ರತಿಯು ಕಾಣದೆ
ಘನವನೆಯ್ದಲು ಬಾರದಂತಾ
ಘನವ ಬೆರಸದೆ ಮುಕ್ತಿಯಾಗದು[೭] ಬಸವ ಕೇಳೆಂದ || ೧೮ ||

ವಾರುವನನೇಱುವೊಡೆ ವಾಘೆಯ
ದಾರವನು ಹಿಡಿವಲ್ಲದಾಗದು
ಧೀರತನವಲಿ ಸಂಚಲಿಸುತಿಹ ಮನವ ನಿಲಿಸುವೊಡೆ
ಮಾರುತನ ಗತಿಗಡಿಸಿ ಕಾಯದ
ಕಾರಣವನಱಿದಲ್ಲದಾಗದು
ವೀರಶೈವದ ಬಟ್ಟೆಯಿದು ಬಸವಣ್ಣ ಕೇಳೆಂದ || ೧೯ ||

೧. ಸಪಸ (ಉ.) ೨. ವಧಿಕವಪ (ಇ.) ೩. ಕವನಾ (ಬ.) ೪. ವಿ (ಗ.)
೫–೫. ನೆ ಕಂಡವನು ಜಾಣ (ಜ.) ೬. ಇಸಿತು (ಬ, ಉ.) ೭. ಯಮುವೇ (ಇ.)

ಮಾಯೆಯೆಂಬುದು ಮನವು ಮನವೇ
ವಾಯುವಾಗಿಹುದಾ ಮನಸ್ಸೇ
ವಾಯುರೂಪಾಗಿರುತಲಿಹುದಾ ವಾಯು ಹರಿದಾಡಿ
ಕಾಯುವನು ಕಂಗೆಡಿಸಿ ಭಕ್ತಿಯ
ಛಾಯ ಕಾಣಿಸಲೀಯದಂತಾ[1]
ವಾಯುವನೆ ಗೆಲುವವನೆ ಭಕ್ತನು ಬಸವ ಕೇಳೆಂದ ॥ ೨೦ ॥

ಹೇಳುವೊಡೆ ಮನವೆಂಬ ಹಕ್ಕಿಗೆ
ಕಾಲುಗಳಿಲ್ಲೈ ತೊಳಲುತಿಹ ಕ
ಸ್ಸಾಲಿಗಳು ಬಿಟವದಕೆ ಪಕ್ಕಗಳಿಡೆ ಪಿಂಗಳನ
ಗಾಳಿಯಾಗಿಹುದಂತುಕಾರಣ
ವಾಲಿಯೇ ಸಾಧನಕೆ ಸಾಧನ
ಮೂಲವನು ನಿಲಿಸುವನೆ ಭಕ್ತನು ಬಸವ ಕೇಳೆಂದ ॥ ೨೧ ॥

ಆಲಿ ನಿಂದೊಡೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು
ಲೀಲೆಯಿಂದಾ ಬಿಂದು ನಿಂದೊಡೆ
ಕಾಲಕರ್ಮವ ಗೆದ್ದು ಮಾಯೆಯ
ಹೇಳಹೆಸರಿಲ್ಲಿಸಿಸಬಹುದೈ ಬಸವ ಕೇಳೆಂದ ॥ ೨೨ ॥

ಅಂಗಭೂಮಿಯಲನ್ನ ಬೀಜವ
ಲಿಂಗನೆನಹಿನಲಿಕ್ಕಿ[2] ಜಲಪಾ
ಸಂಗಳಿಂದವೆ ಸಪ್ತಧಾತುಸಮೇಳದ[3]ಲಿ ಬೆಳೆ[4]ಸಿ
ಹಿಂಗದೊದವಿದ ಬಿಂದುಫಲವನ
ಸಂಗಗೀಯದೆ ವಿಮಲವೆನಿಸಿಯೆ[5]
ಸಂಗಡಿ[6]ಸಿಕೊಂಡಿಹನೆ ಭಕ್ತನು ಬಸವ ಕೇಳೆಂದ ॥ ೨೩ ॥

೧. ಗಹಾಪಾ (ಇ.) ೨. ತ್ತು (ಇ, ಗ.) ೩. ವ ಸಮಂತಿಯು (ಇ.) ೪. ರ (ಕ.)
೫. ಸು (ಬ.) ೬. ಣಿ (ಉ, ಕ, ಚ.)

ಧರೆ ಜಲಾಗ್ನಿಯನೆಯ್ದಿದರೆ ಸ
ದ್ಘುರುಕುಮಾರಕನಗ್ನಿ ವಿಡಿದಾ
ಮರುತ ಗಗನವನೆಯ್ದಿದರೆ ಜಂಗಮುದಲವಧಾನಿ
ವರಗಗನವಾತ್ಮಸ್ಥಲವನೆ
ಯ್ದಿರಲು ಶಿವಲಿಂಗೈಕ್ಯನಿಂತೀ
ಪರಿಯನಱಿದವನೆನ್ನ[1] ಭಕ್ತನು ಬಸವ ಕೇಳೆಂದ || ೨೮ ||

ಧರಣಿ ಜಲದಲಿ ಕರ್ಮಿ ಪಾವಕ
ಮರುತ ಮಂಡಲದಲ್ಲಿ ಭಕ್ತನು
ಪಿರಿಯ ಗಗನಾತ್ಮಸ್ಥಳಾನ್ವಿತನಾಗೆ[2] ಸುಜ್ಞಾನಿ
ಪರಿವಿಡಿಯಲವನಿಳಿಹಿ ನಿಂದರೆ
ಪರಕೆ ಪರತರ ವಸ್ತುವಾಗಿಯೆ
ನೆರೆವನೆನ್ನಲಿ ಬಳಿಕಲಾತನು ಬಸವ ಕೇಳೆಂದ || ೨೯ ||

ಶಕ್ತಿಯೆಡೆ ಗುದಲಿಂಗವಂತಾ
ಭಕ್ತಿಯೆಡೆಯಾ ನಾಭಿ ಹೃದಯವು
ಮುಕ್ತಿಯೆಡೆಯಾ ತಾಲು ಹುಬ್ಬುಗಳದು ನಿಮಿತ್ತದಲಿ
ಶಕ್ತಿಯಲಿ ಸಂಪನ್ನನಾಗಿಯೆ
ಭಕ್ತಿಯಲಿ ಭಾವಜ್ಞನಾದೊಡೆ
ಮುಕ್ತಿಯೆಂಬುದು ಮುಂದೆ ನಿಲುವುದು ಬಸವ ಕೇಳೆಂದ || ೩೦ ||

[3]ತನ್ನ ನೊಲಿ[3]ವೊಡೆ[4] ಶಕ್ತಿಯಿದಲಾ
ತನ್ನನಱಿವೊಡೆ ಭಕ್ತಿಯಿದಲಾ
ತನ್ನನಳಿವೊಡೆ[5] ಮುಕ್ತಿಯಿದಲಾ ಲಿಂಗವಂತಂಗೆ
[6]ತನ್ನ ತಾನಿಂತಡಱಿ ತನ್ನೊಳು
ತನ್ನ ತಾನಾಗಿದ್ದನಾದೊಡೆ
ನನ್ನ ನಚ್ಚಿನ[7] ಭಕ್ತನಾತನು ಬಸವ ಕೇಳೆಂದ || ೩೧ ||

೧. ಪರಿವಿಡಿಯನರಿವವನೆ ( ಒ )  ೨. ಸ್ಥಳವನೈದಿರಲು ( ಎ. ಇ.)  ೩-೩ ನನ್ನನೊಲಿವೊಡೆ (ಎ.) ೪. ನರಿ (ಋ.) ೫ ನರಿ (ಋ) ೬. ನಿಂದಲ್ಲಿ (ಉ.); ನೆಂದರಿದು (ಜ.); ನಿಂತರಿತು (ಅ.) ೭. ಮಚ್ಚಿನ (ಎ.)
ಪ್ರ. ಲೀ. ೧೨.

ಶುದ್ಧವೆನಿಪಾ ಪೂರ್ವಪಶ್ಚಿಮ
ಸಿದ್ಧ ಮುದ್ರಾ ಬಂಧ ಮೊದಲಾ
ಗಿದ್ದ ನಾನಾ[೧] ಪರಿಪರಿಯ ಯೋಗೋಪದೇಶಗಳ[೧]
ಉದ್ಧರಿಸಲಾ ಬಸವರಾಜನ
ಬುದ್ಧಿ ಪ್ರಜ್ವಲ[೨]ವಾಗಿ ಪಸರಿಸು
ತಿದ್ದುದೇನೆಂದೆಂಬೆ[೩]-[೩]ನಾ ಪ್ರಭುಲಿಂಗನೊಲುಮೆಯನು || ೩೨ ||
ಮಾಡುತಿಹುದನವರತಲನುಭವ
ಕೂಡವನ್ನಕವನುಭವಂಗಳ[೪]
ಗಾಢದಲಿ ಗಮನಿಸುವುದೂರ್ಧ್ವಪದ[೫] ಪ್ರಚಾ[೬]ರಣೆಗೆ
ನೀಡಿ ನಿಲುಕುವುದಂತರಂಗದ
ನಾಡನಾಳುವೊಡೀ[೭] ಪ್ರಕಾರವ[೮]
ಜೋಡಿಸುತ್ತಿರುತಿಹುದು ಭಕ್ತರು ಬಸವ ಕೇಳೆಂದ || ೩೩ ||
ಅನುಭವಣೆಯುಳವಡುವ ಪರಿಯಂ
ತನುಮತವನೊಳಗೊಂಡು ನಿಶ್ಚಲ
ದನುವನಂಗೀಕರಿಸಿ ನೀವಿರಲಾ ದಿನಂಗಳಲಿ
ಮನವೊಲಿದು ನಾ ಬಂದು ಮೇಲಣ
ನೆನಹಿಗಾಕ್ಷಣ ಅಱುವ ಮಾಡುವೆ
ನೆನುತಲಾ ಪ್ರಭುರಾಯನಾ ಬಸವಣ್ಣಗಿಂತೆಂದ || ೩೪ ||
ನೋಡಬೇಕಾರಾರು ಭಕ್ತಿಯ
ಮಾಡಿ ಮುಕ್ತಿಯ ಹಡೆವೆವೆಂದೆನು
ಗೂಡಿ ನಿಚ್ಚಟರಾಗಿ ಧೀರೋದಾರ ವೃತ್ತಿಯಲಿ
ಜೋಡಿವೋಗದೆ ನಿರ್ವಹಿಸಿ ಹೇ
ಡಾಡದವರನು ಕಾಬೆವಾವಿ
ನ್ನಾಡಿ ಬಹೆವೆಂದೆನುತಲಿರ್ದನು ಗುರು ಗುಹೇಶ್ವರನು || ೩೫ ||

**ಅಂತು ಗತಿ ೧೮ಕ್ಕಂ ಪದ ೭೯೦ಕ್ಕಂ ಮಂಗಳಂ**

೧-೧. ಪರಿಪರಿಯುಮಂತ್ರ ಕ್ರಿಯೋಪದೇಶವನು (ಇ) ೨. ಪಂಜರ (ಎ); ಪಂಜಳ (ಕ, ಗ.) ೩-೩. ಸಲ್ಲನುಲಿಂಗನೊಲುಮೆಯಲಿ (ಗ.); ೨. ಲೀಲೆಯಲಿ. (ಇ, ಚ) ೪. ಸ್ನೆಗ ಭಕ್ತಿ ಮಾರ್ಗವ (ಇ.) ೫. ಪಥ (ಕ, ಗ.) ೬. ಸಾ (ಜ.) ೭. ಪ್ರದೀ (ಗ, ಚ, ಜ) ೮. ದಿ (ಇ, ಚ.

# ೧೯ ಗೋರಕ್ಷನ ಗತಿ

**ಸೂಚನೆ:**

ಶರಣರೆಲ್ಲರ ನಿಲಿಸಿ ಹೋಗುತ
ಕರುಣದಲಿ ಗೋರಕ್ಷನಾಥಗೆ
ವಿರಚಿಸಿದನೆಮ್ಮಲ್ಲಪ್ರಭು ಲಿಂಗತತ್ತ್ವವನು

ನರ ತೊಗಲು ಎಲು ಮಿದುಳು ಕಬ್ಬಸು
ಕರಳು ಕೆಂಡ ಪುರೀಷ ಪುಂಜದ
ಶರೀರವೇ[೧] ಸ್ವಯವಾಗಿ ಸಿದ್ಧಿಯ[೨] ಪಡೆವೆವೆಂದೆಂಬ
ಮರುಳುತನವನು ನಿಲಿಸಿ ಸಾಕ್ಷಾತ್
ಪರಮ ಪದವಿಯಲಿರಿಸುವನುವನು[೩]
ಶರಣರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ‖ ೧ ‖

ಸಾಧಿಸುವುದಿನ್ನಿನ್ನು ನಿಮ್ಮೊಳು
ನಾದ ಬಿಂದು ಕಳಾ[೪]ಪ್ರ[೪]ಪಂಚದ[೫]
ಹಾದಿಯನು ಹೆರುಮಾಡುತಿಹುದೇಕಾಗ್ರಚಿತ್ತದಲಿ
ಆ ದಿನಕೆ ನಾ ಬಂದು ನಿಮ್ಮ ಸ
ಮಾಧಿಗಳ ಸಾಹಸದ ಪ್ರಾಪ್ತಿಯ
ನೈದೆ ನೋಡುವೆನೆನುತಲಾ ಪ್ರಭುರಾಯನಿಂತೆಂದ ‖ ೨ ‖

ಸ್ತುತ್ಯರಾಗಿಹುದಖಿಳ ಭಕ್ತರು
ನಿತ್ಯರಾಗಿಹುದಚಲ ಭಕ್ತರು
ಸತ್ಯರಾಗಿಹುದಮಲ ಭಕ್ತರು ಭಕ್ತಿಯಿಂದೆನುತ
ಮತ್ತೆ ಮುದದಲಿ ಸಿದ್ಧರಾಮನ
ನುತ್ತಮೋತ್ತಮ ಬಸವರಾಜನ
ಚಿತ್ತದಣಿಯಲು ಹೆರುಪಡಲಿ ಹರಸಿದನು ಪ್ರಭುರಾಯ ‖ ೩ ‖

೧. ಸಯುವಾಗಿ ( ಬ, ಕ. ); ಶಯುವಾಗಿ ( ಇ, ಉ, ಎ, ಬ, ಗ, ಡ. ) ೨. ಪಡೆ ಎ,
೩. ನೀವಭೇದವ (ಜ.) ೪–೪. ಪ್ರಪಂಚಿನ (ಎ.) ೫. ಬಂಧದ (ಅ. ಬ. ಜ.)

ಮನವೊಲಿದು ಶಿವಶರಣರಲ್ಲರು
ತನತನಗೆ ಸಾಷ್ಟಾಂಗಸಹಿತ[೧]ವೆ
ತನುವನೀಡಾಡಿದರು ಗುರುವಿಗೆ ಬಳಿಕಲವರುಗಳ
ವಿನಯದಿಂದಿರಹೇಳಿ ಮರ್ತ್ಯದ
ಮನುಜರನು ಪಾವನವ ಮಾಡುವೆ
ನೆನುತ ಗಮಿಸಿದನಲ್ಲಮಪ್ರಭು ಲಿಂಗಲೀಲೆಯಲಿ || ೪ ||

ಇತ್ತಲೀ ಬಸವಣ್ಣ ಮೊದಲಾ
ದುತ್ತಮದ ಶಿವಭಕ್ತರೆಲ್ಲರು
ಚಿತ್ತದಲಿ ನಿಜಗುರುನಿರೂಪವ ಮಾಡತೊಡಗಿದರು
ಅತ್ತ ಸೊನ್ನಲಪುರಕೆ ಹೋಗಿ ವಿ
ಚಿತ್ರದಿಂದಲಿ ಸಿದ್ಧರಾಮನು
ಮತ್ತೆ ಮನದಲಿ ಮಾಡುತಿರ್ದನು ಶಿವಸಮಾಧಿಯನು || ೫ ||

ಧರಣಿಯೊಳಗಾರಾರದಾವಾ[೨]
ಚರಣೆಗಳನಾಚರಿಸುತಿಹರಾ
ಪರಿಯಲವರವರಿಗೆ ಯಥೋಚಿತ ಸುಪ್ರಸನ್ನತೆಯ
ಕರುಣಿಸುವೆನೆಂದೆನುತ ಸಚರಾ
ಚರರಿಗುಪಕಾರಾರ್ಥವಾಗಿಯೆ
ಗುರು ಗುಹೇಶ್ವರಲಿಂಗ ಸುಳಿದನು ತನ್ನ ಲೀಲೆಯಲಿ || ೬ ||

ಒಸೆದು ಕುಲಗಿರಿಕುಲವನೋಲಿದೀ
ಕ್ಷಿಸಲು ಪರುಷದ ಪರ್ವತಂಗಳ
ಹೆಸರ ಹಡೆದುವು ತರುಲತಾನಿಕರವ ನಿರೀಕ್ಷಿಸಲು
ಮಿಸುಪ ಸುರತರು ಕಲ್ಪಲತೆಯೆಂ
ಬೆಸಕವಾದುವು ನೋಡೆ ಸರಸಿ
ಪ್ರಸರವಮೃತಗಳಾದುವಾ ಪ್ರಭುಲಿಂಗಲೀಲೆಯಲಿ || ೭ ||

೧. ದಿಂದ (ಇ.); ನೆನುತ (ಉ) ೨. ವ ಪರಿಯಾ (ಇ.)

ಪೊಡವಿಯನು ಪಾವನವ ಮಾಡುತ
ನಡೆದು ನಲವಿಂ ಬರುತ ಬರುತಲಿ
ಬಡಗ ಭೂಮಿಯ ಪುಣ್ಯಪುರುಷರ ಚಾರು ಚರಿತೆಯನು
ಬಿಡದೆ ನೋಡುವೆನವರು ಬೇಡುತ
ಕೊಡುವೆನೆಂದೆನುತೊಲಿದು ಕರುಣದ
ಕಡಲಿನಂತಿರೆ[1] ಬಂಧನಾ ಪ್ರಭು ಲಿಂಗಲೀಲೆಯಲಿ || ೮ ||

ಇದಿರುವರಿತಂದಲ್ಲಮಪ್ರಭು
ಪದಪಯೋಜಸ್ಪರುಶನದ ಸಂ
ಪದದ ಸತ್ತ್ವದಲಾದುವಗ್ಗದ ಪುಣ್ಯನದಿನಿಕರ
ಮುದದಲೆಡೆಗೆಯ್ದೆಡೆಗಳೆಲ್ಲವು
ಸದಮಲಕ್ಷೇತ್ರಂಗಳಾದುವು
ವಿದಿತವೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ || ೯ ||

ನಿಧಿಯ ಚಿಂತಾಮಣಿಯ ದಿವ್ಯೌ
ಷಧಿಯ ಪರುಷದ ಕಣಿಯ ಸುಲಲಿತ
ಸುಧೆಯ ಬಿಲಗಳ ಸಿದ್ಧರಸಪಾದುಕೆಯನಂಜನವ
ನಿ[2]ಧಿ ನಿ[3]ಧಾನದ ವಸ್ತುಗಳ ತ
ಮ್ಮಿದಿರಲಱಿಸುವ ಸಾಧಕರ ತವ
ನಿಧಿಯೆನಿಪ ಶ್ರೀಗಿರಿಯ ಕಂಡನು ಬರುತ ಪ್ರಭುರಾಯ || ೧೦ ||

ನಡೆವ ಲತೆಗಳು ನಗುವ ಗಿಡಗಳು
ನುಡಿವ ಶಿಲೆಗಳು ತೇಜದಿಂದುರಿ
ಯಿಡುವ ತರುಗಳು ದಿವ್ಯರುಚಿಗಳನೀವ ಗುಲ್ಮಗಳು
ಕುಡಿಸೊಡಂತಃಕರಣಶು[4]ದ್ಧಿಯ
ಕೊಡುವ ಮಡುಗಳು ಜಾತಿವೈರವ
ತೊಡದ ಖಗ ಮೃಗ ಮೆಱೆದುದಾ ಶ್ರೀಗಿರಿಯ ಶಿಖರದಲಿ || ೧೧ ||

೧. ಸಂಪದಿ (ಇ.) ೨-೩. ವಿ (ಕ, ಮ.) ೪. ಸಿ (ಅ. ಕ. ಜ.)

ಏಱಿ ನೋಡಲು ಸತ್ಯಲೋಕಕೆ
ಹಾಱಿಸುವ ಗಿರಿಶಿಖರಗಳು ಮಿಗೆ
ಮೀಱಿ ಹೊಕ್ಕೊಡೆ ಸಪ್ತ ಪಾತಾಳದ ಸಘಾಟಿಕೆಯ
ತೋಱಿಸುವ ಬಿಂಕದ ಬಿಲಂಗಳು
ಸಾಱಿ ಸಾಧಕರೇನ ಬಗೆದುದ
ಹೇಱಿ ಕೊಡುವ ಸುವಸ್ತುವಿರ್ದುವು ಪರ್ವತಾಗ್ರದಲಿ || ೧೨ ||

ಆ ಮಹಾ ಶ್ರೀಗಿರಿಯ ಶಿಖರದೆ
ಕಾಮಿತಾರ್ಥವ ಹಡೆವೆನೆಂದು
ದ್ದಾಮತೆಯ ಗೋರಕ್ಷನೆಂಬ ಸಮಸ್ತಸಾಧಕನು
ಪ್ರೇಮದಿಂದಿರುತಿರಲಿಕಾ ದಿನ
ವೀ ಮನೋಹರಮೂರ್ತಿಮಯ ನಿ
ಸ್ಸೀಮನಲ್ಲಮನಲ್ಲಿಗೆಯ್ತಂದನು ವಿನೋದದಲಿ || ೧೩ ||

ರೋಗಿಯಲ್ಲಿಗೆಯಮೃತವೇ ಮೆ
ಯ್ಯಾಗಿ ನಡೆತಂದಂತೆ ಜೀವವಿ
ಯೋಗತನುವಿಗೆ ಮುಟ್ಟಿ ಮರುಜೀವಣಿಗೆ ಬಂದಂತೆ
ಮೂಗಗಮಲ ವಚೋವಿಳಾಸತೆ
ಯಾಗುದೋಱಿಸಿದಂತೆ ಕೃಪೆಯಿಂ
ದಾಗಳಾ ಗೋರಕ್ಷನಲ್ಲಿಗೆ ಬಂದ ಪ್ರಭುರಾಯ || ೧೪ ||

ಬರಲಿಕಾ ಪ್ರಭುರಾಯನಡಿಗಳಿ
ಗೆಱಗಲೊಲ್ಲದೆ ಹೆಮ್ಮಿನಿಂದಲಿ
ಬೆಱೆತು ಬಿಂಕದ ಬಿಮ್ಮಿನಲಿ ಕೈ ಮುಗಿದು ಶರಣೆಂದು
ಗುರುತರಾಸನದಲ್ಲಿ ಮಿಗೆ ಕು
ಳ್ಳಿರಿಸಿ ಕೂರ್ಮೆಯಲೊಯ್ಯನೊಯ್ಯನೆ
ಪರಿವಿಡಿ[1]ಯಲಲ್ಲಮಗೆ ಬಿನ್ನೈಸಿದನು ಗೋರಕ್ಷ || ೧೫ ||

೧ ಪರಿ (ಅ, ಉ, ಒ, ಜ.)

ಆವ ಕಡೆಯಿಂ ಬಿಜಯ ಮಾಡಿದಿ
ರಾವ ಕಾರಣ ಬಂದ ಬರವೆಮ
ಗಾವುದೈ ಬೆಸನೇನು ಹದನ ನಿರೂಪಿಸಾ ಪ್ರಭುವೆ
ನೀವು ಬಹುದೆಮಗತುಳ ಭಾಗ್ಯಫ
ಲಾವಳಿಗೆ ಕಾರಣವಲಾ ಮಹ
ದೇವ ಎನುತಲಿಯು[1]ಚಿತ ವಚನವ ನುಡಿದ ಗೋರಕ್ಷ || ೧೬ ||

ನುಡಿಯನಾಲಿಸಿ ಕೇಳು ಭಕ್ತಿಯ
ಕಡೆಯಲಾವೆಯ್ತಂದೆವೆಮಗೀ
ಕಡೆಯ ಮನುಜರ ಮನಕೆ ಕಡೆಯನು ಮಾಡಬೇಕಾಗಿ
ಒಡಲಿನಾಸೆಗೆ ಕುದಿದು ಕೋಟಲೆ
ಬಡುವವರ ಕಳವಳವ ಕಳಚಲು
ನಡೆದು ಬಂದವರಾವೆಲೈ ಗೋರಕ್ಷ ಕೇಳೆಂದ || ೧೭ ||

ಹೊಸತಲಾ ಲೌಕಿಕದುಚಿತವ
ಪಸರಿಸಲು ಪರಮಾರ್ಥವನು ಸೂ
ಚಿಸುತಲಿಹನೆಯುದಲ್ಲದೆನ್ನನು ಮುನ್ನ ಪರಕಿಸದೆ
ಹೆಸರುಗೊಳುತಲಿದಾನೆಯೀತನ
ಗಸಣೆ ತಾನೇಯಾದಿನಾಥನ
ಬೆಸುಗೆಯಾಗಲು ಬೇಕೆನುತ ಗೋರಕ್ಷನಿಂತೆಂದ || ೧೮ ||

ಎಲೆ ಮಹಾಪುರುಷಾ ನಿಧಾನಿಸಿ
ತಿಳಿಯೆ ನಿನ್ನಂತಸ್ಥವೆಂಬುದು
ನಿಲುಕದೆಮ್ಮಯ ಮತಿಗೆ ನಿನ್ನಯ ರೀತಿ ಹೊಸತಾಗಿ
ಹೊಲಬು ಹಂಗದೆಮ್ಮಿಖುವುಗಿಜುವಿನ
ಸಲುಗೆ ಸಲ್ಲದು ಸಾಕು ನಿನ್ನಯ
ನೆಲೆಯ ನೀನೇ ಬಲ್ಲೆಯೆಂದನು ಬಳಿಕ ಗೋರಕ್ಷ || ೧೯ ||

೧. ಎಂದೆನುತು [ಗ.]

ತನ್ನ ನಱಿಯದ ಮಂದಮತಿಗಳಿ
ಗಿನ್ನು ಪೆಱರಂತಸ್ಥವೆಂಬುದು
ಕಣ್ಣು ಕಾಣದ ಕುರುಡ ಕನ್ನಡಿವಿಡಿದ ತೆಱನಂತೆ
ನನ್ನ ನಿಜದ ನಿಧಾನವನು ಬಳಿ
ಕಿನ್ನು ಕಾಬವರಾರು ಮಾತಿನ
ಬಿನ್ನಣಿಗರಿಗೆ ಸಾಧ್ಯವೇ ಗೋರಕ್ಷ ಕೇಳೆಂದ ॥ ೨೦ ॥

ಕಾಯವೆಂಬುದು ತಾನು ತಾನೇ
ಕಾ[೧]ಯವಾಗಿಹೆನಿಂತು ತನ್ನೊಂ
ದಾಯತದ ತಿಳಿವೆಂಬುದಿದು ಕಾಪಾಲಮಾರ್ಗದಲಿ
ನ್ಯಾಯಧರ್ಮವು ನನ್ನ ನಱೀವ ವಿ
ಡಾಯವೆನಗೇನಱಿದು ಪ್ರಭುವೆ
ಬಾಯನುಡಿಗಳ ಬಲ್ಲಿದರು ನಾವಲ್ಲ ಕೇಳೆಂದ ॥ ೨೧ ॥

ಎಲು ತೊಗಲು ಮಲ ಮೂತ್ರ ನೆತ್ತರ
ಕೊಳಚಿಯಾಗಿಹ ಹೇಸಿಕೆಯ ತನಿ
ಗೊಳಿಯೊಡಲು ತಾನೆಂಬ ಮೂರ್ಖನು ತನ್ನ ಅಱಿದಪನೆ
ಸಲುವುದೇ ಕಾಪಾಲಮಾರ್ಗಕೆ
ಹಳಿವ ತಹರೇ ಸಂಪ್ರದಾಯದ
ನೆಲೆಯನಱಿವುದು ಸೂಱಿ[೨]ಯೆ ಗೋರಕ್ಷ ಕೇಳೆಂದ ॥ ೨೨ ॥

ಮಾಡಲಱಿಯದವಂಗೆ ಕೊಳಚಿಯ
ಮಾಡುವೀ[೨]ತನು ತಪ್ಪದೈ ದಿಟ
ಮಾಡಬಲ್ಲೊಡೆಯೀ ಶರೀರವೆ ರತ್ನವಾಗಿಹುದು
ಖೋಡಿಗಳೆವುದು ಮಾಯೆಗೀಯೆಯ
ನೇ[೩]ಡಿಸುವುದಾ ಮಿತ್ತುಗಿತ್ತುವ
ರೂಢಿಯಲಿ ತನು ಸಿದ್ಧರಾಪ್ಪೈ ಪ್ರಭುವೆ ಕೇಳೆಂದ ॥ ೨೩ ॥

೧. ಮಾ (ಅ, ಇ, ಉ, ಗ) ೨. ಬೀಡಲ್ಲೈ (ಇ.) ೩. ನೋ(ಇ.)

ಎಲೆ ಮರುಳೆ ಮೃದುವಾದ ಮಾಯೆಯ
ಬಲೆಯ ಬಲ್ಲಿತ ಮಾಡಿ ಸಾವನು
ಗೆಲಿದೆನೆಂದು ನಿರರ್ಥದಲಿ ಹಾರೈಸದಿರು ಬಱಿದೆ
ತಿಳಿವೊಡೀ ತನು ತಾನೆ ಕಾಲನ
ನಿಳಯ ನೀನಿದ ನಂಬಿ[೧] ನುಡಿದರೆ
ಪ್ರಳಯ ನಿನ್ನನು ಬಿಡುವುದೇ ಗೋರಕ್ಷ ಕೇಳೆಂದ || ೨೪ ||

ಆದೊಡಿನ್ನೇಳೇಳು ಹಿಡಿ ಹಿಡಿ
ಕೈದುವಿದೆ ಕೋ ತನ್ನ ತನುವನು
ಹೊಯ್ದು ನೋಡಾ ನೀನು ನಿನ್ನಾಪನಿತು ಸತ್ವದಲಿ
ಕೂದಲೊಳಗೊಂದಿನಿತು ಹಱಿಮುಱಿ
ಯಾದರಕಟಾ ನಾನು ಸಿದ್ಧನೆ
ವಾದವೇತಕೆ ದೃಷ್ಟವಿದಲಾ ಪ್ರಭುವೆ ನೋಡೆಂದ || ೨೫ ||

ಕೊಂದು ನೋಡುವುದಿದು ಪರೀಕ್ಷಿಸು
ವಂದವೇ ನಾವಱಿಯೆ ವಾಸುರ
ಬಂಧಕರ್ಮವನಿದು ಗುಹೇಶ್ವರಲಿಂಗಮತವಲ್ಲ
ಇಂದು ನಿನ್ನ ಶರೀರವಳಿದೊಡೆ
ಮುಂದೆ ಸಿದ್ಧಿಯ ಹಡೆವರಾರೈ
ಮಂದಮತಿಗಾನಂಜುವೆನು ಗೋರಕ್ಷ ಕೇಳೆಂದ || ೨೬ ||

ಸಾವು ಬಂದೊಡೆ ನಾವು ಸಿದ್ಧಿಸಿ
ತಾವುದೈ ತನುವಳಿವುದೇ ಶ
ಸ್ತ್ರಾವಳಿಗೆ ದಿಟವಣಿಯಬಾರದ ಮಡಕೆಯಡಬಹುದೆ
ಈ ವಿಕಲ್ಪವ ಬಿಟ್ಟು ನಿರ್ಭಯ
ಭಾವಭರದಲಿ ಹೊಡೆದು[೨] ನೋಡಿ
ನ್ನಾವ ಸಂಶಯವೇತಕೆಲೆ ಪ್ರಭುರಾಯ ಹೇಳೆಂದ || ೨೭ ||

೧. ನಚ್ಚಿ (ಚ) ೨. ಯ್ದು (ಬ, ಖ.)

ಒಲ್ಲೆವೆಂದೆನಲೇಕೆ ಹುಟ್ಟಿಸ
ಬಲ್ಲವನು ಹೊಂದಿಸಿದೊಡಾತಗೆ
ಹೊಲ್ಲವಾವುದು ನಾವು ಸಲಿಸುವೆವೀತನರ್ತಿಯನು
ನಿಲ್ಲದೆಱಗಲು ಸತ್ತನಾದೊಡೆ
ಬಲ್ಲಿತಹ ಗೋರಕ್ಷನನು ನಾ
ವಿಲ್ಲಿ ಸೃಜಿಸುವೆವೆನುತಲಾ ಪ್ರಭುರಾಯನನುವಾದ || ೨೮ ||

ಹಿಡಿದು ಹಿಂಗದೆ ಬಲಿದು ಝಳಪಿಸಿ
ಜಡಿದು ಹೊಱಕೈಯಿಂದೆ ಖಣಿಖಟಿ
ಲಿಡಲಿಕಾ ಪ್ರಭುವಬ್ಬರಿಸಿ ಬೀಱ ಹೋಯಿಲನೆಱಗಿದರೆ
ನಡುಗಿದುದು ನೆಲ ಶಿಲೆಗಳನು ಮೈ
ಗೊಡಹಿದುದು ಗಿರಿಯೊಂದು ಕೂದಲು
ಕಡಿಯದಾ ಗೋರಕ್ಷನಲಿ ಏನೆಂಬೆನಚ್ಚರಿಯ || ೨೯ ||

ಮೋಹದಲಿ ಮಾಯಾ[೧] ಪ್ರಪಂಚಿನ
ದೇಹಸಿದ್ಧಿಯ ಪಡೆದೆನೆಂಬೀ
ಗಾಹಿನಿಂದಲಿ ವಜ್ರಪಿಂಡಶರೀರ ಫಲಿಸಿದೊಡೆ
ಊಹಿಸುವೊಡಾ ಪ್ರಳಯವನು ಸಂ
ದೇಹವಿಲ್ಲದೆ ಗೆಲುವೆಯೋ ಸುಡು
ದೇಪಸಿದ್ಧಿಯನೆನುತಲಾ ಪ್ರಭು ಖಂಡೆಯವ ಬಿಸುಟ || ೩೦ ||

ಸಿದ್ಧಿಯುಳ್ಳವನಂಗದಲಿ ಖಣಿ
ಲಿದ್ದು ಧ್ವನಿ ಹುಟ್ಟುವುದೆ ಹೊಯಿದೊಡೆ
ಸಿದ್ಧಿಯೆಂಬುದು ತಿಳಿವೊಡೀ ತೆಱನಲ್ಲ ನಂಬದಿರು
ಹೊದ್ದಿತಲ್ಲಾ ಪ್ರಳಯವೀ ಪರಿ
ಬದ್ಧದೇಹಿಗೆಯಕ್ಕಟಕ್ಕಟ
ಸಿದ್ಧತನ ಸಾಮಾನ್ಯವೇ ಗೋರಕ್ಷ ಕೇಳೆಂದ || ೩೧ ||

೧.ನಾನಾ (ಉ.)



ಗೋರಕ್ಷನು ಪ್ರಭುದೇವರನ್ನು ಕತ್ತಿಯಿಂದ ಇರಿದದ್ದು
(ಪದ್ಯ ೩೪–೩೫)

ಬಱಿಸಿಡಿಲು ಶೀತೋಷ್ಣ ಖಡುಗದ
ಬಿಱುಬುಹೊಯಿಲಿಗೆ ಕೆಡದೆ ವಜ್ರದ
ಬಿಱಿಸಿನಂತೆನಿಸಿದ ಶರೀರವು ಸಿದ್ಧಿಯಲ್ಲದೊಡೆ
ಪೆಱತದಾವುದು ಸಿದ್ಧನಾದೊಡೆ
ಕುಱುಹದಾವುದು ನೀನು ಬಲ್ಲೊಡೆ
ಬಱಿಯ ಮಾತನು ಬಿಟ್ಟು ದಿಟವನು ಪ್ರಭುವೆ ತೋಱಿಂದ || ೩೨ ||
ಹಿಡಿದುಕೋ ಖಂಡೆಯವನಾದೊಡೆ
ಹೊಡೆದು ನೋಡೆಮ್ಮವನು ಮುನ್ನವು[೧]
ಮುಡುಹಿಗೆನಿತುಳ್ಳನಿತು ನಿನ್ನಯ ಸರ್ವ ಸತ್ವದಲಿ
ಖಡುಗ ಮುಖದಲಿ ಕಾಬುದಲ್ಲದೆ
ನುಡಿಯ ನುಣ್ಣಿಸಲೇನು ಕಾರಣ
ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ || ೩೩ ||
ನೋಡಬೇಕಿನ್ನಾದೊಡೀತನ
ಗಾಡಿಯನು ಸಲೆ ಸಿದ್ಧತನದಾ
ರೂಢವನು ಸಾಧಕರಿಗಿದೇ ಮಹನವಮಿಯೆಂದೆನುತ
ನೀಡಿ ನಿಜ[೨] ಸವ್ಯಾಪಸವ್ಯದ[೨]
ಮೋಡಿಯಲಿ ಬಿಡದೆಱಗುತಿರ[೩]ಲೀ
ಸಾಡಿತವನಸಿಯುಮನು ಪ್ರಭುವಿನ[೩] ಬ[೪]ಯಲ ದೇಹದಲಿ || ೩೪ ||
ಸೊಪ್ಪುಳಾಗದು ಕೈದುವಾನದು
ಪೊಪ್ಪವಳಿಯದು ಜಂತ್ರಜೋಕೆಗೆ
ತಪ್ಪಿಡೋಱದು ಹೊಡೆಯೆ ಹಾಱುವ[೫] ಹದ್ದಿ[೬]ನಂದದಲಿ
ನಿಪ್ಪಸರದಸಿ[೭] ಬಯಲ ದೇಹಿಯ
ನಪ್ಪಲಱಿಯದಿದೇನು ಚೋದ್ಯವೊ
ತಪ್ಪದೀತನೆ ಗುರುವೆನೆನುತ ಗೋರಕ್ಷನಿಂತೆಂದ || ೩೫ ||

೧. ವ..ಂಗೈ [ಅ, ಇ, ಗ] ೨–೨. ಸರ್ವಾಂಗಸತ್ವದ [ಜ.] ೩–೩. ಲುಸಾಫಾಡಿ ಮುಸಗಿ ದುದಲ್ಲಮಪ್ರಭು [ಜ.] ೪. ಲ್ಲಮನ ನಿರ್ವ [ಗ.] ೫. ರದು [ಜ.] ೬. ಹೊಟ್ಟೆ [ಗ, ಚ] ೭. ಲಿ [ಇ, ಉ, ಒ, ಜ.]

ಅಣಕವಲ್ಲಿದು ತನ್ನ ಹೊಯಿದರೆ
ಖಣಿಲೆನುತ ಖಂಡೆಯಕೆ ಮಾಱಾಂ
ತಣೆದುದೆನ್ನಸು ನಿನ್ನ ಹೊಯಿದೊಡೆ ಬಯಲ ಹೊಯಿದಂತೆ
ನುಣುಚಿ ನುಣ್ಣನೆ ಕಡೆಗೆ ಖಂಡೆಯ
ಜುಣುಗಿ ಹೋಯಿತಿದಾವ ಮಹಿಮೆಯ
ಗುಣವೊ ನಮಗಿದನಱಿಯಬಾರದು ಪ್ರಭುವೆ ಹೇಳೆಂದ || ೩೬ ||

ಕಾಯ ಬಲಿದರೆ ಮಾಯೆ ಬಲಿವುದು
ಮಾಯೆ ಬಲಿದರೆ ಛಾಯ ಬಲಿವುದು
ಕಾಯ ಮಾಯಾ ಛಾಯೆ ಬಲಿದರೆ ಸಿದ್ಧತನವ[1]ಲ್ಲ
ಕಾಯ ಮಾಯಾ ಛಾಯದಾಗಿ[2]ನ
ದಾಯವನು ಕಳೆದುಳಿದನಾದೊಡೆ
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ || ೩೭ ||

ಆಧಿನಾಥನೆ ತಾನಿದೊಂದು ವಿ
ನೋದ ವೇಷವ ಧರಿಸಿ ತನ್ನಯ
ಸಾಧಕರ ಸಂಕಲ್ಪಸಿದ್ಧಿಯನೀಯಬೇಕೆಂದು
ಮೇದಿನಿಗೆ ಮೆಯ್ಗಾಣಿಸಿದ[3]ನಿ
ನ್ನಾದುದಾನಱಿಸುವ[3]ಮನೋರಥ
ವೆಯ್ದೆ ಫಲಸಿದುದೆನುತಲಾ ಗೋರಕ್ಷನಿಂತೆಂದ || ೩೮ ||

ಅಱಿಯೆ ನಾನಿನ್ನೆಬರ ನಿನ್ನಯ
ತೆಱನನೆನ್ನಯ ಮತ್ತತನದಲಿ
ಬೆಱತುಕೊಂಡಾನಿರ್ದೆನೆನ್ನದು ಸರ್ವ ತಪ್ಪೆನುತ
ನೆಱ ಶರೀರವ ನೀಡಿ ಕೈಮುಗಿ
ದೆಱಗಿದನು ಭಯಭಕ್ತಿಭಾರದ
ಲೊಱಗುವ[4]ತಾ ಪ್ರಭುವಿನಡಿಯೊಳು ಬಳಿಕ ಗೋರಕ್ಷ || ೩೯ ||

೧. ನವನ [ಬ, ಕ, ಚ, ಜ.] ೨ ದನುವಿ [ಜ.] ೩–೩ ನಿಂ ದಾದಿ ಶಿವ ಶಿವಕೃತ [ಇ]
೪ ತಂ [ಕ, ಜ.]

ಬಿಸಿಯ ಹದನನು ತ್ರಿಳಿದು ಲೋಹವ
ಬೆಸುವವೊಲು ಪರಿಪಾಕಭಾವದ
ಹೆಸನನಱ[೧]ದಿನ್ನೀತಗು[೧]ಪದೇಶಿ[೨]ಸುವೆನೆಂದೆನುತ[೨]
ಒಸೆದು ಹಣೆವಿಡಿದೆತ್ತಿ ಕರುಣವ
ಪಸರಿಸುತ ಗೋರಕ್ಷನನು ಮ
ನ್ನಿಸಿದನೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ || ೪೦ ||

ನೋಡಿದರೆ ಮದಮತ್ಸರಗಳೆ
ದ್ದೋಡಿದುವು ಕರುಣದಲಿ ಗುರು ಮಾ
ತಾಡಿದೊಡೆ ಮಗ್ಗಿದುದು ಮನಸಿನ ಮಱವೆ ನಿಮಿಷದಲಿ
ನೀಡಿ ಕೈಮುಟ್ಟಿದೊಡೆ ಕಾಯದ
ಜೋಡಿ ಹೋಯಿತು ವಿಮಲ ತನು ಮನ
ಮೂಡಿತಾ ಗೋರಕ್ಷನಲಿ[೩] ಪ್ರಭುಲಿಂಗಲೀಲೆ[೪]ಯಲಿ || ೪೧ ||

ಬಳಿಕಲಾ ಗೋರಕ್ಷನತಿ ಕಿಂ
ಕಲವನಂಗೀಕಱಿಸಿ ಮನದೊಳು
ನಲಿದು ನೋಡುತ ರೋಮಪುಳಕದ ಗುಡಿಯ ನೆಗಹುತಲಿ
ಎಲೆ ಮಹಾಘನ ಮಹಿಮ ಕರುಣಾ
ಜಲಧಿಯೆ ನಾನಾವ ಗತಿ[೫]ಯಲಿ
ನಿಲುವೆನೆನುತಾ ಪ್ರಭುವಿಗೆಂದನು ಭಕ್ತಿಯುಕ್ತಿಯ[೬]ಲಿ || ೪೨ ||

ಆಡೊಡಾಲಿಸಿ ಕೇಳು ಕಠಿಣತೆ
ಯಾದ ತನುವಿದು ಕಾಯಸಿದ್ಧಿಯ
ಭೇದವಲ್ಲದೆ ನಿತ್ಯಮುಕ್ತಿಯ ಸಿದ್ಧಿಯೆಂತಹಲ್ಲ
ಈ ದುರಾಶೆಯ ಹೋದ[೭] ಹೊಲಬಿನ
ಹಾದಿಯನು ಹುಗುದ[೮]ಗುಹೇಶ್ವರ
ಪಾದಕೆ[೯]ಗಲು ಸಿದ್ಧಸಹನ್ನೈ ಕಂದ ಕೇಳೆಂದ || ೪೩ ||

೧-೧ ದಿ... ತಲು [೩] ೨-೨ ಶವನುಷುರಲೆಂದು [ಗ] ೩ ಗೀ [ಅ, ಒ,] ೪ ನೊಲುವೆ [ಇ.] ೫. ಘರಿ [ಅ, ಕ.] ೬ ಭಾವದ [ಜ.] ೭. ನರಿವ ತೆರನ [ಇ.] ೮. ಹೊದ್ದ [ಇ] ೯. ಬಿಡುವುದು [ಗ.]

ನಂಬುವೊಡೆ ಹೇಳಾ ಗುಹೇಶ್ವರ
ನೆಂಬನಾವನು ವಾಸಿಸಲು ತನ
ಗಿಂಬದಾವುದು ಭಜಿಸಲೆಂತಾತನನು ಹೇಳೆನಲು
ಹೆಂಬಲಿಸಲೇಕಾ ಗುಹೇಶ್ವರ
ನೆಂಬವನೆ ನಾನಿದಕೆ ಸಂಶಯ
ಂಬುದಿಲ್ಲೈ ಸತ್ಯ೧ವಿದು ಗೋರಕ್ಷ ಕೇಳೆಂದ || ೪೪ ||

ಗುಹೆಯೆಲ್ಲೈ ಕೇಳಾತ್ಮನಂತಾ೨
ಗುಹೆಗೆ ಪತಿಯಾನೆನ್ನ ನಾಮದ
ಮಹಿಮೆ೩ ತಾನು ಗುಹೇಶ್ವರಾಂಕಿತವಾ೩ದ ಕತದಿಂದೆ
ಮಹಿಯ ಲೌಕಿಕರಲ್ಲಿ ಮಱಹಿಸಿ
ವಿಹಿತವೆಂಬಂತಿರೆ ಗುಹೇಶ್ವರ
ಸಹಜನಾಮವೆ ನಟಿಸಿದೆನು ನಾ೪ನೆನ್ನ೫ ಲೀಲೆಯಲಿ೪ || ೪೫ ||

ಅದು ನಿಮಿತ್ತದಲಖಿಳ ಜೀವರ
ಹೃದಯವಲ್ಲಭನೈ ಗುಹೇಶ್ವರ
ನದಱ ಭೇದವ ತಿಳಿದು ಸೋಹಂಭಾವ ಬು೬ದ್ಧಿಯಲಿ
ಸದಮಲಜ್ಞಾನೈಕನಾದರೆ
ನಿಧಿಯ ಕಾಬನು ನಿತ್ಯ ಮುಕ್ತಿಯು
ಪದಕೆ ಪತಿಯಹನಾತನೈ ಗೋರಕ್ಷ ಕೇಳೆಂದ || ೪೬ ||

ಜಾಣ ನುಡಿಗಳ ಬಿಡು ಗುಹೇಶ್ವರ
ನೀನೆಯಾದೊಡೆ ನಿನ್ನ ಕೈಯಲಿ
ದೇನು ಕುಱುಹಿನ ಲಿಂಗವಿದೆಯಿದಿರಿಟ್ಟು ಬೇಱೆ೬ನಿಸಿ೭
ನೀನು ತಾ೮ನಾಗಿದ್ದ ಬೞಿಕಲಿ
ದೇನು ಕಾರಣ ಕರ್ಮಭಕ್ತಿ
ಜ್ಞಾನದಾಯುತದಿಂಗಿ೯ತಂಗಳು ಗುರುವೆ ಹೇಳೆಂದ || ೪೭ ||

೧. ತಥ್ಯ [ಉ, ಜ.] ೨ ತಪ [ಕ, ಜ] ೩-೩. ಯದು ತಾನಾಗುಹೇಶ್ವರನಾ [ಉ] ೪-೪. ನೆಂದಪ್ರಭುರಾಯ [ ಇ. ] ೫. ಲಿಂಗ [ಗ.] ೬. ಶು [ಒ, ಖ, ಚ,ಜ.]; ಸಿ ಅ. ೭. ತೋರಿಸುತ [ಉ] ೮. ನೀ [ಗ, ಚ, ಮು.] ೯. ಸದಾಯ [ಗ.].

ಅಂಗವಿಸಿ ತಾನೀ ಪ್ರಕಾರದ
ಲಿಂಗನಿಷ್ಠೆಯನ್[೧]ಖಿಳರಿಗೆ ಮು
ಕ್ತ್ಯಂಗನೆಯ ಮದುವೆಯನು ಮಾಡುವೆನೆಂದು ಕರುಣದಲಿ
ಹಿಂಗದೀ ಪರಿ ನಟಿಸಿದರೆಯೆನ
ಗಂಗಲಿಂಗಕೆ ಭೇದ ಭಾವದ
ಸಂಗವುಂಟೆಂದೆಂಬರೇ ಗೋರಕ್ಷ ಕೇಳೆಂದ || ೪೮ ||

ತೆತ್ತಿಸಿದ ಶಿವಲಿಂಗಭಕ್ತಿಯ
ಹೆತ್ತವೊಲು ವಚನಗಳ ನಾನೆಂ
ಬತ್ತು ಕೋಟಿಯ ಹಾಡಿವೆನು ಹಲವಂದ ಛಂದದಲಿ
ತಥ್ಯವನು ಹೇಳುವೊಡೆ ಭಕ್ತರ
ಚಿತ್ತದಲಿ ಸುಜ್ಞಾನ ಬೀಜವ
ಬಿತ್ತಲೀ ಪರಿ ನಟಿಸಿದೆನು ಗೋರಕ್ಷ ಕೇಳೆಂದ || ೪೯ ||

ನಾನು ಮಾಡಿದೆನೆಂಬುದೊಂದನು
ಮಾನವನು ನಾ ನಟಿಸದಿದ್ದರೆ
ತಾನದೆಲ್ಲಿಯದೈ ಧರಿತ್ರಿಯ ಮೇಲೆ ಶಿವಭಕ್ತಿ
ಮಾನವರಿಗುಪಕಾರಿಯಾಗಿರ
ಲಾನು ತೋಱಿದೆನೀ ಪ್ರಕಾರವ
ನಾನು ನಿರ್ಲೇಪನು ಕಣಾ ಗೋರಕ್ಷ ಕೇಳೆಂದ || ೫೦ ||

ಆವಪರಿಗಳಲಾರ ಬುದ್ಧಿಯ
ಭಾವವಿಹುದವರವರಿಗಾ ಪರಿ
ಭಾವವನು ಶುದ್ಧೈಸಿ ಸಮ್ಯಗ್‌ಜ್ಞಾನ ಜ್ಯೋತಿಯನು
ತೀವಿ ಸುಖಿಗಳ ಮಾಡಲೋಸುಗ
ವೀ ವಿನೋದದಲಿದ್ದೆನಿಂತು ನಿ
ರಾವಲಂಬನು ನಾನೆಲೈ ಗೋರಕ್ಷ ಕೇಳೆಂದ || ೫೧ ||

೧. ಲ [ಬ, ಗ]; ಯೊಳ [ಉ.] ೨. ಹೊ [ಇ, ಖ, ಗ] ೩. ನಾ, ಆ ಮು, ಪ್ರ. ಲೀ. ೧೩.

ಅಱಿಯದವರಿಗೆ ಅಂಗಲಿಂಗದ
ತೆಱದಲಿಹೆ ನಾ[೧]ನೆನ್ನ ನೆಟ್ಟನೆ
ಯಱಿದ[೧] ಮಹಿಮಗೆ ಸಚ್ಚಿದಾನಂದಸ್ವರೂಪಾನು
ಬಱಿಯ ಮಾತಲ್ಲಾ ದೊಡಿದ ಕೋ
ಕುಱುಹು ತೆಱಹಿಲ್ಲೆಂಬ ಪರಿಯನು
ನೆಱೆ[೨] ಪರೀಕ್ಷೆಯ ಕೊಂಬುದೆಲೆ ಗೋರಕ್ಷ ಕೇಳೆಂದ ॥ ೫೨ ॥

ತೊಳಪ ತೇಜದ ಮುಗಿಲು ಮಿಂಚನು
ಝಳಪಿಸುವವೊ[೨]ಲು ಕೈಯ ಕುಱುಹಿನ[೩]
ಬೆಳಗ[೩] ಬಿದಿರಿಸಲುದರದಂ[೪]ದಪೈಕ್ಯವಾಗಿರಲು
ಕಳೆದು ತುಡುಕಲು ಕೈಗೆ ಬಯಲಿನ
ಹೊಳಹದಾಗಿರೆ ಕಂಡು ಗುರುವಿನ
ನಿಲುಕಡೆಗೆ ಬೆಱಗಾಗುತಿರ್ದನು ಬಳಿಕ ಗೋರಕ್ಷ ॥ ೫೩ ॥

ಸಾಕು ಸಾಕಿನ್ನೆಲ್ಲಿತನಕ ವಿ
ವೇಕತನದಾಳಾಪವೆನಗಿ
ನ್ನೇಕೆ ನಿಮ್ಮಯ ಮಹಿಮೆಯನು ನೋಡುವೊಡೆನ್ನಳವೆ
ಕಾಕುತನಗಳು ಹೋಗಲೆನಗೆ ನಿ
ರಾಕುಳ ಶ್ರೀಸಂಗದಂಗ[೧]ದ
ಜೋಕೆಯನು ಕೃಪೆ ಮಾಡಬೇಹುದು ಪ್ರಭುವೆ ಕೇಳೆಂದ ॥ ೫೪ ॥

ಗುರುವೆ ತಾನೆಂಬಂತೆ ಶಿಷ್ಯನು
ಗುರುವೆ ಚೆನ್ನಾಗಿರೆ ಪರೀಕ್ಷಿಸಿ
ಗುರುಪದವ ಬಳಿಕಿತ್ತು ಶಿಷ್ಯತ್ವವನು ತಾ ಹಿಡಿದು
ಗುರುಕುಮಾರಕನಹೆನು ದಿಟವಾ
ಪರಿಯಬೆನ್ನನು ಪರಿಕಿಸದೆ ಸ
ತ್ಪುರುಷನಹುದೋ ನೀನೆ ದಿಟ ಗೋರಕ್ಷ ಕೇಳೆಂದ ॥ ೫೫ ॥

೧-೧ ನಿ ನು ಎನ್ನನ ನೆರೆದ (ಇ) ೨-೨ ಲ್ ಕುಱುಹಿನಿಂದಲಿ (ಆ) ೩-೩ ಬೀಱುತೆಲಂತೆ (ಇ) ೪ ಲೆಂತರಂ (ಉ) ೪. ಪಡೆ (ಗ).

ಲಕ್ಷಿಸಿದನೀ ಪರಿಯಲಾ ಗೋ
ರಕ್ಷನಲಿ ಸಾಧಕತನಂಗಳ
ಲಕ್ಷಪರಿಯಲಿ ಬಳಿಕಲಾತನ ನೋಡಿ[1] ಕರುಣದಲಿ
ರಕ್ಷಿಸುವೆನೆಂದೆನುತ ಶೂನ್ಯದ
ಲಕ್ಷವನು ದೀಕ್ಷೆಯನು ಮಾಡಿದ
ಮೋಕ್ಷಮಾರ್ಗದಲಿಂದು ಗೋರಕ್ಷಂಗೆ ಪ್ರಭುರಾಯ || ೫೬ ||

ಪೊಂಗೆ ಪರಿಮಳವಿನಿದೆನಿಪ ಕ
ಬ್ಬಿಂಗೆ ತನಿವಣ್ಣಾದ ತೆಱದಲಿ
ಹಿಂಗದಾ ಗೋರಕ್ಷಗೀ ಪ್ರಭುಲಿಂಗನೊಲವಾಗೆ
ಮಂಗಳವೆ ನೆಲೆಯಾಯ್ತು ಮಾಯೆಯ
ಹೆಂಗು ಹಿಂಗಿತು ರಾಜಯೋಗದ
ಸಂಗ ಸಾಱಿತು ಬಳಿಕಲಾ ಗೋರಕ್ಷನಾಥಂಗೆ || ೫೭ ||

ಬಿದ್ದು ಹೋಯಿತು ಮನದ ಮಾಯಾ
ಬದ್ಧ ಭವಿತನ ನಿಮಿಷಮಾತ್ರಕೆ
ಹೊದ್ದಿ ಹೊಱಿಯೇಱಿದುದು ಸಮ್ಯಗ್ ಜ್ಞಾನಸಾರಾಯ
ಶುದ್ಧ ಸೂಕ್ಷ್ಮ ಸ್ಥೂಲಕಾಯವ
ಮೆಱೆದ್ದು ಕಾರಣಕಾಯದಲಿ ತಾ
ನಿದ್ದ ನಿಜವ[3] ವಿಳಾಸ[4]ದಲಿ ಗೋರಕ್ಷ ಜಗವಱಿಯೆ || ೫೮ ||

ಕೀಡಿ ತುಂಬಿಯ ಬಿಡದೆ ನೆನೆಮೊಡೆ
ನೋಡಲಾಕ್ಷಣ[5] ತುಂಬಿಯಾಗದೆ
ಜೋಡಿಸುಱಿಯಲು ವಜ್ರತನು ಗೋರಕ್ಷ ನಿಮಿಷದಲಿ
ಮಾಡಿಕೊಂಡನು ಭಕ್ತಿಯಲಿ ಕೈ
ಗೂಡಿ ವಿಮಲಾಕಾಶಕಾಯದ
ಜೋಡಣೆಯುನೆಸ್ಮೃಲ್ಲನುಪ್ರಭುಲಿಂಗಲೀಲೆಯಲಿ || ೫೯ ||

ಅಂತು ಗತಿ ೧೯ಕ್ಕಂ ಪದ ೮೪೯ಕ್ಕಂ ಮಂಗಳಂ

೧. ನೊೞಿದ (ಅ, ಇ, ಕ.). ೨. ಗೆ (ಉ.) ೩. ಸಿದ್ಧನಿರವೆ (ಅ; ಬ; ಕ, ಗ, ಚ)
೪. ನಿರಾಳ (ಉ.); ನಿವಾಸ (ಇ.) ೫. ಗಳೆ (ಕ.)

# ೨೦ ಮುನಿಗಳಿಗೆ ಬೋಧಿಸಿದ ಗತಿ

**ಸೂಚನೆ:**

ಸಾಧಕರು ಮೊದಲಾದ ವಿಷಯ
ವ್ಯಾಧಿಗತರಿಗೆ ತನ್ನ ಕರುಣಾ
ಮೋದಸುಧೆಯನು ಸುರಿದನೆಮ್ಮಯ ಗುರು ಗುಹೇಶ್ವರನು

ಜ್ಞಾನವನು ಗೋರಕ್ಷಗನುಸಂ
ಧಾನವೆನಿಸಿದ ಬಳಿಕ ತನ್ನ ಮ
ನೋನುರಾಗದಲಲ್ಲಮಪ್ರಭು ಲಿಂಗಲೀಲೆಯಲಿ
ಏನ ಮಾಡಿದ[೦]ನೆಂಬ ಹದನ[೧] ನಿ
ಧಾನಿಸುವುದು ಶಿವೈಕ್ಯಭಕ್ತಿಯ
ಮಾನಸಿಧಿಗಳು ಮುದದಲೀ ಪ್ರಭುಲಿಂಗಲೀಲೆಯಲಿ ॥ ೧ ॥

ಪ್ರೀತಿಯಲಿ ಗೋರಕ್ಷಗನುಪಮ
ನಾಥ ಪದವಿಯನಿತ್ತು ಬಳಿಕೊಲಿ
ದಾತನಲಿ ಗುರುಪೂಜೆಯನು ಕೈಕೊಂಡು ಕರುಣದಲಿ
ಭೂತಳದಲಜ್ಞಾನಿಗಳನಾ
ಸೋ[೨]ತಿತು ಸುಜ್ಞಾನಿಗಳ ಮಾಡುವೆ
ನಾತಗಳನೆಂದೆನುತಲಾ ಪ್ರಭುರಾಯ ಬರುತಿರ್ದ ॥ ೨ ॥

ಬರುತ ಬರುತಲಿ ತನ್ನ ಸಾಧಿಸಿ
ಕರುಣವನೆ ಸಲೆ ಪಡೆಯಬೇಕೆಂ
ದಿರುತಲಿಹ ಸಾಧಕತಪೋಧನರಾಶ್ರಮವ ಕಂಡು
ಕರುಣದಲಿ ಸುಜ್ಞಾನಧರ್ಮವ
ನೊರೆವೆನಿನ್ನೀತಗಳಿಗೆನುತಲಿ
ಗುರು ಗುಹೇಶ್ವರಲಿಂಗ ಬಂದನು ತನ್ನ ಲೀಲೆಯಲಿ ॥ ೩ ॥

೦-೧. ಪದನನೊಲಿದು (ಗ.) ೨. ಸಂ ತೋ (ಉ.); ಸು ನೋ (ಗ, ಜ.)

ಸಾಧನೆಗೆ ನಾನಾಪ್ರಕಾರಗ
ಳಾದ ಬಗೆಗಳನೆಡೆವಿಡದೆ ಬೆಸ
ಲಾದ ಮನಮಾಣಿಕವ ತನ್ಮ ಶರೀರಶರಧಿಯಲಿ
ಸಾಧಿಸಿಯೆ ಶಿವಸಾಣೆಯಲಿ ಸಲೆ
ತೇದು ಮಿಗೆ ಸುಜ್ಞಾನಕಾಂತಿಯ
ನೆಯ್ದಿಸುವುದನು ಪೇಳ್ದನಾ ಪ್ರಭು ತನ್ನ ಭಕ್ತರಿಗೆ ॥ ೪ ॥

ಮಿಱುಪ ಮನವೆಂದೆಂಬ ಮಣಿಯನು
ಕೊಱೆದು ನಿಷ್ಠಾವಜ್ರಸೂಚಿಯ
ಲುಱುವ ಜೀವಾನಿಲನ ದಾರವ ಹಿಡಿದು ಜೆಂಬಿಡದೆ
ನೆಱೆ ಶಿಖಾರತ್ನವನು ಮಾಡಿಯೆ
ಮೆಱೆವ ನಿತ್ಯಾನಂದಪದವಿಯ
[1]ನಿಱೆಗೆಯನು ನಿಯಮಿಸಿದನಾ ಪ್ರಭುಲಿಂಗ ಭಕ್ತರಿಗೆ[1] ॥ ೫ ॥

ಲೆ[2]ಪ್ಪವಿಲ್ಲದೆಯೂರ್ಧ್ವಬಿಂದುವೆ
ನಿಪ್ಪ ಪಶ್ಚಿಮವಾಹಿನಿಯಲಿಂ
ತೊಪ್ಪದಿಂದಲಿ ಮಿಂದು ಮೀಱುವ ಮೂಲನಾದವನು
ಅರ್ಪಿತಾ ಪ್ರಾಣ[3]ಸ್ವರೂಪದ
ಸುಪ್ರಭೆಯಲಿಹ ಸುಖವನಿತ್ತನು
ತಪ್ಪದಾ ಸಾಧಕತಪೋನಿಧಿಗಳಿಗೆ ಪ್ರಭುರಾಯ ॥ ೬ ॥

ಬಳಿಕಲಾ ಸಾಧಕತಪೋನಿಧಿ
ಗಳಿಗೆ ನಿರುಪಮ ನಿಃಪ್ರಪಂಚಿನ
ನೆಲೆಯ ನೆಟ್ಟನೆ ಕೊಟ್ಟು ತಾನಲ್ಲಿಂದ ನಡೆಗೊಂಡು
ತಳಿತ ತರುಲತೆ ಗುಲ್ಮತೃಣಸಂ
ಕುಲವ[4] ಚರಿಸುವ ಖಗಮೃಗದ ಕಳ
ಕಳದ ಕಾನನಮಧ್ಯದಲಿ ಬರುತಿರ್ದ ಪ್ರಭುರಾಯ ॥ ೭ ॥

೧-೧. ಲಿರಿಸುವುದ ಬೋಧಿಸಿದನೆಮ್ಮಯ ಗುರು ಗುಹೇಶ್ವರನು. (ಇ.) ೨. ಒ ಅ.: ಹೆ (ಇ) ೩. ಪ್ರಣಮ (ಒ, ಕ) ೪. ದಿ (ಇ, ಉ, ಖ, ಗ.)

ಕೊಲುವುದನೆ ಸಲೆ ಕೊಂದು ಹಸಿವಿನ
ಸೊಲಿಯನಳಿಯದೆ ನಾಡನಾಯ್ಗಳ
ಬಳಿವಿಡಿದು ನಾನಾ ಪ್ರಕಾರದ ಜೀವಜಾಲವನು
ಅಳಿದು ಹೊಟ್ಟೆಯ ಹೊರೆದು ದುರ್ಗತಿ
ಗಳಿವ ಲುಬ್ಧನನಂದು ಕಾನನ
ದೊಳಗೆ ಕಂಡನು ಕರುಣದಿಂದಾ ಪ್ರಭು ಸಮೀಪದಲಿ || ೮ ||

ತನ್ನ ಕಣ್ದೆದಿರಾದ ಮೂಢನ
ನಿನ್ನು ತಿಳುಹದೆ ನಾನು ಹೋಹುದು
ನನ್ನ ಹೆಮ್ಮೆಗೆ ಕೊಜಿತೆಯನುತ ಕಿರಾತಗೊಲವಿನಲಿ
ತನ್ನ ಕರುಣದ ಸಿದ್ಧರಸ ಕಾ
ಬೊನ್ನಿನಂದದ ಖಳನನೊಳ್ಳಿಹ
ಹೊನ್ನ ಮಾಡಲೆ ಬೇಹುದೆನುತಾ ಪ್ರಭು ನಿರೀಕ್ಷಿಸಿದ || ೯ ||

ನೆಲಸಿದಾಹಂಕಾರಮೃಗವನು
ಸುಲಲಿತಾಂತಃಕರಣಶುನಕನ
ಬಳಿಸಲಿಸಿ¹ ಮಾರುತಶರಾಸನವನು ದೃಢೀಕರಿಸಿ
ಚಲಿಸದೇಕೋಭಾವಶರದಲಿ
ಕೊಲುವ ಭೇದವನಾತ್ಮ ತೃಪ್ತಿ²ಗೆ
ನಿಲುವೆ ನಿಜಗೆಯ ಪೇಳ್ದನಾ ಪ್ರಭು ಬೇಂಟೆಕಾಱಂಗೆ || ೧೦ ||

ಉಸುರುವಲೆ ಮೈಗಾಡು ಬುದ್ಧಿಯ
ಬೆಸುಗೆ ಕೈ ನಿಶ್ಚಲದ ಮನವೇ
ಮಿಸುಪ ಕಂಗಳು ತಿಳಿವೆ ಲುಬ್ಧಕನಾಗಿ ಹಮ್ಮೆಂಬ
ಅಸಮಖಗಮೃಗ ಜಲಚರವನೊ
ದಿಸುತ ಸುಜ್ಞಾನಾಗ್ನಿಯಲಿ ಪಚ
ನಿಸಿಯೆ ದಣಿಯುಣಕಲಿಸಿದನು ಪ್ರಭು ಬೇಂಟೆಕಾಱಂಗೆ || ೧೧ ||

೧. ವಿಡಿದು (ಒ. ಕ.) ೨ ತುಷ್ಟಿ (ಇ.)

ಈ ಪರಿಯಲಾ ಸರ್ವಜೀವದ
ಯಾಪರವನುಪದೇಶಿಸಿಯೆ ನಿ
ರ್ಲೇಪದಲಿ ನಿಲಿಸಿದ ಪುರಾತನನಾ ಕಿರಾತಂಗೆ
ಆ ಪರವ ನೆಱೆಯಱುಪಿ ನಿತ್ಯ
ಶ್ರೀಪದವನೊಲಿದಿತ್ತು ತೆರಳಿದ
ನಾ ಪರಬ್ರಹ್ಮಸ್ವರೂಪ ಪ್ರಭು ವಿನೋದದಲಿ ॥ ೧೨ ॥

ಕಾಮಿನಿಯರಿಗೆ ಸೋತು ಕಾಮನ
ಸೀಮೆಯಲಿ ಸಲೆ ಸತ್ತು ಹುಟ್ಟುವ
ಕಾಮಿಗಳಿಗಾ ಕುಂಡಲೀಶಕ್ತಿಯ¹ಮಹಾರತಿಯ
ನೇಮಿಸಿಯೆ ನಿರ್ವಾಯದಲಿ ನಿ
ಸ್ಸೀಮನಿತ್ಯಾನಂದಸುಖದು
ದ್ದಾಮತೆಯನೊಲಿದಿತ್ತನಾ ಪ್ರಭುಲಿಂಗ ಕೆಲಬರಿಗೆ ॥ ೧೩ ॥

ರಸದ ಸಿದ್ಧಿಯ²ಸಸಿನೆಯಱಿಯದೆ
ವ್ಯಸನ²ವಿಧಿಯಲಿ ಸತ್ತುಹುಟ್ಟುವ
ಪಶುಗಳಿಗೆ ಬಳಿಕಂತರಂಗದ ಬಿಂದುವೆಂದೆಂಬ
ರಸವ ಕಟ್ಟಿ ಭಯಂಗಳನು ವ
ರ್ಜಿಸುವ ಪರಿಯನು ಕೆಲಬರಿಗೆ ಬೋ
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ ॥ ೧೪ ॥

ಬಿಂದುವೇ ರಸವೌಷಧಿಯ ನಿ
ಸ್ಪಂದವಾಯು ಮನಸ್ಸು ಮೂಷಿಕೆ
ಸಂದ ಮಣಿಪೂರಕವೆ ಕಿಚ್ಚುನ್ಮನಿಯೆ ರಸಘುಟಿಕೆ
ಮುಂದೆ ರುದ್ರೇಶ್ವರ ಸದಾಶಿವ
ರಿಂದ ಮೀಱಿದ ಸುಖವೆ ಸಿದ್ಧಿಗ
ಳೆಂದು ನಿಯಮಿಸಿ ಕೆಲರನಾ ಪ್ರಭು ಸಿದ್ಧನೆನಿಸಿದನು ॥ ೧೫ ॥

(೧. ಸ್ಥಾನದ ಅ, ಕ.) ೨-೨. ಸರಿಯ ದುದ್ಯೋಗಿಸಿದ ( ಬ, ಖ, ಗ); ಸೇವೆಯರಿದು ದ್ವೇಶ (ಉ.)

ಏನ ಹೇಳುವೆನೀ ಪರಿಯಲ
ಜ್ಞಾನಿಗಳು ಹಲಬರಿಗೆ ಸಲೆ ಸು
ಜ್ಞಾನಮಾರ್ಗವ ತೋಱಿ ಸಮ್ಯಙ್ಮುಕ್ತರೆನಿಸುತಲಿ
ತಾನೆ ತನ್ನಯ ಕರುಣದಿಂದಲಿ
ಮಾನವರ ಮನದಂಧಕಾರಕೆ
ಭಾನುವಾದನು ಗುರು ಗುಹೇಶ್ವರಲಿಂಗ ಲೀಲೆಯಲಿ ॥ ೧೬ ॥

ಬರುತ ಬರುತೀ ಪರಿಯಲುತ್ತರ
ಧರಣಿತಳದಲಿ[1] ಋಷಿಗಳಾಶ್ರಮ
ವಿರಚಿಸುವ ತನಿರಸದ ಪರಿಪಾಕ[2]ದ ಫಲಾವಳಿಯ
ತರುಲತಾಳಿಯ ತಿಳಿಗೊಳಂಗಳ
ವರ ನಿನಾದದ ವಿಹಗವಿತತಿಯ
ನೆರವಿಗಳಲೊಪ್ಪುವ ಮಹಾಕಾನನವ ಪ್ರಭು ಕಂಡ ॥ ೧೭ ॥

ಕಾಲಕಾಲದ ನಿತ್ಯಕರ್ಮವ
ಮೇಳವಿಸಿ ಬಳಿಕಾ ಕ್ಷುದಾಗ್ನಿ
ಜ್ವಾಲೆಯಾಹುತಿಗಾಗಿ ಬಹ ಭಿಕ್ಷುಕಮುನೀಶ್ವರರ
ವೇಳೆಯಱಿದುಚಿತದಲಿ ಸಂಘ[3]ಲ
ದಾಳಿಗಳನೊಲದೀವ ತರುಲತೆ
ಯೋಳಿ ವನದಲಿ ಮೆಱೆವುತಿರ್ದುವು ಕೂಡೆ ಕತ್ತಲಿಸಿ ॥ ೧೮ ॥

ತೃಷೆಯ ಕಳೆವರು ಬನ್ನಿ ಹೊಟ್ಟೆಯ
ಹಸಿವನಳಿವರು ಬನ್ನಿ ಬಟ್ಟೆಯ
ಬಿಸಿಲಿನಲಿ ಧೂಪಿಸಿದ ಪಥಿಕರು ಬನ್ನಿಯೆಂದೆ[4]ನುತ
ಹೊಸತೆನಿಪ ತನಿವಣ್ಣ ತರುಗಳ
ಪಸರಿಸಿದ ಕೊಂಬಿನಲಿ ಕುಳ್ಳಿತು
ಪ್ರಸುರಿಕೊಡುವಂತುಲಿದುವಲ್ಲಿಯ ಶುಕಪಿಕಾಳಿಗಳು ॥ ೧೯ ॥

೧. ಎಲ್ಲಿಯು (ಉ) ೨. ಅಪರಿಮಿತ (ಚ) ೩. ತ್ಫ (ಅ, ಜ.) ೪. ನೀವೆ (ಗ, ಚ.)

ಆರು ಬೇಡಿದವರಿಗೆ ಬೇಡಿದ
ಭೂರುಹಂಗಳ ಫಲಗಳಿವೆಯೆಂ
ಡೋರಣಿಸಿ ಕರೆಕರೆವೊಲು ನಾನಾ ಪ್ರಕಾರದಲಿ
ಸಾರವೆನಿಪ ನಿನಾದಗಳು ಸಲೆ
ಪೂರವಿಸಲಾ ವನದೊಳಗೆ ಗಂ
ಭೀರಸ್ವರದಲಿ[1] ಕೂಗುತಿರ್ದುವು ಕೂಡೆ ಖಗನಿಕರ ॥ ೨೦ ॥

ನಡೆವ ವೃದ್ಧ ಮುನೀಂದ್ರರಿಗೆ ಕೈ
ಗುಡುವ ಕಪಿಗಳು ಕಾಲಕರ್ಮವ
ನಡೆಸಲೆಂದು ನದೀತಟಾಕದ ಬಿಸಿಯ ಬಿಸಿಲೊಳಗೆ
ಬಿಡದೆ ಬಿದ್ದಿಹವರಿಗೆ ಪಕ್ಷಿಯ
ಕೊಡೆಯುವೊಲು ನೆಳಲಾಗಿ ಗಿಳಿಗಳ
ಗಡಣ ಮಂಡಳಿಸಿಹವು ಗಗನದೊಳಾ ವನಾಂತರದೆ ॥ ೨೧ ॥

ಬಡ ತಪಸ್ವಿಯ ಬಹಳ ಜಡೆಗಳ
ಮುಡಿಯ ತಾನೇ ಮಾಡಿ ಬಂಧಿಸಿ
ಬಿಡದೆ ಬಿಗಿದಿಹವುತ್ತಮಾಂಗದ ಬಾಲ ಸರ್ಪಗಳು
ಬಿಡದೆ ಪವನನಿರೋಧಿಗಳ ಜೀವ
ದೊಡಲನಾಱಿಸಲೆಂದು ಕಿವಿಗಳ
ಕೊಡವುತಿಹ ಮಱಿಯಾನೆ ಮೆಱೆದುವು ತದ್ವನಾಂತರದೆ ॥ ೨೨ ॥

ಆಸನಸ್ಥಿರರಾಗಿ ತಪದುಪ
ವಾಸದಿಂದಿಹವರಿಗೆ ನೆಮ್ಮುವ
ದಾಸಿಯಾಗಿಯೆ ಮಂಡಲಿಸಿ ಮಲಗಾದ ಹೆಬ್ಬುಲಿಯ
ಬೇಸಱದೆ ಸೊಂಡಿಲಲಿ ಮೊಗೆತಂ
ದಾಶ್ರಮಕೆ ತಣ್ಣೀರ ಜಳೆಯುವ
ಸೂಸುತಿರುತಿಹ ಭದ್ರಹಸ್ತಿಯುಲೊಪ್ಪಿತಾ ವನವು ॥ ೨೩ ॥

೧. ರವ (ಖ.) ೨. ತನದೊಳು (ಉ.)

ಮೇಳವಿಸಿ ಮುಂಜಿಗಳ ಮಾಡುವ
ಬಾಲಕರಿಗಾ ಮೆಡೆಯ ಹುಲ್ಲನು
ಸೀಳಿ ಸೀಳಿ ಸಮೀಪದಲಿ ಕೈಗೈವ ಕರಡಿಗಳ
ಲೀಲೆಯಲಿ ಯಜ್ಞೋಪವೀತದ
ನೂಲಿಗೆಂದುಬುಜದ ನಾಳವ
ನೋಳಿಯಿಂ ತಂದಿಡುವ^೧ ಹಂಸೆಯಲೊಪ್ಪಿತಾ ವನವು || ೨೪ ||

ನಂದಬಾರದ ಹೋಮದಗ್ನಿಯು
ನಂದಲೀಯದೆ ಶುಷ್ಕಸಮಿಧೆಯ
ತಂದು ನೆಜಿ^೨ ಪೊತ್ತಿಕ್ಕಿ ಹೊಗೆಸುವ ವೃದ್ಧಕಪಿಗಳಲಿ
ಬಂದು ಪಕ್ಕವ ಬೀಸಿ ಮಾರುತ
ನಿಂದಲಗ್ನಿಯ ಪಟುವ ಮಾಡುತ
ನಿಂದು ನರ್ತಿಸಿ ನಲಿವ ನವಿಲಿನಲೊಪ್ಪಿತಾ ವನವು || ೨೫ ||

ಸಾವಧಾನದಲೊಜಿಗಿ ಸಲೆ ಸಂ
ಭಾವಿತದಲಿಹ ಮುನಿಗಳಿಗೆ ನೀ
ದ್ರಾವಿಳಾಸತೆ ಲೋಗರಿಂದಳಿಯದ ಉಪಾಯದಲಿ
ತಾವೆ ಬಂದಾ ಪರ್ಣಶಾಲೆಯ
ನೋವಿ ಬಾಗಿಲ ಕಾಯ್ದುಕೊಂಡಿಹ
ವಾ ವನಾಂತದೊಳಲ್ಲಿಗಲ್ಲಿಗೆ ಪಂಚಮುಖನಿಕರ || ೨೬ ||

ಕೆಲರು ವೇದವನೋದುವರು ಕೆಲ
ಕೆಲರು ಶಾಸ್ತ್ರವ ಕೇಳುವರು ಕೆಲ
ಕೆಲರು ವೇದಾರ್ಥವನುಪನ್ಯಾಸವನು^೨ ಮಾಡುವರು
ಕೆಲರು ದರ್ಶನತರ್ಕಭೇದಂ
ಗಳನು ತಿಳಿವರದೆಲ್ಲಿ ನೋಡಲು
ತುಳುಕುತಿರ್ದುದು ಶಬ್ದಸಂಭ್ರಮವಾ ವನಾಂತದಲಿ || ೨೭ ||

೧. ದೀವ (ಉ, ಖ, ಜ, ಜ.) ೨. ಮಂತ್ರಪ ಜಪವ (ಉ.)

ಸಾರಣೆಯು ಮಾಡೆಂಬುವರು ದೇ
ಹಾರಕೆಡೆ ಮಾಡೆಂಬುವರುವುಪ
ಹಾರಕೊಳ್ಳಿಹ ಕಂದಮೂಲವ ತನ್ನಿಯೆಂಬುವರು
ಸಾರ ಮಂತ್ರಾ[೧]ಗಮಗಳಲಿ ಕೆ
ಯ್ಯಾರೆ ಭೂತಿಯ[೨] ಮಾಡುವರುಗಳು
ನಾರಸೀರೆಯ ನೆಯ್ವವರು[೩] ಮೆರೆದರು ವನಾಂತದಲಿ[೩] || ೨೮ ||

ಬೇ[೪]ಹ ಧರ್ಮದ ಬೀಡು ಕರ್ಮಸ
ಮೂಹದಾಗರ ಸಗುಣಯೋಗ
ವ್ಯೂಹಪೊಡ್ಡಣೆ ಜಾತಿವರ್ಣಾಶ್ರಮದ ನೆಲೆ[೫]ಗಾಡು
ಸ್ನೇಹದಂಬುಧಿ ಯಜ್ಞವಿಧಿಯ ವಿ
ವಾಹಶಾಲೆಯಿದೆಂಬ ಋಷಿಸಂ
ದೋಹದಾಶ್ರಮವಿದ್ದುವಾ ಕಾನನದ ಮಧ್ಯದಲಿ || ೨೯ ||

ಉಡುವುದಾದೊಡೆ ನಾರು ಹಸಿದುಂ
ಡೊಡೆ ಸದಾ ವನತರುಫಲಂಗಳು
ತೊಡುವುದಾದೊಡೆ ಭೂತಿ ಹೆಕ್ಕೆಯ[೬] ಹಾಸ ನೋಡಿದೊಡೆ
ಕಡವಸಗಳಿಹ ವಾಸವಾದೊಡೆ
ಯಡವಿ[೭]ಯೀ ಸಂಸಾರ ಮುನಿಗಳ
ಬಿಡದಲಾ ಎಂದೆನುತಲ[೭]ಲ್ಲಮ ನೋಡಿ ಬೆರಗಾದ || ೩೦ ||

ನಾರುಸೀರೆಗೆ ಮರನುಗಳನಾ[೮]
ಹಾರದಾಸೆಗೆ ಕಂದಮೂಲವ
ನೀರತೃಷೆಗನವರತ ನಾನಾ ನದಿ ಸರೋವರವ
ಹಾರಿಕೊಂಡಿಹ ಘೋರತರ ಸಂ
ಸಾರಮುನಿಗಳ ಬಿಡದುವುಳಿದರ
ನಾರುಬಲ್ಲರು ನುಡಲೆನುತಲಲ್ಲಮನು ಬೆರಗಾದ || ೩೧ ||

೧. ದಿವ್ಯಾ (ಕ.) ೨. ಹೋಮದ (ಜ,) ೩-೩ ಗಳಕ್ರೊಪ್ಪಿತಾಪಸರು (ಚ.) ೪. ದೇ (ಇ, ಉ, ಗ.) ೫ ವೀ. (ಇ.); ನಾ (ಖ) ೬. ಫಲಗಳ (ಜ.) ೭-೭. ಮುನಿಗಳು ಬಿಡಹಲಾ ಎನು! ತೊಡಸೊಡನೆ ಕರುಣದಲಿಯ ೮. ಗಳನು ಆ (ಇ.)

ಸ್ನಾನ ಜಪ ತಪ ನಿತ್ಯನಿಯಮ
ಧ್ಯಾನ ವೇದಾಧ್ಯಯನ ಯಜ್ಞ ವಿ
ಧಾನ ವೊದಲಾಗಿರ್ದ ನಾನಾ ವಿಧದ ಗೊಡವೆಗಳ
ಏನ ಮಾಡಿದರೇನು ಜೀವದ
ಹಾನಿ ಹರಿಬವನ [1]ಜೀಯಲಜೀಯರು
ಕಾನನವ ಹೊಕ್ಕೇನು ಫಲವೆನುತಿರ್ದನಲ್ಲಮನು ॥ ೩೨ ॥

ಎಲ್ಲಿತನಕಲಿ ಮಾಯೆ ತನಗು
ಳ್ಳಲ್ಲಿ ಮುಟ್ಟಲಿ ಕಲಿತು ಜೀವವ
ಕೊಲ್ಲದಿರಲಿಕೆ ಬಾರದವ ಕೊಂದವಗೆ ಕೊಳೆ ಬಿಡದು
ಎಲ್ಲಿ ಹೊಕ್ಕೊಡೆ ಮಾರಿ ತನ್ನಯ
ಹಲ್ಲ ಬಾಯಲಿ ತಿಂದು ತೇಗದೆ
ನಿಲ್ಲದವರನು ಸುಡಲಿ ಮಾಟವನೆಂದನಲ್ಲಮನು ॥ ೩೩ ॥

ಮಾಟದಲಿ ಗತವಾಗಿ ಭವಭವ
ಕೋ[2]ಟಿಯಲಿ ಸಂಸಾರದುಃಖದ
ಕೊಟವನೆ ಕೈಗೈವ ಮುಖ್ಯಮುನೀಂದ್ರರೆಲ್ಲರನು
ದಾಟಿಸುವೆನಾ ಭವಭವಾಬ್ಧಿಯ
ನಾಟಿಸುವೆನವರಜೀವಿಗಜೀವನು
ಮಾಟವೆಲ್ಲವ ಮಾಣಿಸುವೆನೆನುತಿರ್ದ ಪ್ರಭುರಾಯ ॥ ೩೪ ॥

ಮುಂದೆ ಮಾಡುವ ಮಾಟಕೂಟದ
ದಂದುಗಂಗಳ ತನುಮನಂಗಳ
ಕೊಂದೆಸೊ|ಜೆಯು ಮಾಟದಿಂದಿವರುಗಳ ಬಗೆಬಗೆಯ
ಸಂದ ಮಾಯಾಪಾಶದಾಶಾ
ಬಂಧನಂಗಳ ಬಿಡಿಸಿ ಪರಮಾ
ನಂದ ಸುಖಿಗಳ ಮಾಡುವೆನು ನಾನೆನುತ ಗುರು ಬಂದ ॥ ೩೫ ॥

೧. ಹ (ಉ, ಖ, ಚ) ೨. (ಉ.)

ಅದಱೊಳಗೆ ಕೆಲಕೆಲರು ಯಜ್ಞದ
ವಿಧಿಯ ವಿರಚಿಸುತಿರಲು ಕಾಣುತ
ಅದಱಲೇನುಂಟಕಟ ಬಂಧನಮೋಕ್ಷವಾದಪುದೆ
ಇದಿರಲಿದಿರಿಟ್ಟಾವ ಕರ್ಮವ
ನೊದಗಿ ಮಾಡಲು ದುಃಖವಲ್ಲದೆ
ಸದಮಲ ಸ್ವಾತಂತ್ರಸುಖವಿಲ್ಲೆಂದ ಗುರುರಾಯ || ೩೬ ||

ಜನನಮರಣಭ್ರಮೆಯ ಭವಬಂ
ಧನಕೆ ತಾಱದ ಕರ್ಮವೇ ಕಾ
ರಣವಲಾ ಕೈವಲ್ಯಪದವಿಯನೊಲಿವ ಜೀವರಿಗೆ
ಇನಿತನೇನು[೧]ವನಱಿಯಲಱಿಯದೆ
ಮನಸಿನಿಚ್ಛೆಗೆ ಹರಿವುದನುಚಿತ
ವೆನುತಲುಪದೇಶಿಸಿದನಾ ಪ್ರಭು ಮುನಿಜನಂಗಳಿಗೆ || ೩೭ ||

ಲೇಪಿಸಿದಹಂಕಾರವೇ ಪಶು
ಯೂಪಕಂಭವೆ ಮನಸು ಪವನ
ಸ್ಥಾಪಿತವೆ ಬಂಧಿಸುವ ಪಾಶ ವಿವೇಕವೇ ಶಸ್ತ್ರ
ವ್ಯಾಪಿಸಿದ ಸುಜ್ಞಾನವಹ್ನಿ ಸ
ದಾ ಪುನೀತಮಯಾತ್ಮನಧ್ವರಿ
ಯೀ ಪರಿಯ[೨]ನಱುಹಿಸಿದನಾ ಪ್ರಭು ಪರಮ ಮುನಿ[೨]ಗಳಿಗೆ || ೩೮ ||

ಮಿಥ್ಯವೆಲ್ಲವು ಹೋಮದಾಹುತಿ
ತಥ್ಯವೇ ಶೇಷಪ್ರಸಾದವು
ನಿತ್ಯನಿರ್ಮಲ ನಿಜದ ಪರಮಾನಂದವೇ ತೃಪ್ತಿ
ಸತ್ಯ ಶಾಶ್ವತ ಸ್ವಸ್ವರೂಪದ
ತತ್ತ್ವವ ತಾನೆಂದಱಿವುದೇ ಫಲ
ವೃತ್ತಿಯೆಂದುಪದೇಶಿಸಿದನಾ ಪ್ರಭು ಮುನಿವ್ರಜಕೆ || ೩೯ ||

೧. ಅಮಲ ನೇಮ (ಉ.) ೨-೨. ಲರುಹಿಸಲು ಪ್ರಭು ತಾ ಮುನಿಜನಂ (ಜ)

ಜಪವ ಮಾಡಿಸೊಡೇನಹುದು ಮೇಣ್
ತಪವ ಮಾಡಿಪೊಡೆ,ನಹುದು ಮೇ
ಣಪರಿಮಿತದುದ್ದೇಶಖಂಡಜ್ಞಾನಮಾರ್ಗದಲಿ
ಉಪನಯನ ಮೊದಲಾದ ನಾನಾ
ಚಪಳತರವಹ ಬಾಹ್ಯಭಾವನೆ
ಯುಪಚರಣೆ ಮುನಿಗಳಿಗೆಯನುಚಿತವೆಂದನಲ್ಲಮನು ‖ ೪೦ ‖

ಎನುತ ಯಾಗಕೆಯಾತ್ಮಯಾಗವ
ನನುರತಿಗೆ ನಿಜರತಿಯ ದೇವಾ
ರ್ಚನೆಗೆ ಹೃದಯವನುಪನಯನಕಾ ನಿಜ ನಿರೀಕ್ಷಣೆಯ
ಎನಿತು ಬಾಹ್ಯದ ಕರ್ಮಭಕ್ತಿಗ
ಳನಿತನಂತರ್ಮಾರ್ಗದಲಿ ಸೂ
ಚನೆಯ ಮಾಡಿದನಲ್ಲಮಪ್ರಭು ಪರಮ ಮುನಿಗಳಿಗೆ ‖ ೪೧ ‖

ಅವರು ತಿಳಿದರು ಮಾಯೆ ಹುಟ್ಟಿದ
ದಿವಸದಲಿ ದೂರ್ವಾಸಮುನಿಪತಿ
ವಿವರಿಸಿದ ಹದನಿಂದಲಾ ಪ್ರಭುವೀತನಹುದೆಂದು
ತವಕದಲಿ ತಮತಮ್ಮ ಮನದು
ತ್ಸವವ ಹಡೆದು ಕೃತಾರ್ಥರಾದರು
ಭುವನದೊಳಗೆಮ್ಮಲ್ಲಮಪ್ರಭು ಲಿಂಗಲೀಲೆಯಲಿ ‖ ೪೨ ‖

ಸಾವ ಹುಟ್ಟುವ ವಿಧಿಯ ಮಾನವ೧
ಜೀವಜಾಳಕೆ೨ಯವರವರು ಮು
ನ್ನಾವ ಕಾಯಕವಿಡಿದು ತಾವಿಹರಾ ಪ್ರಕಾರದಲಿ
ಠೀವಿಯಂತರ್ನಿಷ್ಠೆಯಲಿ ನಾ
ನಾವಿಧೋಪಾಯವನು೩ ಬೋಧಿ೪ಸಿ
ಪಾವನವ ಮಾಡಿದನು ಸರ್ವರನೆಮ್ಮ ಗುರುರಾಯ ‖ ೪೩ ‖

೧. ಲಿಂಗಲೀಲೆಯಲಿ (ಕ) ೨. ಬಂಧನ (ಇ.) ೩. ದಲಿ ೪. ಬೋಧಿ (ಉ.)

ಭೂತನಾಥನ ನೇಮದಿಂದಲಿ
ಭೂತಳದೊಳಿಹ ಕಾರಣೇಕರ
ನೀತರದಲವರವರಿಗುಚಿತಜ್ಞಾನಮಾರ್ಗದಲಿ
ಓತು ಸದ್ಯೋನ್ಮುಕ್ತರೆನಿಸಿದ
ನಾತಗಳನೆಲ್ಲರನು ಲೀಲಾ[1]
ಪ್ರೀತಿಯಿಂ[2]ದೆಮ್ಮಲ್ಲಮಪ್ರಭುಲಿಂಗ ಲೀಲೆಯಲಿ[2] || ೪೪ ||

**ಅಂತು ಗತಿ ೨೦ಕ್ಕಂ ಪದ ೮೯೩ ಕ್ಕಂ ಮಂಗಳಂ**

೧. ಶ್ರೀಗುರು (ಜ.) ೨-೨. ದೆಲ್ಲರನು ನಮ್ಮಾಯ ಗುರು ಗುಹೇಶ್ವರನು (ಇ)

# ೨೧ ಬಸವೇಶ್ವರನು ಶೂನ್ಯಸಿಂಹಾಸನವನ್ನು ರಚಿಸಿದ ಗತಿ

ಸೂಚನೆ:

ತನ್ನೊಳಗೆ ತಾ ಸಾಧಿಸಿದ ಸಂ
ಪನ್ನತೆಯನಿದಿರಿಟ್ಟು ರಚಿಸಿದ
ಶೂನ್ಯಸಿಂಹಾಸನವನೆಮ್ಮಯ ಬಸವದಂಡೇಶ

ಗುರು ಗುಹೇಶ್ವರ ತಾನದಾರಿಗೆ
ಕರುಣಿಸಿದನವರವರನಾಕ್ಷಣ
ಪರಮ ಪದವಿಯಲಿರಿಸಿ ತಾನೊಲಿದಾಡುತಿರಲಿತ್ತ
ಗರುವ ಗುಣನಿಧಿ ಬಸವದಂಡೇ
ಶ್ವರನು ಕಲ್ಯಾಣದಲಿ ರಚಿಸಿದ
ಪರಿಯನೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ಬೇಸಱದೆ ನೆಱೆ ಪೂರ್ವಯೋಗಾ
ಭ್ಯಾಸದಲಿ ಪಶ್ಚಿಮದ ಪವನಾ
ವಾಸದಲಿ ಸರ್ವೇಂದ್ರಿಯಂಗಳ ನಿಗ್ರಹಂಗಳಲಿ
ಸೂಸದಂತಃಕರಣಶುದ್ಧಿಯ
ಭಾಸುರತೆಯಲಿ ಬಸವದಂಡಾ
ಧೀಶನೊಪ್ಪಿದನೈಕನಿಷ್ಠೆಯ ದಿವ್ಯತೇಜದಲಿ ॥ ೨ ॥

ಅರಿಗಳೆಂಬಭಿಧಾನವಡಗಿದ
ವರರೆ ಅರಿಷಡ್ವರ್ಗನೃಪರಿಗೆ
ನಿರುತ ನಿರ್ಮದವಾದಮಂಡಲಿಕಷ್ಟಮದಗಜಕೆ
ನೆರೆದ ತನುಗುಣರಾಜಿ ರಾಜಿಸಿ
ಪರಿಚರಿಯಕರರಾದರಿಂತೀ
ಪರಿಡುಳಿಸಿದುವು ಬಸವರಾಜನ ರಾಜಯೋಗದಲಿ ॥ ೩ ॥

೧. ಳ (ಇ, ಉ, ಕ) ೨. ವಾಕ್ಷಣ (ಉ)

ಹೇಳಿದಂತಿರಕಲಿತವಿಂದ್ರಿಯ
ಜಾಳವಾಜ್ಞಾಮಾತ್ರದಿಚ್ಛೆಗೆ
ಮೇಳವಿಸಿ ನೆಲೆಗೊಂಡವಂತಃಕರಣ ಶರಣೆಂದು
ಕೀಲಿಸಿದ ಕುಂಡಲಿಯ ಸರ್ಪನ
ಕಾಲುದೊಡಕದು ಸುಸರವಾಯಿತು
ಹೇಳಲೇನಾ ಬಸವರಾಜನ ರಾಜಯೋಗದಲಿ ॥ ೪ ॥

ಹೋಗ ಹೊಗಲಿಕೆ ಕುಂಡಲಿಯು ಹೆ
ಬ್ಬಾಗಿಲಲಿ ಕೆಡಹಿದನು ಕಾಮನ
ಮೇಗೆ ಹೃದಯಕವಾಟದಲಿ ಕಡಿದಿಕ್ಕಿದನು ಜವನ
ಲಾಗಿಸಿದನಖಿಳಾಧಿಪತ್ಯವ
ಭೋಗಿಸುವ ಭ್ರೂಮಧ್ಯಭುವನಕೆ
ರಾಗದಿಂದನುಭಾವಮುಖದಲಿ ಬಸವದಂಡೇಶ ॥ ೫ ॥

ಇಂತು ಸಲೆ ಸಂಧಾ[1]ನುಭಾವದ
ಲಂತರಂಗದ ರಾಜ್ಯವೆಲ್ಲವ
ಸಂತನಿಟ್ಟು ಸಮಸ್ತದಲಿ ಸಂಪನ್ನನಾಗಿರುತ
ಮುಂತೆ ನಿರ್ಗುಣ ಯೋಗಮಾರ್ಗವ
ನೆಂತು ಕಾಂಬೆನೆನುತ್ತ ಮನದಲಿ
ಚಿಂತಿಸುತಲಾ ಬಸವದಂಡಾಧೀಶನಿಂತೆಂದ ॥ ೬ ॥

ಗುರು ಗುಹೇಶ್ವರ ಚಾರುಚರಣಾಂ
ಬುರುಹಗಳ ನಾನಾವ ಪರಿಯಲಿ
ವ[2]ರಿಸಿಯೆನ್ನ ಮನಃಸಮಾಧಿಯನೆಂದು ಪಡೆದಪೆನೊ
ಪರಮ ಪುರುಷನದಾವ ವೇಷವ
ಧರಿಸಿ ಬಹನೋ ಆ ಮಹಾತ್ಮನ
ಹುರುಳನಾನೆಂತರುಹುವೆನೆನುತಲಿ ಬಸವ ಚಿಂತಿಸಿದ ॥ ೭ ॥

೧ ಸಸ್ವಾ (ಉ, ಘ, ಗ, ಚ,) ೨ ಧ (ಇ, ಉ, ಖ, ಜ,)

ಪ್ರ. ಲೀ, ೧೪.

ಆವ ವೇಷದಲಾದೊಡೆಮ್ಮಯ
ದೇವನೊಲಿದೈತಂದೊಡಾತನ
ಭಾವಭಣಿತೆಯನಱಿವವೊಲು ನಾನೊಂದುಪಾಯವನು
ತೀವಿ ತೆಕ್ಕನೆ ಸಿಕ್ಕಿಸುವೆನಾ
ನಾವ ಪರಿಯಿಂದಾದೊಡೆಯು ಮ
ಜ್ಜೀವಿತೇಶನನೆನುತಲಾ ಬಸವಣ್ಣನನುಗೆಯ್ದು ॥ ೮ ॥

ಅನುಗೊಳಿಸಿದನು ಶೂನ್ಯಸಿಂಹಾ
ಸನವಿದೆಂದದಕಿಟ್ಟು ಹೆಸರನು
ವಿನುತ ಪಶ್ಚಿಮಮಾರ್ಗದಲಿ ತಾ ಕಂಡುದೆಲ್ಲವನು
ಕನಕಮರಕತಮುಖ್ಯ ಮಣಿಗಳ
ಘನತರದ ಕೇವಣದ ಲಹರಿಯ
ಮಿನುಗ ಮಿಸುಗುವ ವಿಮಲ ಪೀಠವ ಬಸವ ನಿರ್ಮಿಸಿದ ॥ ೯ ॥

ಇಂದುಕಾಂತದ ಶಿಲೆಯಿಂ ಹಪ್ಪಳಿ
ಬಂಧಿಸಿದ ಸೋಪಾನ ಸುತ್ತಲು
ಹಿಂದೆ[೧] ಹೊರೆಗಾಣಿಸದ ಸಪ್ತಾವರಣಮಯಭಿತ್ತಿ
ಒಂದಱಿಂದೊಂದಧಿಕತರವೆನ
ಲೊಂದುಗೂಡಿದ ಶೂನ್ಯಪೀಠದ
ನಿಂದ ನಿಲವರಿದಾಯ್ತು ಲೋಕದ ಜನದ ಕಣ್ಮನಕೆ ॥ ೧೦ ॥

ಕೀಲಣೆಯ ನವ ರತುನರಾಜಿಯ
ಮೇಳವದ ಪ್ರತ್ಯೇಕ ಪಂಙ್ತಿಗ
ಳೋಳಿಯಲಿ ತೆತ್ತಿ[೨]ಸಿದ ತಳಪದ ಸಪ್ತಲೋಹ[೩]ಗಳ
ಯೇಲೆ ಮೇಲಡಕಿಲುಗಳಂದದ
ಲೇಳು ನೆಲೆಯಲಿ ಭಕ್ತಿಭೂಮೀ
ಪಾಲ ಬಸವನು ಶೂನ್ಯಸಿಂಹಾಸನವ ವಿರಚಿ[೪]ಸಿದ ॥ ೧೧ ॥

೧ ಹೊಂದಿ (ಇ. ಉ, ಮು.) ೨ ಕೀಲಿ (ಅ, ಕ.) ೩ ವೆ (ಇ, ಉ.) ೪ ನಿರವಿ (ಚ.)

ಹೊಱವಳಯದೊಂಬತ್ತು ಬಾಗಿಲು
ಮೆಱೆವ ಮಧ್ಯಕೆ ನಾಲ್ಕು ಬಾಗಿಲು
ನೆಱೆ ವಿರಾಜಿಸುವೆರಡು ಬಾಗಿಲು ಗರ್ಭವಳಯದಲಿ
ಮಿಱುಪ ಮೇಲಣ ಕೆಲಸಗತಿ ಕಣ್
ದೆಱೆ[1]ದ ಬಾಗಿಲು ಶಿಖರದಲಿ ಮಹ
ದಱುವಿನಂಬರಪೀಠವೆಸೆದುದು ಬಸವನಾಜ್ಞೆಯಲಿ || ೧೨ ||

ಸ್ವಾನುಭಾವಾಧಾರ ಸ್ವಾಧಿ
ಷ್ಠಾನ ಮಣಿಪೂರಕವನಾಹತ
ವಾ ನವೀನದ ಕೆಲಸಗತಿಯ ವಿಶುದ್ಧಿಯಾಜ್ಞೇಯ
ಸ್ಥಾನಗಳ ನೆಲೆಗೊಳಿಸಿ ಬ್ರಹ್ಮ
ಸ್ಥಾನವನು ಮೇಲೆ[2]ನಿಸಿ ರಚಿಸಿದ
ಮಾನನಿಧಿ ಬಸವಣ್ಣನೀಪರಿ ಶೂನ್ಯಪೀಠವನು || ೧೩ ||

ಪರಿವಿಡಿಯಲಿಳೆ ಸಲಿಲ ಪಾವಕ
ಮರುತ ಗಗನಾತುಮ ನಿರಾಳದ
ತರತರದ ಶಿವಭಕ್ತ ಮಾಹೇಶ ಪ್ರಸಾದಿಗಳ
ಪರಮ ವರದ ಪ್ರಾಣಲಿಂಗಿಯ
ಶರಣನೈಕ್ಯನ ಭೇದ ನೆಲೆಗಳ
ನೆರವಿಯಂತಿರೆ ಶೂನ್ಯಪೀಠವ ಬಸವ ನಿರ್ಮಿಸಿದ || ೧೪ ||

ನೆಲದ ನೆಲೆ[3]ಯಲಿ ಕಠಿಣತರವನು
ಜಲದ ನೆಲೆ[3]ಯಲಿ ರಸಮಯವನಾ
ಜ್ವಲನ ನೆಲೆಯಲಿ ಬಿಸಿಯ ಮರುತನ ನೆಲೆಗೆ ಮಾರುತನ
ಸಲೆ ನಭದ ನೆಲೆಗಂಬರವ ಮನ
ನಿಲುಕದನುಪಮದೆಡೆ[4]ಗೆ ಶೂನ್ಯವ
ನಿಲಿಸಿ ಬಸವನು ಶೂನ್ಯಸಿಂಹಾಸನವ ನಿರ್ಮಿಸಿದ || ೧೫ ||

೧ ಕ। ಜ್ಞರ (ಜ.) ೨ ಱಿ (ಅ, ಇ, ಚ, ಜ.) ೩ ಮತೆ (ಉ, ಬ.) ೪ ಸೆ (ತ.)

ಈಡೆ ಪಿಂಗಳ ವರ ಸುಷುಮ್ನಾ
ನಾಡಿಗಳು ಬಲಿದೆಂಟು ದಿಕ್ಕಿನ
ಕೋಡ ಕೈಯಲಿ ಮದಗಜಂಗಳು ಮೇಲು ನೆಲೆಯೊಳಗೆ
ಕೂಡ ಬೆಳಗುವ ಸೋಮಸೂರಿಯ
ರಾಡುತಿಹ ವೀದಿಗಳು ಭುವನದ
ಬೀಡಿದೆನಲಾ ಬಸವನೊಡ್ಡಿದನಂಬರಾಸನವ || ೧೬ ||

ಪರಮ ಪ್ರಣವವೆ ಬೇರು ಸಕಲ
ಸ್ವರವೆ ಬುಡ ವರ ಶೈವಪಂಚಾ
ಕ್ಷರಿಯೆ ಶಾಖೆ ಸುವರ್ಣ ಕುಸುಮಗಳಕ್ಷರಾಳಿಗಳು
ವ[೧]ರ ಪದಾರ್ಥವೆ ಫಲಗಳೆಂಬಂ
ತಿರಲು ನಾದಮಹೀಜದೊಲು ವಿ
ಸ್ತರಿಸಿದುದು ಮಣಿಮಯದ ತರುವಾ ಶೂನ್ಯಪೀಠದಲಿ || ೧೭ ||

ಆ ಮರನ ಹಬ್ಬಿರ್ದ ಲತೆಯವೊ
ಲಾ[೨] ಮಹಾಶಿವತತ್ತ್ವದಹಿಯ ಫ
ಣಾಮಣಿಯ ಬೆಳಗೆನೆ ಪರಂಜ್ಯೋತಿ ಪ್ರಕಾಶತೆಯ
ಸೀಮೆಯೆನಲಾ ಪ್ರತಿನಿಧಿಗೆ ನಾ
ನಾಮಯದ ನೆಮ್ಮುಗೆಯ ನಿಲಿಸಿದ
ನಾ ಮನೋಹರ ಶೂನ್ಯಸಿಂಹಾಸನಕೆ ಬಸವಣ್ಣ || ೧೮ ||

ಅಳವಡಿಸಿದನು ಪಂಚಭೂತದ
ನೆಲೆಗಳಲಿ ಹದಿನಾಲ್ಕು ಲೋಕ[೩]ದ
ಹೊಲಿಗೆಯನು ಮೇಲಾತ್ಮತತ್ತ್ವದಲೈಕ್ಯಪದವಿಯನು
ನಿಲಿಸಿ ನಿರುಪಮ ನಿರ್ವಿಕಾರ
ಸ್ಥಲವನಲ್ಲಿಂದೇ[೪]ನೆಯ ತುದಿ
ನೆಲೆಯೊಡ್ಡಿ[೪]ದ ಶೂನ್ಯಸಿಂಹಾಸನಕೆ[೫] ಬಸವಣ್ಣ || ೧೯ ||

೧ ಪ. (ಇ.) ೨ ರೆಂ । ಬಾ (ಬ.) ೩ ಭುವನ (ಅ, ಉ, ಖ.) ೪ ಯ ನೋಡಿ (ಇ.)
೫ ದಿ (ಇ.)

ಅಲ್ಲಿಗಲ್ಲಿಗೆ ಬೇಹೆ ಶಕ್ತಿಗ
ಳಲ್ಲಿಗಲ್ಲಿಗೆ ಬೇಹೆ ನಾಡಿಗ
ಳಲ್ಲಿಗಲ್ಲಿಗೆ ಕರ್ಮಭಕ್ತಿಜ್ಞಾನತತ್ತ್ವಗಳು
ಅಲ್ಲಿಗಲ್ಲಿಗೆ ಸಗುಣನಿರ್ಗುಣ
ವೆಲ್ಲವನು ತಾ ಕಂಡ ತೆಱನಲಿ
ಪಲ್ಲವಿಸಿ ಬಸವಣ್ಣ ರಚಿಸಿ[೧]ದನಂಬರಾಸನವ || ೨೦ ||

ಅಂಡಪಿಂಡನ್ಯಾಯವೊಂದೇ[೩]
ಕಂಡಿರೇ ಎಂದೆಂಬುದನು[೪] ಭೂ
ಮಂಡಲದೊ[೫]ಳಾ ಶೂನ್ಯಸಿಂಹಾಸನದಲಱಿವಂತೆ[೫]
ದಂಡಿಯಾಗಿರೆ ನಿರ್ಮಿಸಿದನದ
ಕಂಡವರು ಬೆಱಗಾಗೆ ಬಸವನು
ದಂಡನಾಯಕನಲ್ಲಮನ ಬರವಿಂಗೆ ಭರದಿಂದೆ || ೨೧ ||



ಈ ತೆಱದಲ[೬]ನುಭವದಲಱಿದ ಮ
ಹಾತಿಶಯ[೭]ದ ಮನಸ್ಸಮಾಧಿಯ
ರೀತಿ[೭]ಯಂತಿರೆ ಶೂನ್ಯಸಿಂಹಾಸನವನಿದಿರಿಟ್ಟು
ಪ್ರೀತಿ ಮಿಗೆ ಸಿರಿದೆನಿಸಿ ನಾನಾ
ಜಾತಿಭಾವದಲೊಡ್ಡಿಯುಪಮಾ
ತೀತವೆಂದೆನೆ ಬಸವದಂಡಾಧೀಶ ವಿರಚಿಸಿದ || ೨೨ ||

ಇನ್ನಱಿಯಬಹುದಾವನಿಂತೀ
ಶೂನ್ಯಸಿಂಹಾಸನವನೇಱಿದೊ
ಡೆನ್ನ ಹೃದಯಾಂಬುಜರವಿ ಪ್ರಭುರಾಯನಹುದೆಂದು
ತನ್ನೊಳಗೆ ನಿಶ್ಚೈಸಿ ನಿಜ ಸಂ
ಪನ್ನತೆಯಲಿರುತಿರ್ದನವನೀ
ಮಾನ್ಯನೆಮ್ಮಯ ಬಸವದಂಡಾಧೀಶನರ್ತಿ[೮]ಯಲಿ || ೨೩ ||

೧ ಮಾಗ-ದೊ । ಳೆ (ಕ, ಗ, ಮು.) ೨ ನೋಡಿ (ಉ.) ೩ ವನು ನೀವ್ (ಜ.) ೪ ಬುದ ನೊಳಿದು (ಬ.) ೫-೫ ಳರಿವಂತೆ ಸಿಂಹಾಸನವ ನೆರೆ ಬಲಿದು (ಜ.) ೬ ಸನ (ಬ, ಕ.) ೭ ರೀತಿಯಂಸು ವಿರಚಿಸಿ। ಖ್ಯಾತಿ (ಬ.) ೮ ಭಕ್ತಿ (ಗ.)

ನಡೆವ ಗತಿಯಲಿ ಹಂಸೆಯನು ಸರ
ವಿಡುವಗತಿಯಲಿ ಕೋಗಿಲೆಯ ನುಣ್[೧]
ನುಡಿಗಳಿಂದ[೨]ಲಿ ರಾಜಕೀರನನಱೀವ ತೆಱನಂತೆ
ಸೆಡಗರಿಸಿದೀ ಶೂನ್ಯಪೀಠವ
ನಡಱಿ ನಿಲುವ ಮಹಾತ್ಮನೇಯೆ
ನ್ನೊಡೆಯನಹುದಹುದೆಂದು ನಿಶ್ಚೈಸಿದನು ಬಸವಣ್ಣ || ೨೪ ||

ಕಂಗಳಿದಿರಿನ ಕತ್ತಲೆಯನು ಪ
ತಂಗನಲ್ಲದೆ ಕಳೆಯಬಹುದೇ
ಅಂಗಸಹಜಾನಾದಿಗತ ಮಾಯಾ[೩]ತಮಂಥವನು
ಹಿಂಗಿಸುವೊಡಾ ಗುರು ಗುಹೇಶ್ವರ
ಲಿಂಗನೆಯ್ತಂದಲ್ಲದಹುದೇ
ಸಂಗ ತಾನೇ ಬಲ್ಲನೆಂದೆನುತಿರ್ದ ಬಸವಣ್ಣ || ೨೫ ||

ತೃಷೆಯ ಕಳೆ[೪]ಯಲಿ ಬಹರು ಕೆಲಬರು
ಹಸಿವ ಕಳೆಯಲಿ ಬಹರು ಕೆಲಬರು
ವ್ಯಸನಗಳಿಗರ್ಥವನು ಬೇಡಲಿ ಬಹರು ಕೆಲಕೆಲರು
ಸಸಿನೆ ಬಂದೀ ಶೂನ್ಯಪೀಠದ
ದೆಸೆಯ ನೋಡು[೫]ವ ಪರಮ ಪುರುಷರ
ಹೆಸರ ಕಾಣೆನದೇನ ಹೇಳುವೆನದಱ ಕೌತುಕವ || ೨೬ ||

ಆರು ಬಲ್ಲರು ಬಸವನೊಡ್ಡಿದ
ಪ್ರೇರಣೆಯನೆಂದೆನುತಲೆಲ್ಲರು
ದೂರದಲಿ ನೆಱೆ ನೋಡಿ ಬೆಱಗಹರಲ್ಲದದಱನುವ
ಆರು ಬಲ್ಲವರಾರು ಮೊಗಸುವ
ರಾರು ಹುಗುವವರಾರು ಮಹವಿ
ಸ್ತಾರವೆನಿಸಿದ ಶೂನ್ಯಸಿಂಹಾಸನದ ಸುಳಿವಳಿಯ || ೨೭ ||

೧ ಸಾ (ಇ); ನಡೆ (ಖ.) ೨ ವ ಪರಿಯ (ಒ.) ೩ ವಿಭ್ರ ಮ (ಜ.)
೪ ನಳಿ (ಒ.) ೫ ನಡರು (ಕ.)

ಹುತ್ತಿನೊಳಗಣ ಹೊಳ್ಳ ಹಾವಿಂ
ಗೆತ್ತ ಹೋದೊಡೆ ಸುಸರ[1]ವಲ್ಲದೆ
ಮತ್ತೆ ಮಿಕ್ಕಿನ ಜೀವಜಾಳಕಭೇದ್ಯವಾದ[2]ಂತೆ
ಎತ್ತ ಬಲ್ಲರು ಭಕ್ತರಲ್ಲದ
ಮತ್ತ ಭವಿಗಳು ಶೂನ್ಯಪೀಠದ
ಬಿತ್ತರವನೆಂದೆನುತ ಬೆಱಗಾದುದು ಬುಧಸ್ತೋಮ || ೨೮ ||

ಮಂತ್ರ ಹಠ ಲಯ ರಾಜಯೋಗದ
ಸಂತೆಗಳ ಶಬ್ದಗಳ ಜಾಣರು
ಯಂತ್ರವಾದಿ[3]ಗಳಾರು ದರ್ಶನ ವೇಷಧಾರಿಗಳು
ಇಂತು ಮೆಱೆವವರೆಲ್ಲರೆಮ್ಮ ಮ
ಹಂತನೊಡ್ಡಿದ ಶೂನ್ಯಪೀಠದ
ಚಿಂತೆಯನೆ ವಿಸ್ತರಿಸ[4]ರೇನೆಂದೆಂಬೆನಚ್ಚರಿಯ || ೨೯ ||

ಸಾಱ ಲಕ್ಕದ ಮೇಲೆ ತೊಂಬ
ತ್ತಾಱುಸಾವಿರ ಮಿಂಡಜಂಗಮ
ಮೀಱ ಬಾಲರು ವೃದ್ಧರೆಯ್ತಹುದೆಣಿಕೆಗಱವೆನಿಸಿ
ಹೇಱ ದಣಿದರು ತಮ್ಮ ಮನಸ್ಸಿಗೆ
ತೋಱಿದಿಷ್ಟಾರ್ಥಂಗಳಿಂದಲಿ
ನೀಱ[5] ಬಸವನ ಮನೆಯಲುನದಿನವಖಿಳ ಜಗವಱಿಯೆ || ೩೦ ||

ಏನನೆಂಬೆನು ಬಸವನಾ ಸು
ಜ್ಞಾನಸಿಂಹಾಸನವ ತನ್ನ ಮೆ
ಹಾನುಭಾವದ ಭಣಿತೆಯಂತೆ ಸಮಸ್ತ ವಿಧದಿಂದೆ
ತಾನು ನಿರ್ಮಿಸಿ ಬಳಿಕ ತನ್ನ ಮ
ನೋನುರಾಗದಲಮಳಹೃದಯ
ಧ್ಯಾನದಲಿ ನೆಱೆ ನೆನೆವುತಿರ್ದನು ಗುರುಗುಹೇಶ್ವರನ || ೩೧ ||

**ಅಂತು ಗತಿ ೨೧ಕ್ಕಂ ಪದ ೯೨೪ಕ್ಕಂ ಮಂಗಳಂ**

೧ ಸಸಿನ (ಇ, ಉ. ಖ, ಗ, ಚ.) ೨ ವಪ್ಪ (ಕ, ಚ.) ೩ ಧಾರಿ (ಬ, ಕ, ಜ.)
೪ ಬರಲಮ್ಮ (ಉ, ಖ, ಗ, ಚ.) ೫ ವೀರ (ಅ, ಇ, ಗ.)

# ೨೨. ಪ್ರಭುದೇವರು ಶೂನ್ಯಸಿಂಹಾಸನವನೇರಿದ ಗತಿ

ಸೂಚನೆ :

ಪ್ರಾರ್ಥನೆಗೆ ಪರಿಣಮಿಸಿ ಕಾರಣ
ಕರ್ತುವೆನಿಸಿದ ಗುರು ಗುಹೇಶ್ವರ
ಮೂರ್ತಿಗೊಂಡನು ಶೂನ್ಯಸಿಂಹಾಸನದ ಶಿಖರದಲಿ

ಪ್ರತಿರಹಿತ ಪರಮಾರ್ಥ ಚಾರಿ
ತ್ರತೆಯನೊಳಗೊಂಡಪ್ರಮೇಯನ
ಗತಿಯ ಗಂಭೀರತೆಯ ನಿರ್ದೇಹಿಯ ನಿಜಾ[೧]ಕೃತಿಯ
ಮತಿಯುತರು ಮಿಗೆ ತತ್ತ್ವವಿತ್ತುಗ
ಳತಿಶಯದಿ ಲಾಲಿಸುವುದೀ ಸಂ
ಗತಿಯ ಸಂಗ್ರಹಿಸಿದ[೨]ಮಹಾ ಪ್ರಭುಲಿಂಗ ಲೀಲೆಯಲಿ ॥ ೧ ॥

ದೂರದಲಿ ಪತಿಯಿರಲು ಸತ್ಕುಲ
ನಾರಿ ಪುಷ್ಪಿತೆಯಾಗಿ ಸಲೆ ಸುಕು
ಮಾರನಾಪೇಕ್ಷೆಯಲಿ ತನ್ನಯ ವಲ್ಲಭನ ಬರವ
[೩]ಹಾರುವಂತೆ ಶಿವಾನುಭಾವವಿ
ಚಾರದಿಂದಲಿ ನಿ[೪]ತ್ಯಸುಖಮಯ
ಕಾರಣಕೆ ಬಸವಣ್ಣ ಬಯಸಿದನಲ್ಲಮನ ಬರವ[೩] ॥ ೨ ॥

[೫]ಹೆಣ್ಣಿ ಹನ್ನೆರಡಬ್ದವಾಯಿತು[೫]
ಶೂನ್ಯಸಿಂಹಾಸನವನಕಟಾ
ಎನ್ನ ಗುರುವಿನ್ನೆಂದು ಬಿಜಯಂಗೈದು[೬] ಕರುಣದಲಿ
ಕಣ್ಣಬಣನನು ತಿಳುಹಿ ತೆ[೭]ಕ್ಕನೆ
ತನ್ನ ಮೂರ್ತಿಯ ತೋಱಿ ತೊಲಗದೆ
ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ ॥ ೩ ॥

೧ ರಾ (ಅ, ಜ) ೨ ಸಡಗರಣೆಯ (ಜ) ೩-೩ ಹಾರಿಕೊಂಡಿರುತಿಪ್ಪವೊಲು ಕರು। ಣಾರಸಾರ್ಣವ ಗುರುಗುಹೇಶ್ವರ। ಬಾರನೇ ಎಂದೆನುತ ಚಿಂತಿಸುತಿರ್ದ ಬಸವಣ್ಣ (ಗ.) ೪ ಸ (ಉ.) ೫-೫ ಹನ್ನೆರಡು ವರ್ಷಗಳು ಸಂದಲು (ಗ.) ೬ ಬಹನೋ ತನ್ನ (ಉ.) ೭ ಚಿ (ಗ.)

ಅರಸನಱಿಯದ ಬಿಟ್ಟಿಗೆಲಸದ
ಪರಿಯಲಾಯಿತೆ ಎನ್ನ ಮಾಟದ
ಪರಿಕರಣೆ ಫಲವೀಯಲಱಿಯದೆ ಶಿವ ಮಹಾದೇವ
ಹರ ಹರಾ ಎಂದೆನುತ ಚಿಂತಾ
ತುರತೆಯಲಿ ಹೊಱಗೊಳಗನಾಲಿಸು
ತಿರುತಲಿದ್ದನು ಬಯಸಿ ಬರುವನು ಬಸವನಲ್ಲಮನ ‖ ೪ ‖

ಆತನಂತಃಕರಣವಾತನ
ಮಾತ ಕೇಳುವವಾಗಿ ದಿಟ ಬಳಿ
ಕಾತನಾಜ್ಞಾಮಾತ್ರದಿಂದಾ ಸ್ಥೂಲ ತನುವಿನಲಿ
ಓತಿರಲು ಬೇಡೆಂದೊಡಾಗಳೆ
ಭೀತಿಯಿಂದೊಳವೊಕ್ಕು ತಮ್ಮಯ
ಧಾತುಗೆಟ್ಟಿಹವೇನನೆಂಬೆನು ಬಸವನನುಭವವ ‖ ೫ ‖

ಈ ತೆಱದಲಾ ಶಿವಸಮಾಧಿ
ಪ್ರೀತಿಯಿಂದಿರಲೊಂದು ದಿನ ತಾ
ನೋತು ತನ್ನಯ ಸುಲಲಿತಾಂತರ್ಮುಖದ ಮುಕುರದಲಿ
ಪ್ರೀತಿಯಲಿ ತನಗಲ್ಲಮಪ್ರಭು
ವೈತಹುದನೊ[೧]ಲಿದಮಲತತ್ತ್ವವಿ
ಭೂತಿಯನು ತನಗೀವುದನು ನೆಱೆ ಕಂಡ ಬಸವಣ್ಣ ‖ ೬ ‖

ಕಂಡು ಕಡು ಸಮ್ಮಾನ ಸುಖವೆಡೆ
ಗೊಂಡು ರೋಮಾಂಚನದ ಬಿಗುಹಿನ
ದಂಡಿ ಕಡು[೨] ದಟ್ಟೈಸುತಿರೆ ಬಳಿಕಿತ್ತಲಾ ಮನವ
ಮುಂಡಿಸಿದನಾ ಸ್ಥೂಲಕಾಯದ
ಮುಂಡೆಯಲಿ ಪಸರಿಸಿದುವಾಗಳೆ
ತಂಡತಂಡದ ನಾಡಿಗಳು ಬಸವಣ್ಣನವಯವದ ‖ ೭ ‖

೧ ರುತಲೊ (ಉ.) ೨ ಮಿಗೆ (ಓ.ಕ.)

ಬಲದ ಭುಜ ಬಲಗಣ್ಣು ಬಲವ್ಮೈ
ಯಲುಗ ತೊಡಗಿದುದೊಡನೊಡನೆ ಮಿಗೆ
ನಲಿವುತಿರ್ದುದು ಚಿತ್ತ ಚಿಂತಾಯಕನ ಬರವಿಂಗೆ
ಒಲಿದು ಬಳಿಕಾ ಹದನನೆಲ್ಲವ
ತಿಳುಹಿದನು ವಿಸ್ತರಿಸಿ ಭಕ್ತಿಗೆ
ತಿಲುಕವೆನಿಸಿದ ಚೆನ್ನಬಸವಣ್ಣಂಗೆ ಬಸವಣ್ಣ ||೮||

ತಡೆಯದೀಕ್ಷಣವಿಷ್ಟ೧ಸಿದ್ಧಿಯ
ಕೊಡುವ ಶುಭಸೂಚನೆಗಳಾದುವು
ಬಿಡು ದುಮ್ಮಾನವ ಕಟ್ಟೆಸಿನ್ನೇಳುಪ್ಪರದ ಗುಡಿಯ
ಅಡಸಿ ವೇದನಿಕಾಯವಱಿಸಿದೊ
ಡಡಿಯ ತೋಱಿಸದಮಲ ಬೊಮ್ಮನೆ
ನಡೆದು ಬರುತಿಹನೆಂದು ನುಡಿದನು ಚೆನ್ನಬಸವಣ್ಣ ||೯||

ಭಣಿತೆಯಲಿ ಬಸವನ ನಿರೂಪದ
ಲಣಿವಱಿದು ಪುರದೊಳಗೆ ಗುಡಿತೋ
ರಣಪತಾಕೆಗಳಾದಿಯಾದ ಸಮಸ್ತ ಸಂಭ್ರಮವ
ಕ್ಷಣದೊಳಗೆ ರಚಿಸಿದರು ಸುರಪುರ
ಕೆಣೆಯೆನಲು ಸೌರಂಭದಿಂದಲಿ
ಕಣುಮನಕೆ ಕಲ್ಯಾಣ೨ವೇ ತಾನಾಯ್ತು ಕಲ್ಯಾಣ ||೧೦||

ಕತ್ತುರಿಯ ಕರ್ದಮದ ಕದಡಿನ
ಸುತ್ತುವಳಯದ೩ ತೊಳಗಿ ಬೆಳಗುವ
ಮುತ್ತಿನೋಳಿಯ ರಂಗವಾಲಿಯ ಚಿತ್ರವೀದಿಗಳ
ತೆತ್ತಿಸಿದ ಪೂವಲಿಯ ಪೂರದ
ಹೊತ್ತಿ ಹೊಗೆವ ಸುಗಂಧ ಧೂಪದ
ಲೆತ್ತನೋಡಿಸೊಡತ್ತ ಕಡು ಚೆಲುವಾಯ್ತು ಕಲ್ಯಾಣ ||೧೧||

೧ ವೃದ್ಧಿ (ಗ.) ೨ ಕೈಲಾಸ (ಇ. ಗ, ಚ.) ೩ ದಿ (ಕ.)

ತಳಿತ ಗುಡಿ ತೋರಣ ಪತಾಕೆಯ
ನೆಳಲು ರವಿಕಿರಣಗಳ ದಾಳಿಯ
ದಳದುಳಕೆ ಮಾಱಾಂತು ನಿಂದುವು ಬೀದಿ ಬೀದಿಯಲಿ
ಸುಳಿವ ಗಣಿಕಾಜನದ ನಗೆಗಂ
ಗಳ ವಿಳಾಸದ ಬೆಳಗು ಬೆಳುದಿಂ
ಗಳನೆ ಬೀಱುತ್ತಿರ್ದುದಾ ಕಲ್ಯಾಣಪುರದೊಳಗೆ ॥ ೧೨ ॥

ಮನದೊಡನೆ ಮನೆ ತಳಿತ ರೋಮಾಂ
ಚನದೊಡನೆ ಗುಡಿ ಹೆಚ್ಚಿ ಹಿಗ್ಗುವ
ತನುವಿನೊಡನೆ ಸಮಸ್ತಭಕ್ತಸ್ತೋಮ ನಿಮಿಷದಲಿ
ಅನುಕರಿಸಿ ಕೈಗೆಯ್ದು[೧]ದಾಗಳೆ
ಘನಕೆ ಘನವೆನೆ ಬಸವರಾಜನ
ಮನೆಯೊಳಾ ಪ್ರಭುರಾಯ ಬಹ ಮಂಗಳಮಹೋತ್ಸವಕೆ ॥ ೧೩ ॥

ಆವ ವೇಷವ ತೊಟ್ಟಿಹನೊ ಮೇ
ಣಾವ ಪಥದಲಿ ಸುಳಿವನೋ ದಿಟ
ವಾವ ವೇಳೆಯಲೊಲಿದು ಬಹನೋ ಶಿವ ಮಹಾದೇವ
ಭಾವಿಸುವೊಡಱಿದೆ[೨]ನುತಲಾ ಪ್ರಭು
ದೇವರಿಗೆ ತಾನಿದಿರುವೋಗುತ
ಲೀ ವಿಚಾರವನೆಣಿಸುತಿರ್ದನು ಬಸವದಂಡೇಶ ॥ ೧೪ ॥

ಇಡಿದ ಸರ್ವಾಂಗದ ವಿಭೂತಿಯ
ಜಡಿದ ರುದ್ರಾಕ್ಷೆಗಳ ಮಾಲೆಯ
ತೊಡಿಗೆಗಳ ಧವಳಾಂಬರಂಗಳ ಮೆಯ್ಯ ಮುಖಕಳೆಯ
ಮಡಿವಳಯ್ಯನು ಚೆನ್ನಬಸವನು
ಹಡಪದಪ್ಪಣ್ಣಗಳು ಸಹಿತವೆ
ನಡೆದನಿದಿರನು ಬಸವದಂಡಾಧೀಶನಲ್ಲಮಗೆ[೩] ॥ ೧೫ ॥

೧ ಕವಿಕವಿದು (ಬ, ಜ.) ೨ ತ ಪ್ರಭುವೆ (ಚ,) ೩ ಮನವೊಲಿದು (ಇ.)

ದೆಸೆದೆಸೆಯ ಕಂಪಿಡಲು ತ[೧]ನು ಲೇ
ಪಿಸಿದ ಮೆಯ್ಗಂಪುಗಳ ಭೂಷಣ
ವಿಸರ ಲಹರಿಯ ರತ್ನರಾಜಿಯು ಬೆರಕೆವೆಳಗುಗಳ
ಮುಸುಱ[೨] ಮುಂಗುಡಿಗಳಲಿ[೩] ಕೈವಾ
ರಿಸುವ ಕೈವಾರಿಗಳ ನೆರವಿಯು
ವಸುಮತೀಶರು ಸಹಿತ ನಡೆದನು ಬಸವದಂಡೇಶ ‖ ೧೬ ‖

ಎಡಬಲಂಗಳೊಳೆಯ್ದೆ ಭಕ್ತರ
ಗಡಣ ಹಿಂಭಾಗದಲಿ ನಾನಾ
ಪೊಡವಿಪಾಲಕುಮಾರಕರ ಸಂದಣಿಯ ಸಂದೋಹ
ಬಿಡದೆ[೩]ಕೈವಾರಿಸುವ ನೆಲನು
ಗ್ಘಡಣೆಕಾಱರ[೩] ಮೊತ್ತಗಳು ಮುಂ
ಗುಡಿಯಲೊಪ್ಪಿರೆ ನಡೆದನಿದಿರನು ಬಸವದಂಡೇಶ ‖ ೧೭ ‖

ಮಾವುತರು ಮನ್ನೆಯರು ರಥಿಕರು
ರಾವುತರು ಕರಣಿಕರು ಕವಿಗಳು
ಭಾವಕರು ಭರತಜ್ಞರೆಲ್ಲಾ[೪] ಪರಿಯ ಪರಿಣತೆಯ
ಸೇವಕರು ಸಹಿತಲ್ಲಮಪ್ರಭು
ದೇವರಡಿಗಿದಿರಾಗಿ ನಡೆದನು
ಪಾವನಾತ್ಮಕ ಬಸವದಂಡಾಧೀಶನರ್ತಿಯಲಿ[೫] ‖ ೧೮ ‖

ಪರಿಪರಿಯ ಸತ್ತಿಗೆಯ ಸಾಲಿನ
ಪರಿಪರಿಯ ಚಾಮರದ ಚಾಳಿಯ
ಪರಿಪರಿಯ ಕೈಕಂಬಿಕಾಱರು ಜಡಿವ ಗಿಡಿಬಿಡಿಯ
ಪರಿಪರಿಯ ಮೆಯ್ವೊಡಹಿನುಲುಹಿನ
ಪರಿಪರಿಯ [೬]ಭುಜಬಲದ ಸುಭಟರ[೬]
ನೆರವಿ ಸಹಿತಿದಿರಾಗಿ ನಡೆದನು ಬಸವನಲ್ಲಮಗೆ ‖ ೧೯ ‖

೧ ಲಿಕ (ಚ.) ೨ ವರಿದು (ಚ.) ೩-೩ ವಾದ್ಯದ ಭರಕೆ ನೆಲಬಿಃ । ಳಿಡಲು ರಾಯರ (ಇ.) ೪ ರಾಪರಿ (ಇ.) ೫ ಲ್ತಿಯೊಳು (ಉ.) ೬-೬ ಸುಭಟರುಗಳೆಲ್ಲರ (ಬ,)

ಕನ್ನಡಿಯ ಕಳಸ[1]ಗಳ ವಿಳ[1]ಸದ
ಹೊನ್ನಗೇದಗೆಗಱಿಯ ಮುತ್ತಿನ
ಚೆನ್ನ ದಂಡೆಯ ಪೂವಿಡಿದ ನಱುಗಂಪುಗಳ ಮುಡಿಯ
ರನ್ನದಲಿ ರಂಜಿಸಿದ ತೊಡಿಗೆಗ
ಉನ್ನತಿಯ ಸಿಂಗಾರವೊ[2]ಪ್ಪುವ
ಕನ್ಯೆಯರು ಸಹಿತಿದಿರುವೋದನು ಬಸವನಲ್ಲಮಗೆ || ೨೦ ||

ನಡೆವ ಗಮಕದ ನಗುವ ಚೆಲುವಿನ
ನುಡಿಯ ನುಂಪಿನ ಸೊಬಗನೇ ಸಾ
ಲಿಡುವ ನೋಟದ ನಟಣೆಯನೆ ನಾಟಿಸುವ[3]ತನುಲತೆಯ
ಒಡನೆ ಕವಿತಹ ತುಂಬಿಗುಚಿತವ
ಕೊಡುವ ಮೆಯ್ಗಂಪುಗಳ ಸೊಂಪಿನ
ಮಡದಿಯರು ಪಿಡಿದೆಯ್ದುತಿರ್ದರು ಮಂಗಳಾರತಿಯ || ೨೧ ||

ಒಳುದೊಡೆಯ ನಸುದೋಱಲಿಕೆ ನಿಱಿ
ತೊಲಗೆ ನಳಿತೋಳುಗಳ ಬೀಸುವ
ಚೆಲುವಿಕೆಯುಲೋಸರಿಸೆ ಮೇಲುದ ತೋರಮೊಲೆಯಲುಗೆ
ಬಳಲು ಮುಡಿ ಬಸವಳಿಯೆ ಬಡನಡು
ಬಳುಕೆ ರವೆಯುದ ರತ್ನಭೂಷಣ
ಘುಲುಘುಲುಸುತಿರಲಿದಿರ ನಡೆದರು ವಾರವನಿತೆಯರು || ೨೨ ||

ಹಿರಿದು ಗರ್ಜಿಸುವಾನೆಗಳು ಕೇಂ
ಕರಿಸುತಿಹೆ ವಾಜಿಗಳು ದಿಗುತಟ
ಬಿರಿಯೆ ಚೀ[4]ಱುವ ಶಂಖ ಮೌರಿಯು[5]ಕೊಂಬು ಕಹಳೆಗಳು
ಧರಣಿಯುದಿರಲು ಗಿರಿಗಳುರುಳಲು
ನೆರೆದು ಮೊಳಗುವ ಭೇರಿ ತಂಬಟೆ
ಕರಡೆ[6] ನಿಸ್ಸಳ ಸಹಿತಲಿದಿರೆಯ್ದಿದನು[6]ಬಸವಣ್ಣ || ೨೩ ||

೧-೧ ದ ವಿಳಾ (ಇ,) ೨ ಕೊ (ಇ.) ೩ ನಟಸುತಿಹ (ಇ.) ೪ ಕೀ (ಕ.) ೫. ಬಲಮುರಿ (ಇ.) ೬-೬ ನಿಸ್ಸಾಳಗಳ ಧ್ವನಿಯುಲಿ ನಡೆದ (ಇ.)

ಎಲ್ಲಿ ನೋಡಲು ಛತ್ರ ಚಾಮರ
ವೆಲ್ಲಿ ನೋಡಲು ಸಿಂಧ ಸೀಗುರಿ
ಯೆಲ್ಲಿ ನೋಡಲು ಸೊಕ್ಕಿದಾನೆಯ ಸುಳಿವ ಹೆಕ್ಕಳವು
ಎಲ್ಲಿ ನೋಡಲು ಕುಣಿವ ಕುದುರೆಗ
ಳೆಲ್ಲಿ ನೋಡಲು ನಲಿವ ಪುರಜನ
ಪೆಲ್ಲಿ ಸಹಿತಿದಿರಾಗಿ ನಡೆದನು ಬಸವದಂಡೇಶ ‖ ೨೪ ‖

ಬೊಟ್ಟನನಿತು ವಿಭೂತಿಯಿಟ್ಟೊಡೆ
ಬೆಟ್ಟದನಿತು ಪಿಶಾಚತನವಳ
ವಟ್ಟು ನಿಲುವುದು ದಿಟವಲಾ ಬಱಿದೇಕೆ ಪುರದೊಳಗೆ
ಕಟ್ಟಿಸಿದ ಗುಡಿಗಳನು ಬಸವನ
ಕಟ್ಟಳೆಯೆ ಕಡುಚೋದ್ಯವೆನುತಲಿ
ಮುಟ್ಟಿಸಿದರಾ ಹದನನಾಗಳೆ ಖಳರು ಬಿಜ್ಜಳಗೆ ‖ ೨೫ ‖

ಕನಸಿನಲಿ ಪಕ್ವಾನ್ನಫಲಗಳ
ಘನತರವ ಕಂಡೆದ್ದು ಕರೆ ಬಿ
ದ್ದಿನರಿಗುಣಲಿಕ್ಕೆಂಬರಂತೀ[1] ಬಸವದಂಡೇಶ
ತನಗೆ ಶುಭಸೂಚನೆಗಳೊದಗಿದು
ವೆನುತ ವಿಭವದಲಿದಿರು ಹೋದನು
ಜನಪ ಚಿತ್ತೈಸೆಂದರಾ ಲಾವಕ[2]ರು ಬಿಜ್ಜಣಗೆ ‖ ೨೬ ‖

ಏನು ಕೌತುಕ ದಂಡನಾಯಕ
ನೇನ ನೆಗಳಿದನಾರು ಬಂದಹ
ರೇ[3]ನ ಕಂಡರದೇನನೆಂಬೆವು ಭಕ್ತರಭಿ[4]ಮತವ
ತಾನೆ ಬಲ್ಲನು ತನ್ನ ಮಹಿಮೆಯ
ನೇನ ನಾವೆನಬಹುದು ತುದಿಯಲಿ
ತಾನೆ ಕಾಣಲಿಬಹುದು ಕಾರಿಯವೆಂದನವನೀಶ ‖ ೨೭ ‖

೧ ತೆರವಲಿ (ಅ.); ತಿರೆ (ಇ.) ೨ ಚುಚ್ಚುಕ (ಇ.) ೩ ಬಲ್ಲರ । ದೇ: (ಇ,) ೪ ಸು (ಇ, ಉ, ಒ, ಜ.)

ಇತ್ತಲೀ ಹದನಾಯ್ತು ಬಳಿಕಿ
ನ್ನತ್ತಲಾ ಬಸವಣ್ಣ ತನ್ನಯ
ಚಿತ್ತದಲಿ ಚಿಂತಿಸಿದನಾ ಪ್ರಭು ಬಾರನೇ ಎನುತ
ಅತ್ತಲೀ ಸ್ಥಿತಿಗಣಿಯನಾ ಸ
ರ್ವೋತ್ತಮನು ಪ್ರಭುರಾಯ ಲೀಲಾ
ವೃತ್ತಿಯಿಂದಱಿದನುವ ನೆನೆದನು ತಾನೆ ತನ್ನೊಳಗೆ || ೨೮ ||

ವಂದನೆಯ ವೇಷಂಗಳಂದವ
ಹೊಂದದೆಲ್ಲರ ಕಂಗೆ ಪುರುಳಿನ
ಚಂದದಿಂಗಿತದಿಂದೆ ಸುಳಿದರೆ ಬಸವ ಬಳಿಕೆನ್ನ
ಅಂದದೊಳಗನು ತಿಳಿವನೋ ಮೇಣ್
ಮಂದಮತಿಯಾಗಿಹನೊ ನಾನಿದ
ನಿಂದು ನೋಡುವೆನೆನುತಲಾ ಪ್ರಭುರಾಯನನುಗೆಯ್ದ || ೨೯ ||

ಅಣಕಿಸುವ ಬಾಧಕರ ಬಾಯನೆ
ಟೊ[೧]ಣೆದು ಬಸವನ ಭಕ್ತಿಬಾರ[೨]ದ
ಹೊಣಕೆಯನೆ ಹುಂ[೩]ಕೊಂಡು ಪೂರೈಸಲಿಕೆ ಬೇಕೆನುತ
ಎಣಿಸಬಾರದ ನೆರೆದ ನೆರವಿಯ
ಕಣುಮನಕೆ ಕಾಣಿಸಿದನೊಂದೇ
ಕ್ಷಣದೊಳಗೆ ನಮ್ಮಲ್ಲಮಪ್ರಭುಲಿಂಗ ಲೀಲೆಯಲಿ || ೩೦ ||

ಬೀದಿಬೀದಿಗಳೊಳಗೆ ನೋಟ[೪]ಕ
ರಾದಿಯಾದ ಸಮಸ್ತ ಪುರಜನ
ವೆಯ್ದೆ ನಿರ್ಮಲವಾಗಿಯೊಂದೇ ಬಾರಿ ಕಾಂಬಂತೆ
ಆದಿಮಧ್ಯಾಂತಂಗಳಿಲ್ಲದ
ನಾದಿ ಸಿದ್ಧನು ಹಲವು ವ್ಯೆಯಲಿ
ಭೇದವಿಲ್ಲದೆ ಸುಳಿದನಾ ಪ್ರಭುಲಿಂಗ ಲೀಲೆಯಲಿ || ೩೧ ||

೧ ಸೊ (ಇ.) ೨ ವ (ಉ, ಕ.) ೩ ಕೈ (ಜ, ಮು.) ; ಮುಂ (ಗ.) ೪ ಸಾಧ (ಗ.)

ಪಟ್ಟಣಕೆ ಬೇಕಾಗಿ¹ ರಚಿಸಿದ
ಬಟ್ಟೆಬಟ್ಟೆಗಳೊಳಗೆ ನಡೆತಂ
ದಿಟ್ಟಣಿಸಿ ನೋಡುವರಿಗಲ್ಲಲ್ಲಿಗೆ ವಿನೋದದಲಿ
ನೆಟ್ಟನಾ ಪ್ರಭು ಕಪಟ² ಕಾಯದ
ಕಟ್ಟಳೆಯ ಕಾಣಿಸಿದನಂತದ
ನಿಟ್ಟಿಸುವೊಡಱಿದಾದುದೇನೆಂದೆಂಬೆನಚ್ಚರಿಯ ॥ ೩೨ ॥

ಬಿಟ್ಟ ಮಂಡೆಯ ಕೆಂಚುಗೂದಲ
ನಿಟ್ಟೊಡಲ ನಿಡುದೋಳ ತೊನಹಿನ
ಮುಟ್ಟದೆವೆಗಳ ನಟ್ಟ ನೋಟದ ಲಂಬಕರ್ಣಗಳ
ದಟ್ಟಡಿಯ ಮಲೆವಂಗದೊಲಹಿನ
ಕಟ್ಟಳೆಯ ಕಡು ಮರುಳು ವೇಷವ
ತೊಟ್ಟು ತೊ³ಟ್ಟನೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ॥ ೩೩ ॥

ಉಱುಗು ಟೊಂಕದ ಕುಂಟಗಾಲಿನ
ಬೆಱ⁴ತ ಬಿಂಕದ ಮೆಯ್ಯ ಬಿಗುಹಿನ
ತಱ⁵ದ ಬಾಸುಳ ಬದಿಯ ಮುಸುಱುವ ನೊಣದ ಹುಣ್ಣುಗಳ
ಕಿಱುನಗೆಯ ಕಟವಾಯ ಜೋಱಿನ
ಕುಱುಹನಡಗಿಸಿಕೊಂಡು ಹಸ್ತದಳ
ನಿಱಗೆಯಲಿ ನೆಱೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ॥ ೩೪ ॥

ನೋಡುವರ ನೆಱೆಯಟ್ಟೆ ಮುಟ್ಟಿಸಿ
ಯೋಡಿಹೋಗುತ ಮರಳಿ ಹಿಂದಕೆ
ಕೋಡಕೆಯ್ಯವರುಗಳನೇಡಿಸಿ ಬೀಳುತೇಳುತಲಿ
ಹಾಡುತಲಿ ನಲಿನಲಿದು ಹರಿಸುಟಿ
ಯಾಡುತಲಿ ನಾನಾ ವಿನೋದವ
ಮಾಡುತಿರ್ದನು ಜಗದೊಳಾ ಪ್ರಭುಲಿಂಗ ಲೀಲೆಯಲಿ ॥ ೩೫ ॥

೧ ಬೆರಗಾಗೆ (ಉ, ಜ.) ; ಚೆಲುವಾಗಿ (ಇ.) ೨ ವಿಕಟ (ಗ.) ೩ ನೆ (ಇ, ಉ, ಖ, ಗ, ಜ.) ೪ ಹೊಸಪರಿ (ಇ, ಜ.) ೫ ಳಿ । ದಾ (ಅ)

ಒಮ್ಮೆ ಶಿಶುವಹನೊಮ್ಮೆ ಗುರುವಹ
ನೊಮ್ಮೆ ಬಣಗಹನೊಮ್ಮೆ ಪಟುವಹ
ನೊಮ್ಮೆ ರೂಪಹನೊಮ್ಮೆ ಬಕ್ಕಟ[1] ಬಟ್ಟ[2] ಬಯಲ[2]ಹೆನು
ಒಮ್ಮೆಯಿಲ್ಲಿಹನೊಮ್ಮೆಯಲ್ಲಿಹ
ನೊಮ್ಮೆಯೆಲ್ಲಾಯೆಡೆಯೊಳಿಹ ಪರ
ಬೊಮ್ಮನಲ್ಲಮಲಿಂಗ ನಟಿಸಿದನೀ ಪ್ರಕಾರದಲಿ || ೩೬ ||

ಹಾಡಿದೊಡೆ ಹಾಡುವನು[3] ಪಾತ್ರವ
ನಾಡಿದೊಡೆ ತಾನಾಡುವನು[3] ಕೊಂ
ಡಾಡಿದೊಡೆ ಕೊಂಡಾಡುವನು ನಮಿಸಿದೊಡೆ ನಮಿಸುವನು
ನೋಡಿದೊಡೆ ನೋಡುವನು ಜೀವರು
ಮಾಡಿದಂತಿರೆ ಮಾಡಿ ನಿರ್ಗುಣ
[4]ಗಾಢವನೆ ಪಸರಿಸಿದನಾ[4] ಪ್ರಭುಲಿಂಗಲೀಲೆಯಲಿ || ೩೭ ||

ಕಂಡವರು ಬೆಱಗಾಗಿ ಬೆಬ್ಬಳೆ
ಗೊಂಡು ನೋಡುತಲಿರ್ದರಾತನ
ದಂಡಿಯನು ತಾವಱಯಲಱಯದೆ ಕೂಡೆ ಜನವೆಲ್ಲ
ಕಂಡನಾತನ ಕಪಟವೇಷದ
ಕಂಡಿಯನು ನೆಱೆ ನೋಡಿ ಭಾವಿಸಿ
ದಂಡನಾಯಕ ಬಳಿಕ ನಿಶ್ಚೈಸಿದನು ಗುರುವೆಂದು || ೩೮ ||

ನೆಲನ ಮಱೆಗೊಂಡಿಹ ನಿಧಾನದ
ಹೊಲಬನಂಜನವಿಡಿದ ಕಣ್ಣಿನ
ಬಲುಹನುಳ್ಳವ ಕಾಬವೊಲು ಕರ ವಿಕೃತವೇಷದಲಿ
ಸುಳಿವ ಸಾಕ್ಷಾದಪ್ರಮೇಯನ
ನಿಲವನಱದನು ಕರಣಗಳ ನಿ
ರ್ಮಲತೆಯೊಳು ನಿಶ್ಚೈಸಿ ಬಳಿಕಾ ಬಸವದಂಡೇಶ || ೩೯ ||

೧ ಯಂಕಟಾ (ಅ.) ೨-೨ ಬಯಲು ತಾನ (ಉ, ಗ, ಜ.) ೩-೩ ನರ್ತನ । ವಾಡಿದರೆ ಯಾಡುವನು ನೆರೆ (ಇ.) ೪-೪ ಗೂಢದಲಿ ಪರಿಚರಿಸಿದನು (ಇ.)

ಉಕ್ಕಿದುದು ಮನವಜಿುದು ಕಂಗಳು
ಮುಕ್ಕುಳಿಸಿದುವು ಮೂರ್ತಿಯನು ಕವಿ
ದೊಕ್ಕುವಾನಂದಾಶ್ರು ತಲೆದೋಜುದುವು ತನುಪುಳಕ
ಮಿಕ್ಕು ಮೀಗೆ ಮತಿ ಮಜಿದು ಹರುಷವು
ಹಕ್ಕೆಗೊಂಡುದು ನಲವಿನಲಿ ನ್ಯೆ
ಯಿಕ್ಕಿದನು ಬಸವಣ್ಣನಲ್ಲಮಲಿಂಗನಂಘ್ರಿಯಲಿ || ೪೦ ||

ಘನಮಹಿಮ ಶಿವಭಕ್ತರೆಲ್ಲರು
ತನತನಗೆ ಹರಿತಂದು ತನ್ಮ್ಮಯ[೧]
ತನುವನೀಡಾಡಿದರು ಬಳಿಕಾ ಪ್ರಭುವಿನಂಘ್ರಿಯಲಿ
ವನಿತೆಯರು ನಲವಿನಲಿ ಜಯ ಜಯ
ವೆನುತ ಕರನಖನಯನಗಳ ಬೆಳ
ಗನೆ ನಿವಾಳಿಸುತೆತ್ತುತಿರ್ದರು ಮಂಗಳಾರತಿಯ || ೪೧ ||

ಶರಣು ಶರಣೆಂದಿದಿರುಗೊಂಡರು
ತಿರುಗಿದುದು ಜನವೆಲ್ಲ ನೆರೆದ
ಬ್ಬರಿಸಿದುವು ವಾದ್ಯಗಳು ಮಿಗೆ ಕಲ್ಯಾಣಪುರದೊಳಗೆ
ಬರುತಲಿರ್ದನು ಸಕಲ ಪದದಲಿ
ಭರಿತನಾಗಿಯಿದೇನು ಮಹಿಮೆಯ
ಹರಹಿಕೊಂಡೆಯ್ತಂದನೋ ಪ್ರಭುಲಿಂಗ[೨]ಲೀಲೆಯಲಿ || ೪೨ ||

ಬಗೆವೊಡಾ ಹನ್ನೆರಡು ಯೋಜನ
ದಗಲವಾಗಿಯೆ ಬಹಳವೆನಿಸಿದ
ನಗರದೊಳಗೆಲ್ಲೆಲ್ಲಿ ನೋಡಿದೊಡಲ್ಲಿಯಲ್ಲಮನು
ಬಗಿದು ಹುಗಲೆಡೆಯಿಲ್ಲವೆಂಬವೊ
ಲಗಣಿತಪ್ರತಿಯಾಗಿ ಸುಳಿದನು
ಪೊಗಳ ಬಲ್ಲವರಾರು ದಿಟವಾತನ ಮಹಾತ್ಮೆಯನು * || ೪೩ ||

೧ ಸಾಷ್ಟಾಂಗಸಹಿತವೆ (ಕ, ಜ.) ೨ ತನ್ನ (ಇ.) * ಈ ಪದ್ಯವು 'ಇ' ಪ್ರತಿಯಲ್ಲಿ ಇಲ್ಲ.

ಕೇರಿಕೇರಿಯೊಳಾಡುತಿಹ ಸುಕು
ಮಾರಕರ ಕಂಡಾಡುವನು ಪರಿ
ವಾರದೊಳು ದಿಟದಂತೆ ಪಾಯಕತನವ ಪಸರಿಸುವ
ಆರು ಕಂಡರೆಯವರವೊಲು ಸಾ
ಕಾರನಾಗಿಹನಲ್ಲದೊಂದು ಶ
ರೀರ ತಾನಲ್ಲೆಂಬುದನು ತೋಱಿದನು ಪ್ರಭುರಾಯ ॥ ೪೪ ॥

ಹಸು ತೃಷೆಯ ಹೆರವರಿಯನಱಿಯದೆ
ಮಿಸುಗುವವೆ ಕಣ್ಣಾಲಿಗಳನಾ
ಡಿಸದೆ ನಡೆತಂದಾ ಮಹಾತ್ಮನ ಕೂಡೆ ನೋಡುತಲಿ
ಎಸೆವ ಪುರಜನವೆಯ್ದೆ ತಾವನಿ
ಮಿಷರ ತೆಱದಲಿ ಮೆಱೆಯುತಿರ್ದರು
ದೆಸೆದೆಸೆಯ ಬೀದಿಗಳಲಾ ಕಲ್ಯಾಣಪುರದೊಳಗೆ ॥ ೪೫ ॥

ಬಂದನಾಗಳೆ ಬಸವರಾಜನ
ಮಂದಿರಕೆ ಸಲೆ ಸಕಲ ಸಂಭ್ರಮ
ದಿಂದಲಾ ಪ್ರಭುಲಿಂಗ ಭಕ್ತಾಧೀನಯುಕ್ತಿ[1]ಯಲಿ
ಮುಂದೆ ಜಯಜಯವೆನುತ ಪರಮಾ
ನಂದದಲಿ ಪರಿಪರಿಯ ಭಕ್ತರ
ಸಂದಣಿಯ ಸೌರಂಭದಿಂದಾ ಶೂನ್ಯವಿಷ್ಟರಕೆ[2] ॥ ೪೬ ॥

ಜಗದ ಜಂತ್ರದ ಸೂತ್ರಧಾರಿಗೆ
ಸಗುಣ ನಿರ್ಗುಣನಹ ಮಹಾತ್ಮಗೆ
ಬಗೆದು ನೋಡಲು ಬಲ್ಲಿತಾ[3]ತಾವುದು ದಿಟ ವಿಚಾರಿಪ್ರೊಡೆ[4]
ಹಗಲುಗತ್ತಲೆಯೆನಿಸಿ ಹಲಬರ
ಬೆಗಡುಗೊಳಿಸುವ ಶೂನ್ಯಪೀಠವ
ನಗುತಲಡಱಿದನಲ್ಲಮಪ್ರಭುಲಿಂಗ ಲೀಲೆಯಲಿ ॥ ೪೭ ॥

೧ ಪ್ರತ್ರಿ (ಒ.) ೨ ಪೀಠಕ್ಕೆ (ಉ, ಋ.) ೩ ಬಳಿಕದಾ (ಇ.) ೪ ಸದೆ (ಎ.)

ನಾಡಿಗಳನಾವಾವ ಪರಿಯಲಿ
ತೀಡಿ ಜೀವರ ದೇಹಯಂತ್ರವ
ನಾಡಿಸುವವೊಲು ಶೂನ್ಯಸಿಂಹಾಸನದ ಸೂತ್ರವನು
ಕೂಡಿ ನೋಡಿ ಷಡುಸ್ಥಲದ ಸವ
ಜೋಡನೆಲ್ಲವ ಮುಟ್ಟಿ[೧] ಮುಂದಕೆ
ನೀಡಿ ನಡೆದೇಱಿದನು ಬಳಿಕಾ ಪ್ರಭು ವಿನೋದದಲಿ ॥ ೪೮ ॥
ಅಱುಚಕ್ರವನಾಱು ಶಕ್ತಿಯ
ನಾಱು ಮತಿಗಳನಾಱು ಗತಿಗಳ
ನಾಱುವರ್ಣ[೨]ವನಾಱು ನಿರ್ಣಯವಾದ ಸಂಪದವ
ಆಱು ಪರಿಯಲಿ ಸವೆದು ಸಲೆ ನೆಲೆ
ದೋಱುವೆಡೆಗಳನೆಯ್ದೆ ನೋಡುತ
ಲೇಱುತಿರ್ದನು ಶೂನ್ಯಸಿಂಹಾಸನವ ಪ್ರಭುರಾಯ ॥ ೪೯ ॥
ಕುಂಡಲಿಯನಂಡಲೆದು ರವಿಶಶಿ
ಮಂಡಲಂಗಳ ಮೀಱಿ ಕಾಮದ
ಕಂಡಿಗಳ ಕೀಲಿಸಿ ಸುಷುಮ್ನಾನಾಳದೊಳಗಡಱಿ[೩]
ಮಂಡಿಸಿದನಾ ಶೂನ್ಯಪೀಠದ
ಮಂಡೆಯೊಳು ತೊಳತೊಳಗಿ ಬೆಳಗಿಯು[೪]
ಖಂಡ ತೇಜೋಮೂರ್ತಿಯಲ್ಲಮಲಿಂಗ ಲೀಲೆಯಲಿ ॥ ೫೦ ॥
ಪ್ರಣವತರು[೫]ವನೆ ನೆಮ್ಮಿ ಮಂತ್ರಾ
ಗ್ರಣಿಯ ಪಂಚಬ್ರಹ್ಮ ಸರ್ಪನ
ಫಣೆ[೬]ಯ ಮಣಿಯಿಂದತ್ತ[೬]ಲದ್ವೈತಸ್ಥಲಾದಿಗಳ
ಕಣಿಯನೆಲ್ಲವ ಕಳೆ[೭]ದು ನೆಱೆ ನಿ
ರ್ಗುಣ ನಿರಾಳದಲ[೮] ನಿರುಪಮದ ಮೇ
ಲಣ ಮಹಾಸನದಲ್ಲಿಯಾ[೯] ಪ್ರಭುಲಿಂಗ ಮಂಡಿಸಿದ ॥ ೫೧ ॥

೧ ಮುಱಿ ದು (ಜ.) ೨ ಭೂತ (ಉ, ಗ.) ೩ ಗಾಱಿ (ಗ.) ೪ ಗುವ (ಇ, ಉ, ಗ.) ಗುತ (ಜ.) ಗಿಹ (ಖ.) ೫ ಸು (ಉ.) ೬-೬ ಮಣಿಯುಬೆಳಗಿಂದ (ಇ.) ೭ ತ್ತಿ (ಗ, ಜ.) ೮ ಕುಳ (ಖ.) ೯ ಸದನದೊಳಗಾ (ಉ.)

ಅಲ್ಲಿಗಲ್ಲಿಗೆ ತಕ್ಕ ರೂಪಿನ
ಲ[1]ಲ್ಲಿಗಲ್ಲಿಗೆ ತಕ್ಕ ನಡೆಗಳ
ಲ[2]ಲ್ಲಿಗಲ್ಲಿಗೆ ತಕ್ಕ ಸಕಲೈಶ್ವರ್ಯ ಶಕ್ತಿಯಲಿ[3]
ಅಲ್ಲಿಗಲ್ಲಿಗೆ ಸುಳಿದು ಸೂತ್ರಗ
ಳೆಲ್ಲವನು ಚೇಷ್ಟಿಸುತಲೇಱಿದ
ನಲ್ಲಮಪ್ರಭು ಶೂನ್ಯಸಿಂಹಾಸನದ ಶಿಖರದಲಿ[4] || ೫೨ ||

ಆದಿಮಧ್ಯಾಂತಂಗಳಿಲ್ಲದ
ವೇದಶಾಸ್ತ್ರಂಗಳಿಗೆ ನಿಲುಕದ
ನಾದಬಿಂದುಗಳೆಂಬ ಸಂಪುಟದೊಳಗೆ ಸಮನಿಸದ
ಆದ[5]ರಿಸುವಾತ್ಮತ್ರಯಂಗಳ
ಹಾದಿಯಲಿ ಹೆಂಗಿಲ್ಲದನುಪಮ
ವಾದ ಘನಗುರು ಮೂರ್ತಿಗೊಂಡನು ಶೂನ್ಯಪೀಠದಲಿ || ೫೩ ||

ಭಾಪುರೇ ಬಸವಣ್ಣ ಭುವನ
ವ್ಯಾಪಿಯಹುದೈ ದಿಟ ವಿಚಾರಿಸ
ಲೀ ಪರಿಯಲಾ[6]ರಜೀವರಂತರ್ಮಾರ್ಗದೊಡ್ಡಣೆ[7]ಯ
ತ್ರೈಪುರಂಗಳನಳಿಯಬಲ್ಲ ಮ
ಹಾಪುರುಷ ನೀನೆನುತ ಹೊಗಳಿದ
ನಾ ಪರಬ್ರಹ್ಮಸ್ವರೂಪನು ದಂಡನಾಯಕನ || ೫೪ ||

ತಳಿತ ತನುವಿನ ರೋಮಕೂಪದ
ಕುಳಿಗಳೆಲ್ಲವು ಕಂಗಳಾಗಿರೆ
ಬಳಸಿ ಭಾವಿಸಿ ಪರಮ ಗುರುವಿನ ದಿವ್ಯಮೂರ್ತಿಯನು
ತೊಲಗದೀಕ್ಷಿಸಿ ಚಿತ್ತದಲಿ ಮು
ಕ್ಕುಳಿಸಿಯಾನಂದಾಶ್ರುಜಲಧಿಯಲಿ[8]
ತುಳುಕುತಿರ್ದನು ಬಸವದಂಡಾಧೀಶ ಭಕ್ತಿಯಲಿ || ೫೫ ||

೧ ಪ್ರಗ । ಳ (ಖ,) ೨ ಪೇಃಪಗ । ಳ (ಖ.) ೩ ಭಕ್ತಿಗಳ (ಖ.) ೪ ವಸು (ಉ.)
೫ ಧ (ಇ, ಗ, ಜ.) ೬ ನಾ (ಬ.) ೭ ಪೋಃವರಿ (ಇ.) ೮ ದಲಿ (ಗ.)

ಹಾಡುತಿರ್ದರು ಕೆಲರು ನೃತ್ಯವ
ನಾಡುತಿರ್ದರು ಕೆಲರು ಸೇವೆಯ
ನೂಡುತಿರ್ದರು ಕೆಲರು ಜಯ ಜಯ ಉಘೆ ಉಘೇ ಎನುತ
ನೋಡುತಿರ್ದರು ನಲಿದು[೧] ಭಕ್ತಿಯ
ಗಾಡಿಕಾಜಿರು ತಮುತಮುಗೆ ಹರಿ
ದಾಡುತಿರ್ದರು ಹರುಷದಲಿ ಗುರು ಮೂರ್ತಿಗೊಂಡಿರಲು ‖ ೫೬ ‖

ಹಲವು ಚೆಲುವಿನ ಭದ್ರಮಂಟಪ
ದೊಳಗೆ ನೆರೆದಿಹ ಜಂಗಮದ ಸಂ
ಕುಳದ ಭಕ್ತರ ಪರಿಚರರದ ಭಾವೆಯರ ಮಧ್ಯದಲಿ
ತೊಳಗಿ ಬೆಳಗುವ ಶೂನ್ಯಪೀಠದ
ನೆಲೆಯನೆಲ್ಲವ ಮೀಱ ಬಯಲಲಿ
ನೆಲಸಿ ನಿಂದನಿದೇನು ಮಹಿಮೆಯೊ ಗುರು ಗುಹೇಶ್ವರನ ‖ ೫೭ ‖

ಅಂತು ಗತಿ ೨೨ಕ್ಕಂ ಪದ ೯೮೧ಕ್ಕಂ ಮಂಗಳಂ

೧ ಪರಮ (ಇ.) ; ಕೆಲರು (ಬ.)

# ೨೩ ಪ್ರಭುದೇವರು ಆರೋಗಣೆ ಮಾಡಿದ ಗತಿ

ಸೂಚನೆ ;

ಒಸೆದು ತಾನುಂಡಖಿಳ ಜೀವರ
ಹಸಿವ ನೂಕಿದ ಲೋಕವಱಿಯಲು
ಬಸವರಾಜನ ಭಕ್ತಿವತ್ಸಲ ಗುರು ಗುಹೇಶ್ವರನು

ಅನುವಿಡಿದು ಗುರು ಲಿಂಗ ಜಂಗಮ
ದನು[೧]ವ ನಿಶ್ಚೈಸುವರು[೨] ನಿರ್ವಂ
ಚನೆಯ ಭಕ್ತಿಗೆ ತನು ಮನೋಧನಗಳನು ಸವೆವ[೩]ವರು
ವಿನುತ ಮತಿಯುತರೆಲ್ಲರತಿ ಮಂ
ದನೆಯ ಲಾಲಿಸಿ ಕೇಳಿ ಸುಖಿಸುವು
ದನುಪಮದ ಸಂಗತಿಯನೀ ಪ್ರಭುಲಿಂಗಲೀಲೆಯಲಿ ‖ ೧ ‖

ಬಯಲು ಸಿಂಹಾಸನದ ಮೇಲಣ
ಬಯಲು ಬಯಲಲಿ ತೊಳಗಿ ಬೆಳಗುತ
ಬಯಲ ತನುವಿಡಿದಲ್ಲಮಪ್ರಭು ಮೂರ್ತಿಗೊಂಡಿರಲು
ಪ್ರಿಯದಲುಬ್ಬುವ ಭುಲ್ಲವಿಪ ಬು
ದ್ಧಿಯನು ಬೋಳೈಸುತಲಿ ಬಳಿಕತಿ
ಶಯದ ಸತುಕರಣೆಗಳನನುಗೊಳಿಸಿದನು ಬಸವಣ್ಣ ‖ ೨ ‖

ಚೆನ್ನಬಸವನು ಬಾಚರಸನ
ಪ್ಪಣ್ಣ ಮಡಿವಳ ಮಾಚಿದೇವನು
ಕಿನ್ನರಿಯ ಬೊಮ್ಮಯ್ಯಗಳು ಮೋಳಿಗೆಯ ಮಾರಯ್ಯ
ಮಾನ್ಯತೆಯ ಶಿವಭಕ್ತರೆಲ್ಲರು
ಶೂನ್ಯಸಿಂಹಾಸನದ ಗುರುವಿನ
ಬಿನ್ನಣಕೆ ಬೆಱಗಾಗುತಿರ್ದರು ನಟ್ಟ ನೋಟದಲಿ ‖ ೩ ‖

೧ ತ್ರಸ (ಉ, ಕ, ಚ.) ೨ ಸುತ್ತಿ (ಕೆ.) ೩ ಸಲಿಸು (ಇ.)

ಬಂದು ಲಿಂಗಾರ್ಚನೆಯ ಮಾಡಲಿ
ಕೆಂದು ಮುನ್ನಿನ ದಿವಸ ದಿವಸದ
ಛಂದದಿಂದಲಿ ಮೂರ್ತಿಗೊಂಡು ಮನೋನುರಾಗದಲಿ
ಮುಂದೆ ನಾನಾ ರಾಗರಂಜನೆ
ಯಿಂ೧ದಲಾದ್ಯರ ವಚನಗಳಸೊಲ
ವಿಂದೆ ಕೇಳುತಲೊಪ್ಪುತಿರ್ದುದು ಜಂಗಮವ್ರಾತ೨ ‖ ೪ ‖

ಜಡೆಯ ರುದ್ರಾಕ್ಷಿಯ ವಿಭೂತಿಯ
ಕೊಡೆಯ ಕೌಪೀನದ ಮೃಗಾಜಿನ
ದುಡುಗೆಗಳ ನಿರ್ವಾಣ ಕಾಸಾಂಬರದ ಹಾವುಗೆಯ
ಹಿಡಿದ ಲಿಂಗದ ಯೋಗದಂಡದ
ನ್ಮೃಡನ ಹೊಲುವ ಮೂರ್ತಿವೆತ್ತಿಹ೩
ವೊಡೆಯರಿರ್ದರು ಶೂನ್ಯಸಿಂಹಾಸನದ ಬಳಸಿನಲಿ ‖ ೫ ‖

ನೆರೆದುದಾರೋಗಣೆಗೆ ನಾನಾ
ಪರಿಯ ಜಡೆಗಳ ತಾಳುಬೋಳಿನ
ವರ ವಿಭೂತಿಯ ಲಿಂಗದಂಗದ ಕರಕಮಂಡಲದ
ಬೆರಳ ಜಪಮಣಿಮಾಲಿಕೆಯ ವಿ
ಸ್ತರದ ಕಂಬಳಿ ಕಂಥೆಗಳ ಭಾ
ಸುರದ ಜಂಗಮ ಶೂನ್ಯಸಿಂಹಾಸನದ ಬಳಸಿನಲಿ ‖ ೬ ‖

ಧ್ಯಾನ ಧಾರಣ ಯಮ ನಿಯಮ ಸುಯಿ
ದಾನ ಸೂಕ್ಷ್ಮವಿಚಾರ ಶೀಲ ವಿ
ಧಾನ ಹೊವಗ್ಗವಣಿಯಾರತಿ ಧೂಪ ಬೋನ೪ಗಳ
ಮೌನ೫ ಮೊದಲಾಗಿರ್ದ ಹಲವವ
ಧ್ಯಾನ ನಿಷ್ಠೆಯ ನಿತ್ಯ ನೇಮದ
ಮಾನಿಗಳು ನೆರೆದಿರ್ದರಾ ಮಂಟಪದ ಬಳಸಿನ೬ಲಿ ‖ ೭ ‖

೧ ರಚನೆಗ । ಳಿಂ (ಅ, ಇ, ಖ, ಗ.) ೨ ಸ್ತೋಮ (ಉ. ಗ.) ೩ ಯಂತಿಹ(ಅ, ಇ, ಗ.)
೪ ದೀಪ (ಉ.) ೫ ಬೋ ( ಉ. ) ೬ ಮಪ್ಪದ (ಅ, ಬ, ಜ.)

ಬಳಸಿದಗ್ಗದ ಸಭೆಯೊಳಗೆ ತೊಳ
ತೊಳಗಿ ಬೆಳಗುವ ಶೂನ್ಯಪೀಠದ
ತಲೆಯ ಬಯಲಾಸನದಲಮಲ ಬ್ರಹ್ಮ ನೆಲಸಿರಲು
ನಲಿದು ನೋಡುವ ಕಣು ಮನಂಗಳಿಗೆ
ತೊಲಗಲಱಿಯದೆ ಬಂದ ಜಂಗಮ
ಗಳನದೇನೆಂದಱಿಯದಿರ್ದನು ಬಸವದಂಡೇಶ ॥ ೮ ॥

ಹೊಸತ ಮಾಡಿದನಿಂದು ಜಂಗಮ
ಹಸಿದು ಬಿಜಯಂಗೈದೊಡಿತ್ತಣ
ದೆಸೆಯ ನೋಡುವುದಿಲ್ಲ ಸತುಕರಿಸುವುದು ಮುನ್ನಿಲ್ಲ
ಬಸವನಾದೊಡೆಯಿಂದ್ರಜಾಲದ
ಹಸರಿಗಗೆ ಮರುಳಾದನಾತನ
ಗಸಣೆ ನಮಗೇಕೆನುತಲೆದ್ದುದು ಜಂಗಮಸ್ತೋಮ ॥ ೯ ॥

ಘೋರನಲ್ಲಿಂದುಭಯ ಶಂಖವ
ಪೂರವಿಸಿಕೊಳುತೆದ್ದು ಹೋದರು
ಸಾರಭಕ್ತಿಯ ಶರಧಿಯಱಿದನು ಬಳಿಕಲಾ ಹದನ
ದೂರವಾದೆನೆ ಸಮಯಕಿವರುಪ
ಚಾರಗಳ ನಾನವರಿಗೊದಗದೆ
ಮೀರಿದಪ್ಪಿದೆನೇ ಶಿವಾ ಎನುತಿರ್ದ ಬಸವಣ್ಣ ॥ ೧೦ ॥

ನಾವು ಬಡಜಂಗಮವು ಬಂದೊಡೆ
ನೀವು ನಮ್ಮ ಸುತುಷ್ಟಿಗೊಳಿಸದ
ದಾವ ಕಾರಣ ನೀನು ಚಿಂತಿಸುತಿರ್ದೆ ಬಸವಣ್ಣ
ಭಾವಿಸುವೊಡಾ ಸಾಧನದ ಸಂ
ಭಾವನೆಗಳು ಸಮಗ್ರವವನಿ
ನ್ನಾವನಾರೋಗಿಸುವನೈ ಪ್ರಭುರಾಯ ಹೇಳೆಂದ ॥ ೧೧ ॥

೧ ಳು (ಉ, ಗ.) ೨ ಸೇಪಿಗ (ಇ.) ೩-೩ ಳಿಗಾಸೊಪಗಲಮ್ಮದೆ (ಐ, ಗ.) ೪ ತೃಪ್ತಿ (ಚ.)

ಮೀಱಿ ನುಡಿವೊಡೆ ನಿನ್ನೊಳಗೆ ನಾ
ನಾಱಿ[1] ಲಕ್ಕದ ಮೇಲೆ ತೊಂಬ
ತ್ತಾಱು ಸಾವಿರ ಜಂಗಮವು ಸಂತುಷ್ಟಿಬಡುವಂತೆ
ತೋಱುವೆನು ಮೊದಲೆನ್ನ ಹಸಿವಿನ
ದೂಱ ನೀ ದಿಟ[1] ನಿಲಿಸಬಲ್ಲೊಡೆ
ಮಾಱು ಮಾತುಗಳೇನುಕಾರಣ ಬಸವ ಕೇಳೆಂದ ‖ ೧೨ ‖

ಎನಲು ಪನ್ನೀರಿನಲಿ ಪಾದಾ
ರ್ಚನೆಯ ಮಲಯಜಹಿಮಗಳನು ಲೇ
ಪನವ ಮೌಕ್ತಿಕದಕ್ಷತೆಯ ನವಕುಸುಮಪೂಜೆಗಳ
ವಿನುತ ಧೂಪವ ರತ್ನದೀಪವ
ನನುಗೊಳಿಸಿ[2] ವಂದಿಸಿದನೀ ಪರಿ
ಮನವೊಲಿದು ಬಸವಣ್ಣನಾ ಪ್ರಭುಲಿಂಗಮೂರ್ತಿಯನು ‖ ೧೩ ‖

ಎಸೆವ ನವರತ್ನಾಳಿಯಲಿ ತೆ
ತ್ತಿಸಿದ ಹೊನ್ನಡ್ಡಣಿಗೆಗಳು ಮಿಗೆ
ಪಸರಿಸಿದ ಪರಿಯಾಣಗಳು ಕೆಲವಟ್ಟಲೋಳಿಯಲಿ
ಬಿಸಿಬಿಸಿಯ ಪರಿಪಾಕತೆಯ ಷಡು
ರಸಮಯಂಗಳ ಬೋನವನು ಗಡ
ಣಿಸಿ ಸಮರ್ಪಿಸಿದನು ಮಹೋತ್ಸಾಹದಲಿ ಬಸವಣ್ಣ ‖ ೧೪ ‖

ತೆಗೆದನೊಂದೆವೆ ಹಳಚುವದರೊಳ
ಗಗಲಲಿಕ್ಕಿದ ಬೋನದೊಳಗೊಂ
ದಗುಳು ಮಿಗದಂತೆಲ್ಲವನು ಬಸವಣ್ಣನದ ಕಂಡು
ಹೊಗಳಿ ಹಿಗ್ಗುತ ಹರುಷದಲಿ ಮಿಗೆ
ಮೊಗಮೊಗದು ತಂಡೊಟ್ಟಿಲಂತವ
ನಗಿದನಾಗಳೆ ನಿಮಿಷದೊಳಗಾ ಪ್ರಭು ವಿನೋದದಲಿ ‖ ೧೫ ‖

೧ ನಿದ (ಜ.) ೨ ಕಿ (ಉ.) ೩ ದೀಯ (ಇ.)

ಊಡಬಹುದಿಂತುಂಬ ದೇವಗೆ
ನೀಡಬಹುದಹು[1]ದಲ್ಲವೆಂಬೀ
ಖೋಡಿಯಿಲ್ಲದೆ ಕೊಂಡು ಸುಖಿಸುವ ಸರ್ವಭಕ್ಷ್ಯಂಗೆ
ಮಾಡಿ ಮನೆಗಳಲಿದ್ದ ಬೋನವ
ತೋ[2]ಡಿ ತನ್ನಿಯೆನಲ್ಕೆ ಪುನರಪಿ
ನೀಡತೊಡಗಿದರೆಂಟು ದೆಸೆಯಲಿ ಬಸವ ನೇಮಿಸಲು || ೧೬ ||

ಹೊನ್ನ ಹೆಡಗೆಗಳಡಿಗಡಿಗೆ ರಾ
ಜಾನ್ನದೋಗರ ತುಂಬಿ ಭಕ್ತರ
ಚೆನ್ನ ಹಸ್ತಂಗಳಲಿ ಬರುತಿರ್ದುವು ಸಮಗ್ರದಲಿ
ಎಣ್ಣೆಯೂರಿಗೆಯಿಡ್ಡಲಿ[3]ಗೆ ಕಡು
ಸಣ್ಣ ಸೇವಗೆ ಸರವಳಿಗೆ[4] ಮಿಗೆ
ಕಣ್ಣಗಾರಿಗೆಯೊಟ್ಟುತಿರ್ದುವು ದೇವನಿದಿರಿನಲಿ || ೧೭ ||

ಕ್ಷೀರಗಾರಿಗೆಯೊಟ್ಟಿಲನು ಬೆ[5]
ಚ್ಚೂರಿಗೆಯ ಬಣಬೆಗಳನೊಡೆಗಳ
ತೋರ ರಾಶಿಯ ಶಾಳಿ ಸೊಪ್ಪಳಿ ಫೇಣಿ ಪರಡಿ[6]ಗಳ
ನೀರವತ್ತಿಗೆ ತಱಗು ಕಡಬುಗ
ಳೇರಿಗಳನೊಟ್ಟಿದರೆ ಕಾಣುತ
ಭೋರನೊಂದೇ ತುತ್ತಿನಲಿ ಕಬಳಿಸಿದ ಗುರುರಾಯ || ೧೮ ||

ಪ್ರೀತಿಯಿಂದಾ[7]ರೋಗಿಸುವ ಗುರು
ವೀತನಹುದೆನ್ನೊಡೆಯನೀ ಪರಿ
ಯಾತನಾದೊಡೆ ನೀಡುವೆನು ತಾ ಮೆಚ್ಚುವಂತೆನುತ[8]
ಓತು ಮತ್ತೆ ಸಮಸ್ತ ಭಕ್ಷ್ಯಸ
ಮೇತವನು ಪಾಯಸಗಳನು ನವ
ನೀತ ಸದ್ಯೋಘೃತವನರ್ಪಿಸುತಿರ್ದ ಬಸವಣ್ಣ || ೧೯ ||

೧ ದರಿ (ಉ.) ೨ ನೋ (ಬ.) ೩ ಯೆಡೆಯೆಡೆ (ಉ.) ೪ ಸರಳಿಗೆಯು (ಉ.) ೫ ಬಿ (ಉ, ಕ.) ೬ ಪಾನ (ಉ, ಕ.) ೭ ಮಿಗೆಯಾ (ಉ.) ೮ ಮೆಚ್ಚುವಂದದಲಿ (ಕ.)

ಮುಸುಡ ಮುಂದಕೆ ತಂದು ಮಿಗೆ ತೋ
ಱಿಸದ ಮುನ್ನವೆ ಸಕಲ ಪಾಕ
ಪ್ರಸರವೆಲ್ಲವನೊಂದು ನಿಮಿಷಾರ್ಧದಲಿ ಕಬಳಿಸಿದ
ದೆಸೆದೆಸೆಯುಲರ್ಪಿಸುತಲಿರೆ ಭ
ಕ್ಷಿಸಿದನವನಲ್ಲಲ್ಲಿ ಗುರುವಿನ
ಹಸು ಮಹೋನ್ನ[೧]ತವಾಗುತಿರ್ದುದು ಲೋಕ ಬೆಱಗಾಗೆ || ೨೦ ||
ದಂಡನಾಥಂಗೆನಿತೆನಿತುವು[೨]
ದ್ದಂಡತೆಯ ದಾಸೋಹ ಧೈರ್ಯದ
ದಂಡೆ ಹೆಚ್ಚಿದುದದಕೆ ಶತ ಸಾವಿರಕೆ ವೆಗ್ಗಳಿಸಿ
ಮಂಡಳಿಸಿ[೩] ಮಾಱಾಂತು ಮಿಗೆ ಮುಂ
ಕೊಂಡು ಗುರು ಹಸಿದುಣುತಲಿರ್ದನು
ಕಂಡುದಿಲ್ಲಾ ಮಹಿಮರಿಬ್ಬರ ಮಾಟಗಳ ಕಡೆಯು[೪] || ೨೧ ||
ಹೊನ್ನ ಕೊಪ್ಪರಿಗೆಗಳ ಪಾನವ
ಹೊನ್ನ ಕೊಪ್ಪರಿಗೆಗಳ ತುಪ್ಪವ
ಹೊನ್ನ ಕೊಪ್ಪರಿಗೆಗಳ ಪಾಯಸ ಫಳದ ಶಿಖರಿಣಿಯ
ಹೊನ್ನ ಕೊಪ್ಪರಿಗೆಗಳ ಬೋನವ
ತನ್ನ ಮುಂದಕೆ ತಂದು ನಿಲಿಸಿದ
ಮುನ್ನಲಾರೋಗಿಸಿದನಾ ಪ್ರಭುಲಿಂಗ ನಸುನಗುತ || ೨೨ ||
ಹೆಡೆಗೆಗಳಲೇ ಭಕ್ಷ್ಯ ಮಾಡಿದ[೫]
ಮಡಕೆಗಳಲೇ ಶಾಖ ತುಂಬಿದ[೬]
ಕು[೭]ಡಿಕೆ[೮]ಡಿಳಲೇ ಪಕ್ವ ಫಲ ಸಂಕುಲವ ಸಂದಣಿಸಿ
ಅಡಕುತಿರ್ದರು ಭಕ್ತರೆಲ್ಲರು
ತುಡುಕಿ ಕಬಳಿಸುತಿರ್ದನಲ್ಲಮ
ನೆಡೆಬಿಡಂಗಳ ಕಾಣೆನಾತನ ದೀಪನೋತ್ಸವಕೆ || ೨೩ ||

೧ ಹಸಿವುವುನ್ನತ (ಉ.) ೨ ಗೀತರದೊಳು (ಎ.) ೩ ಮಂಡಿಸಿಯೆ (ಕ.) ೪ ಳಿಗೆಡೆ (ಅ.); ಪರಿ (ಹ.) ೫ ತುಂಬಿದ (ಇ.) ; ತುಂಬಿತು (ಉ.) ೬ ತು (ಉ.) ೭ ತು (ಕ.) ೮ ಗಡಿಗೆ (ಇ.)

ಕಟ್ಟುಮಂಡಗೆ ಹಾಲು ಸಕ್ಕರೆ
ಗಟ್ಟಿ ಮುಸರುಂಡೆಗಳ ರುಚಿಗಳ
ಮೊಟ್ಟೆಯನೆ ಮುಂದಿಡುತಲುಪ್ಪಿನ ಕಾಯ ಕಚರಿಗಳ
ಬಟ್ಟ ಸಂಡಗೆ ಬಾಳುಕಂಗಳ
ನೊಟ್ಟುತಿರ್ದರು ಬೇಸಱದೆ ಬೆಂ
ಬಿಟ್ಟುದಿಲ್ಲಾ ಪ್ರಭುವಿನಾರೋಗಣೆಯ ಸಡಗರಣೆ[೧] ॥ ೨೪ ॥

ಮಾಡುತಿರಹೇಳಡಿಗೆಗಳ ನೆಱೆ[೨]
ನೀಡುತಿರಹೇಳಾದ ಬೋನವ
ಕೂಡುತಿರಹೇಳಖಿಳವೆನಿಸಿದ ಸಕಲ ಸಾಧನವ
ತೋಱಿಡಿ ತರಹೇಳಿದ್ದುದೆಲ್ಲವ
ನೋಡಬೇಹುದು ದೇವನೂಟದ
ಗಾಡಿಕೆಯನೆಂದೆನುತಲಬ್ಬರಿಸಿದನು ಬಸವಣ್ಣ ॥ ೨೫ ॥

ಆತ ಹೇಳದ ಮುನ್ನಲಾತನ
ಮಾತು ಹಿಂಚಿತು ಮಿಂಚಿತೋ ಎನ
ಲಾತು ಬಂದುವು ಮನೆಯಲಾದ ಸಮಸ್ತ ಸಾಧನವು
ಪ್ರೀತಿ ಮಿಗಲಾ ಬಂದ ವಸ್ತುವ
ನೋತು ನೀಡಿದ ಬಯಲ ಬಸುಱಲಿ
ಕೌತುಕವನೇ ನಟಿಸುತಿರ್ದನು ಗುರು ವಿನೋದದಲಿ ॥ ೨೬ ॥

ಉಂಬನೊಬ್ಬನೆ ಪಕ್ವ ಫಲಗಳ
ನಿಂಬುಗೊಟ್ಟೆಯ್ದಿಸುವರಗಣಿತ
ಕೊಂಬನೊಬ್ಬನೆ ಕೋಟಿಮುಖದಲಿ ನೀಡಿದೆಲ್ಲವನು
ತುಂಬಿ ತುತ್ತಿ[೩]ದ ಹೊಟ್ಟೆ ನೆಱೆ[೪] ಘಾ
ರೆಂಬುತಿರ್ದುದು ಮತ್ತೆಯಲ್ಲವು
ನುಂಬುದಕೆ ಕಡೆಗಾಣೆ[೪]ವೆನುತಿರ್ದುದು ಗಣಸ್ತೋಮ[೪] ॥ ೨೭ ॥

೧ ಕೆ (ಉ.) ೨ ಓ (ಜ.) ೩ ತುಂಬಿ (ಇ.) ೪-೪ ಪಾತನ ದೀಪನೋತ್ಸಹವ (ಗ.)

ಆವ ಬೇಗ[1]ದಲಾಗಹುದೊ ಮ
ತ್ತಾವ ಬೇಗ[1]ದಲೀತನೀವನೊ
ಆ[2]ವ ಬೇಗದಲಾತನುಂಬನೊ ಶಿವ ಮಹಾದೇವ
ಭಾವಿಸುವೊಡಾ ಚಳಬಳಿಕೆಯನು
ತಾವೆ ಬಲ್ಲರು ದೇವಭಕ್ತರು
ನಾವೆ ತಿಳಿವೊಡೆ ನಮ್ಮ ಹವಣಲ್ಲೆಂದುದಖಿಳ ಜನ || ೨೮ ||

ಏನು ಹೇಳುವೆನಾವ ಮುಖದಲಿ
ಬೋನವೆಯ್ದಿದ ದೀಪನಪ್ರಭೆ
ಹೀನವಾಗದು ಸಚ್ಚಿದಾನಂದಸ್ವರೂಪಸಂ[3]ಗೆ
ಊನವಾಗದು ಮಾಟದೊಂದ[4]ಭಿ
ಮಾನ ಬಸವಗೆಯವರಿಗಿನ್ನು ಸ
ಮಾನವಾರು ಸದಾಶಿವಾ ಎಂದುದು ಗಣಸ್ತೋಮ || ೨೯ ||

ಅಲ್ಲಮಪ್ರಭುವುಂಬ ತವಕದ
ಭುಲ್ಲವಣಿಯನೆ ಕಂಡು ಹರಿಹರಿ
ದೆಲ್ಲ ಭಕ್ತರು ತಮ್ಮ ಮನೆಮನೆಗಳಲಿ ಮಾಡಿರ್ದ
ಸಲ್ಲಲಿತ ಪಕ್ವಾನ್ನ ಪಾನವ[5]
ನೋ[6]ಳ್ಪಿತಾಗಿಯೆ ತಂದು ಸಲಿಸ[7]ಲು
ಪಲ್ಲವಿಸಿದುದು ಮತ್ತೆ ಹಸು ಗುರುವಿಂಗೆ ನೂರ್ಮಡಿಸಿ || ೩೦ ||

ಪುರದ ಬೀದಿಯೊಳಲ್ಲಿಗಲ್ಲಿಗೆ
ಹರಿಹರಿದು ಮನೆಮನೆಗಳೊಳು ಹೊ
ಕ್ಕುರವಣಿಸಿ ತಂದಡುಕುತಿರ್ದರು ಸಕಲ ಸಾಧನವ
ನೆರೆದುದಾರೋಗಣೆಗೆ ನಿಮಿಷಕೆ
ಸರಿವುತಲ್ಲಮನಾನನಕೆಯ
ಚ್ಚರಿಯದಾಯಿತು ದೇವಭಕ್ತರ ಛಲದ ಚಳಬಳಿಕೆ || ೩೧ ||

೧-೧ ಮೊಳಹುದೊ ಭೋಜ್ಯವ । ದಾವ ಬೇಗದಿ ತೆಗೆವನೋ ಇವ । ನಾ (ಇ.) ೨-೧ ದಿ ತೆಗೆವನೋ ಮಿಗಿ । ಲಾ (ಉ.) ೩ ದ್ಯೈಕರಸಮಯ (ಉ, ಗ.) ೪ ಮಾಡಕೊಂಡ (ಗ.) ೫ ಫಲಗಳೆ (ಉ.) ೬ ಪಾಯಸ । ಪ್ರೊ (ಜ.) ೭ ನೀಡ (ಅ, ಕ.)

ಪರಿಪರಿಯ ಸೌಕರಿಯ[1]ದೋಗರ
ಪರಿಪರಿಯ ಪಾಯಸ[2] ಘೃತಂಗಳು
ಪರಿಪರಿಯ ನವನೀತ ಸಕ್ಕರೆ ತೋವೆ ಪಳದೆಗಳು
ಪರಿಪರಿಯ ಭಕ್ಷ್ಯಗಳು ನಾನಾ
ಪರಿಪರಿಯ ವನರುಹ[3] ಫಲಂಗಳು
ಪರಿಪರಿಯ ಶಾಖದ ಸಮೂಹಗಳಿತ್ತರಲ್ಲಮಗೆ || ೩೨ ||

ಹಲವು ರೀತಿಯ ಕಣಿಕದಡಿಗೆಯ
ಹಲವು ರೀತಿಯ ಹಿಟ್ಟಿನಡಿಗೆಯ
ಹಲವು ರೀತಿಯ ಪಾನವಂಬಲಿಯುಪ್ಪುಗಾಯಿಗಳ
ಹಲವು ರೀತಿಯ ತಕ್ರ ದಧಿಗಳ
ಹಲವು ರೀತಿಗಳಗ್ಗವಣಿಗಳ[4]
ಸಲಿಸುತಿರ್ದರು ಭಕ್ತರಾ ಪ್ರಭುಲಿಂಗನಾನನಕೆ || ೩೩ ||

ಅಂಬರವೆ ಬಾಯ್ದೆಱೆದು ಜೀರ್ಣಿಸಿ
ಕೊಂಬೊಡದಕಿನ್ನಾರು ದಿಟ ಸಾ
ಕೆಂಬ ತೆಱದಲಿ ತೇಗುವಂತುಣಲಿಕ್ಕ ಬಲ್ಲವರು
ಇಂಬುಗೊಟ್ಟರೆ ಸಕಲ ಲೋಕವ[5]
ನುಂಬ ಮಹಿಮಗೆ ನೀಡುತೈದನೆ
ನಂಬ ಬಲ್ಲರೆ ಬಸವನೇ ಶಿವನೆಂದುದಖಿಳಜನ || ೩೪ ||

ಜಂಗಮಕೆ ಭಕ್ತರಿಗೆ ಪ್ರತಿದಿವ
ಸಂಗಳಂ[6]ತಾ ಮೂರು ಲಕ್ಕ ಜ
ನಂಗ[7]ಳಿಗೆ ಸವೆದಿರ್ದ[7] ಬಸವನ ಮನೆಯ ದಿವ್ಯಾನ್ನ
ಹಿಂಗದುಳಿದ ಸಮಸ್ತ ಭಕ್ತ ಗೃ
ಹಂಗಳ[8]ಲಿ ತಂದಡಕಿದ[8]ಗಣಿತ[9]
ನುಂಗುತಿರ್ದನದೆಲ್ಲವನು ತಣಿವಿಲ್ಲದಲ್ಲಮಗೆ[10] || ೩೫ ||

೧ ಸೌರಂಭ (ಉ.) ೨ ಸದ್ಯೋ (ಉ.) ೩ ಷಡುರಸ (ಉ.) ೪ ಯ ನಿರ್ಮಲೋದಕ (ಇ.) ೫ ವಸ್ತು (ಉ.) ೬ ಳೊಳು (ಉ.) ೭-೭ ಳಿಂಗುಣ್ಣಿಸುವ (ಇ.) ೮-೮ ಸ್ನವ ತಂದರ (ಅ.) ೯-೯ ಖಿಳವ (ಇ.) ೧೦ ನು (ಚ.)

ಗಣಿಸುವೊಡೆ ಬ್ರಹ್ಮಾಂಡಕೋಟಿಗ
ಳಣಲಗೆಯ್ದಿ೧ದ ಹರಿ ವಿರಿಂಚಿಗ
ಳಿಣಿಕೆಗಡಿಮುಡಿದೋಱದಾ ಮಹಿಮಾವಲಂಬಂಗೆ
ಉಣಿಸುಗಳ ತಂದೊಟ್ಟಿ ಮುಟ್ಟಿಸಿ
ತಣಿಸುವೆನು ನೋಡೆನುತ ಪುನರಪಿ
ಹೊಣಕೆವಿಡಿದನು ತಾನೆ ತನ್ನಲಿ ಮತ್ತೆ ಬಸವಣ್ಣ || ೩೬ ||

ಕಣಜಗಳನೊಡೆದೊಡೆದು ತರಹೇ
ಳಿಸದಿರ್ದ ಸಮಸ್ತ ಭಂಡವ
ನುಣಿಸುಗಾಱನ ಪರಿಯ ನೋಡುವೆನೆನುತ ತಮತಮಗೆ೨
ಕಣಕ ಸಕ್ಕರೆ ತುಪ್ಪ ಗೋದುವೆ
ಚಣಗಿ ಹೆಸಱುದ್ದುಗಳನಡಕಿದ
ರಣಿವಱಿದು ಪುರದೊಳಗೆ ಬಸವಣ್ಣನ ನಿರೂಪದಲಿ || ೩೭ ||

ಶಾಳಿ ಸಾವಿರ ಪರಿಯ ಭರಣಿಯ
ಜೋಳ ಬರಗಲಸಂದೆ ಹಾರಕ
ಕೀಳು ಧಾನ್ಯ ಸಮೇತ ಕಂಡುಗ ಕೋಟಿ ಸಂಖ್ಯೆಯಲಿ
ಮೇಲೆ ಮೇಲಿಟ್ಟಣಿಸಿ ಭಕ್ತರು
ಲೀಲೆಯಲಿ ಹೊತ್ತಡಕುತಿರ್ದರು
ಹೇಳುವರೆ ಹೊಸತಾಯಿತಲ್ಲಮನೂಟದಾಟೋಪ || ೩೮ ||

ನೀಡುತಿರ್ದರು ಗಂಜಿಯುಂಬಲಿ
ತೌಡು ನುಱುಗವಲಕ್ಕಿಗಜ್ಜನು
ಕೂಡೆ ಸಾರದ ಮೇಲೆ ಸಾರವ ಕಟ್ಟಿ ತನತನಗೆ
ಹಾಡದೆಣ್ಣೆಯ ಹೊಟ್ಟು ನುಚ್ಚಿನ
ಗೂಡೆಗಳನವ ನುಂಗಿ ಕಡು ಪಟು
ಮಾಡುತಿರ್ದನು ದೇವ ಮತ್ತೆ ಮಹಾ ಕ್ಷುಧಾಗ್ನಿಯನು || ೩೯ ||

೧ ಯ । ಗೂನೆಗೆಯ್ದ (ಉ.) ೨ ಲಬ್ಬರಿಸಿ (ಗ)

ನೆನೆದು ಹಿಡಿಯದ ಮುನ್ನಲರ್ಪಿತ
ನೆನೆದು ಸೋಂಕದ ಮುನ್ನಲರ್ಪಿತ
ನೆನೆದು ನೋಡದ ಮುನ್ನಲರ್ಪಿತ ಗುರುಪದಾಂಬುಜವ
ನೆನೆದೊಡಲ್ಲಿಯದಲ್ಲಿಯರ್ಪಿತ
ವೆನಿಸಿ ನಿರ್ವಯಲಾಗುತಿರ್ದುದು
ಘನತರದ ಸಾಧನಸಮಗ್ರತೆ ನಿಮಿಷಮಾತ್ರದಲಿ || ೪೦ ||

ಬಡಬನಣಲಿಗೆಯಾಲಿಕಲ್ಲಿನ
ಕಡಿಗಳಾನಲು ಬಲ್ಲುವೇ ಜಗ
ದೊಡೆಯನುಂಡಿಹೆನೆಂಡೊಡಕಟೆಂತೊಂದು[೧] ಪಟ್ಟಣದ
ಒಡನೆ ನೆಱೆವುದೆ ಬಂದ ಭಂಡವ
ನೊಡಲೊಳಡಗಿಸಿಕೊಂಡನಾತನ
ಜಿಡಗ[೨]ಬಲ್ಲವರಿಲ್ಲವೇನೆಂದೆಂಬೆನಚ್ಚರಿಯ[೨] || ೪೧ ||

ವಿಶ್ವತೋಮುಖ ವಿಶ್ವತೋಕರ
ವಿಶ್ವತೋದರ[೩] ವಿಶ್ವತೋಪದ
ವಿಶ್ವತೋಮಯನೆನಿಸಿ ಮೆಱೆವ ಮಹಾ ಮಹಾತ್ಮಂಗೆ
ಶಾಶ್ವತಂಗಳನೀವ ಘನ ಮಹಿ
ಮಸ್ವರೂಪನ ಲೀಲೆಗಾವುದು
ವಿಶ್ವದೊಳಗರಿದೆನುತಲಿರ್ದುದು ಭಕ್ತಸಂದೋಹ || ೪೨ ||

ಪಂಚ ಪರುಷವನುಳ್ಳ ಬಸವನು
ಸಂಚಿಸಿದ ಸಾಧನಸಮಗ್ರತೆ
ಮುಂಚೆ ಜೀರ್ಣಿಸಿ ಹೋದುದೂಟದ ಮೊದಲಚೂಣಿಯಲಿ
ಮುಂಚುತಿರ್ದುದು ದೀಪನಪ್ರಭೆ
ಸಂಚಲಿಸದಲೆ[೪] ತೊಳಗಿ ಬೆಳಗಿನ[೫]
ಗೊಂಚಲಂದದಲಲ್ಲಮಪ್ರಭುರಾಯಸಂಗದಲಿ || ೪೩ ||

೧ ಟಿಾ ಒಂದು (ಉ,); ಪಕೆಯಿಂದೊಂದು (ಗ,) ೨-೨ ಸಂತಿಂತೆಂದು ಬಲ್ಲವರಿಲ್ಲವಲ್ಲ ಮನ (ಉ.) ೩ ಭುಜ (ಉ.) ೪ ಸದತಿ (ಉ) ೫ ಗುತ (ಉ.)

ಆವ ಮುಖದಲಿ ಬಂದು ಬೇಡಿದೊ
ಡೀವೆನಾತನಿಗೆಂಬ[೧] ಭಕ್ತಿಯ[೨]
ಸೇವೆಗೂಣೆಯವಾದುದೇ ಶಿವ ಶಿವ ಮಹಾದೇವ
ದೇವನೇ ಹಸಿದುಣುತಿಹನೆಯಿ
ನ್ನಾವ ಪರಿಯ[೩]ಲಿ ದಣಿಸುವೆನೊ ಮಹ
ದೇವ ಎನುತಲಿ ಮನದೊಳಗೆ ಬಸವಣ್ಣ ಚಿಂತಿಸಿದ || ೪೪ ||

ಕಳನೊಳಗೆ ಹಗೆ ಕಟ್ಟೆ ಬಂದಿರೆ
ಬಳಿಕ ಗರುಡಿಯ ಹೊಕ್ಕು ಸಾಧನೆ
ಗಳನು ಮಾಡಿಹೆನೆಂಬನಂತಿರೆ ಗುರುವೆ ಹಸಿದಿರಲು
ಸಲಿಸಲೊಲ್ಲದೆ ಬೋನಗಳನು
ನ್ಮಾಳಿ[೪]ಸುವರೆ ಬಸವಣ್ಣ ಚಿಂತೆಯ
ತೊಲಗನೂಕೆಂದೆ[೫]ನುತಲಿದ್ದನು ಭಕ್ತಿಬಂಧುಗಳು || ೪೫ ||

ಕಡುಗಲಿಗೆ ಕರುಳೊಗಲು ಕೈಯಲಿ
ಹಿಡಿದು ಸಮರಕೆ ನಡೆ[೬]ವನಲ್ಲದೆ
ಕಡೆಗೆ ಸಾರಲಿಬಹುದೆ ಭಕ್ತನ ಧನ ಸಮರ್ಪಿಸಲು
ಒಡಲು ಮನಗಳನೊಡನೆ[೭]ಯರ್ಪಿಸಿ
ಕಡೆಯ ಕಾಣಿಪುದೆಂದು ನುಡಿದರು
ಮಡಿವಳಯ್ಯನು ಚೆನ್ನಬಸವನು ಬಸವರಾಜಂಗೆ || ೪೬ ||

ತೆತ್ತಿಗರು ತಾ[೮]ವಾದಕಾರಣ
ತತ್ತ ವೇಳೆಯಲಾದಿರ್ದೈ ದಿಟ
ಹೆತ್ತ ತಂದೆಗಳಹುದು ಮಡಿವಳಚೆನ್ನಬಸವಗಳು
ಹೊತ್ತು ಹೋಗದ ಮುನ್ನ ತನುವಿನ
ತುತ್ತ ನೀಡುವೆ ಗುರುವಿಗೆನುತಲಿ
ಚಿತ್ತದಲಿ ಹಾರೈಸುತಿರ್ದನು ಬಸವದಂಡೇಶ || ೪೭ ||

೧ ತಾನೆಂದೆಂಬ (ಇ.) ೨ ಬಿಡಿದಿನ (ಗ.) ೩ ತೆರನ (ಅ, ಒ.) ೪ ನಿ॥ ಯಲ (ಇ, ಉ.) ೫ ತೊಲತೊಲಗು ತೊಲಗೆ (ಗ.) ೬ ನಿಲು (ಇ.) ೭ ನೊಮ್ಮೆ (ಗ.) ೮ ನಿಃ (ಉ. ಕ.) ೯ [illegible] (ಅ, ಕ, ಗ.)

ಭಸಿತದಂಗದ ಭಾವಶುದ್ಧದ
ಮಿಸುಗುವಂತರ್ಮುಖದ ಬುದ್ಧಿಯ
ದಶವಿಧದ ಪ್ರಾಣೇಂದ್ರಿಯಂಗಳ ನಿರ್ವಿಕಾರತೆಯ
ಬಸವ ಬಸವಗಳಾಳ್ವ[1]ನಾರೋ
ಗಿಸುವೊಡೋಗರವಾಗಿ ಬಂದನು
ನಸುನಗುತಲಾ ದೇವನೀಕ್ಷಿಸಿದನು ಕಟಾಕ್ಷದಲಿ ‖ ೪೮ ‖

ಹಸಿದು ಬಂದವನಲ್ಲವರ್ಥದ
ದೆಸೆಗೆ ಬಂದವನಲ್ಲ ಕಾಮದ
ಮಸೆಗೆ ಮನೆ[2]ದಲಿ ನೊಂದು ಬಂದವನಲ್ಲ ನಾ ನಿನ್ನ
ಹಸರಿಸಿದ ದಾಸೋಹತನವನು
ಸಸಿನೆ[3] ನೋಡಲು ಬಂದೆನಲ್ಲದೆ
ವ್ಯಸಳ[4]ನದಾಸೆಗಳೆನ್ನಲುಂಟೇ ಬಸವ ಕೇಳೆಂದ ‖ ೪೯ ‖

ಶುದ್ಧ ಸಾಕ್ಷಾದಮೃತದೇಹದ
ಬಿದ್ದಿನಂಗುಣಲಿಕ್ಕುದುಂಟೇ
ನಿದ್ದ ಸಾಧನೆ ಕೆಟ್ಟುದಕಟಕಟೆಂದು[5] ನೀನೆನಲು
ತಿದ್ದಬೇಕೆನುತಾನೆ ಹವಣಿಸಿ
ಮೆದ್ದೆನಲ್ಲದೆ ದಿಟ ವಿಚಾರಿಸೆ
ಹೊದ್ದುವುವೆ ಹಸು ತೃಷೆಗಳೆನ್ನಲಿ ಬಸವ ಕೇಳೆಂದ ‖ ೫೦ ‖

ಕನ್ನಡಿಯ ಪ್ರತಿಬಿಂಬಕಿನ್ನೊಂ
ದನ್ಯ ಚೆಲುವಿಕೆಯಾಗಬಲ್ಲುದೆ
ನಿನ್ನ ಮನದಲಿ ಮಾಟಕೂಟ[6]ದ ಬುದ್ಧಿ ಮುಮುಕರಿಸೆ
ನನ್ನ ಹಸು ಹರಿದುಂಡಿತಲ್ಲದೆ
ನಿನ್ನ ಮನದಲಿ ಮಾಟವಿಲ್ಲದೊ
ಡೆನ್ನ ತನುವಿಗೆಯೂಟವಿಲ್ಲೈ[7] ಬಸವ ಕೇಳೆಂದ ‖ ೫೧ ‖

೧ ಒಡೆಯ (ಅ, ಕ, ಗ) ೨ ಮನಕಮನ (ಇ.) ೩ ಪೋಸೆದು (ಇ.) ೪ ಯಶ (ಇ.)
೫ ಕೆಟ್ಟುದೆಂದುಣಬೇಕು (ಉ.) ೬ ಮಾಯಮಾಟ (ಗ.) ೭ ವ್ರಂಟೇ (ಗ )

ಅಷ್ಟಮದಗಳ ಸೊಗಡ ಸೊಕ್ಕಿನ[೧]
ದಷ್ಟವಿಲ್ಲದ ಮೂಱವಸ್ಥೆಯ
ದೃಷ್ಟಿ ತಾಗದ ವ್ಯಸನವೇಳಱ ಕಿಡಿಯ[೨] ಖಂಡಿಸಿದ
ದೃಷ್ಟವೆನಿಸಿದ ನಿಮ್ಮ ಕಾಯ
ಶ್ರೇಷ್ಠ ನೈವೇದ್ಯವನು ಕಾಣುತ
ತುಷ್ಟಿ ತನುವಿಗೆ ತುಂಬಿತೀಗಳು ಬಸವ ಕೇಳೆಂದ || ೫೨ ||

ಉಣಿಸುವುಣಿಸೆಂದೆಂಬರೆಲ್ಲರು[೪]
ವುಣಿಸನುಂಬುದ[೫] ನಿಂದು ಕಂಡೆವು
ದಣಿಸಿದಿರಿ ನೀವಾದೊಡೆಮ್ಮನು ಭಕ್ತ ನಿಮ್ಮಾಣೆ
ಅಣಕವಲ್ಲಿದು ನರಸುರೋರಗ
ರೆಣಿಕೆಯೊಳು ನಿನಗಾರು ಸರಿ ಕಾ
ರಣಕಳಾತ್ಮಕ ನೀನೆಲೈ ಬಸವಣ್ಣ ಕೇಳೆಂದ || ೫೩ ||

ಬಳಿಕ ಹಸ್ತೋದಕವನತಿ ನಿ
ರ್ಮಳ ಸುಗಂಧ ವಿಲೇಪನವ ಪರಿ
ಮಳದ ಕರ್ಪುರವೀಳೆಯಂಗಳನಿತ್ತು ಭಕ್ತಿಯಲಿ
ನಲಿದು ಗುರುವಿನ ಪಾದಪಂಕಜ
ಗಳ ಸಮೀಪದಲೊಪ್ಪುತಿರ್ದರು
ಬಳಸಿದಳಿಕುಲದಂತೆ ಬಸವಣ್ಣಾದಿ ಭಕ್ತಗಣ[೬] || ೫೪ ||

ಬಸವ ಬಾರೈ ನಿನ್ನ ಜಂಗಮ
ಹೆಸಿದರಲ್ಲಾ[೭] ಕರೆಯ ಹೋಗೆನೆ
ಬೆಸನ ಕೈಕೊಂಡಲ್ಲಮಪ್ರಭುವಿಂದೆ ಬೀಳ್ಕೊಂಡು
ಒಸೆದು ಬಂದು ಮಹಂತರನು ಪ್ರಾ
ರ್ಥಿ[೮]ಸುತಲಾರೋಗಣೆಗೆ ಕರೆಯಲು
ಬಸವರಾಜಗೆ ಬಳಿಕ ನುಡಿದುದು ಜಂಗಮಸ್ತೋಮ || ೫೫ ||

೧ ಸೊಂಕಿನ (ಅ, ಇ, ಜ.) ೨ ಕ್ರೀಡೆ (ಅ, ಖ.); ಕೇಲ (ಗ); ೩ ಕೆಡಿಸಿ (ಚ.)
೪ ರಲ್ಲದೆ (ಉ.) ೫ ವುಣಿಸಿವುಣುವುದ (ಕ, ಜ,); ಉಣಿಸನೆಂಬುದ (ಇ.) ೬ ಜನ (ಗ.)
೭ ಸುಪಕ್ಷಿಣಾ (ಅ.); ಸುವೆಲ್ಲರು (ಗ.) ೮ ಸಂ' ಧಿ (ಜ.)

ಎಂದಿನಾರೋಗಣೆಯ ಮಾಡಿದ
ಚೆಂದದಿಂ ಮಿಗಿಲಾಗಿ ಪರಮಾ
ನಂದವಾಗಿದೆ ತೇಗಿದರೆ ಷಡುರುಚಿ[೧]ರಸಾಯನದ
ಸಂದವಾಸನೆ ಸೂಸುತಿದೆ ಡ
ಜ್ರೆಂದುದಿ[೨]ದೆಕೋ[೩] ಎನುತ ಮಹಿಮರು
ಮುಂದೆ ಬಸವನು ಕಾಣಲಿಕೆ ದಣಿದಿರ್ದರೊಲವಿನಲಿ || ೫೬ ||

ನಿನ್ನ ಗುರುವಿನ ಮಹಿಮೆಯೋ ಮೇಣ್
ನಿನ್ನ ಮಹಿಮೆಯೊ ಜಂಗಮಕೆ ದಿಟ[೪]
ನಿನ್ನ ಗುರುವಾರೋಗಿಸಲು ತ[೫]ಣಿವಾಯಿತೆಮಗೆಲ್ಲ
ನಿನ್ನ ಗುರು ಸಚರಾಚರದ ಚೈ
ತನ್ಯ ಮೂರ್ತಿಯೊ ಎನುತಲಾ ಬಸ
ವಣ್ಣನಿದಿರಲಿ ನುಡಿವುತಿರ್ದುದು ಜಂಗಮಸ್ತೋಮ || ೫೭ ||

ನಮ್ಮ ನಾಚಿಸಲೆಂದು ಬಂದೈ
ನಮ್ಮೊಳಿನಿತಿಲ್ಲದಜಿ ನಾಚಿಕೆ
ನಮ್ಮ ಸಮಯದೊಳಾರಿಗಾದೊಡೆ ಹೆಮ್ಮೆ ಹುಟ್ಟಿದೊಡೆ[೬]
ನಮ್ಮ ಹೆಮ್ಮೆ ವಿಚಾರಿಸುವೊಡದು
ನಮ್ಮ ಜಯವ[೭]ದು ಸಾಕು ಹೋಗೆಂ
ದೆಮ್ಮ ಬಸವನ ಬೀಳುಕೊಟ್ಟುದು ಜಂಗಮಸ್ತೋಮ || ೫೮ ||

ಗುರುವಿಗೊರೆದ ಸುಗಂಧಲೇಪನ
ಗುರುವಿಗಿಟ್ಟಕ್ಷತೆಗಳೆಲ್ಲವು
ಗುರುವಿಗಿಕ್ಕಿದ ಪುಷ್ಪಮಾಲೆಗಳೈದೆ ಜಂಗಮಕೆ
ಭರಿತವಾಗಿರೆ ತಿಳಿದನಿಂಗಿತ
ದಿರವಿನಲಿ ದಣಿವಾದ ಭೇದವ .
ಕರಣದಲಿ ನೆಜಿ[೮] ಕಂಡು ಸರಿದನು ಬಳಿಕ ಬಸವಣ್ಣ || ೫೯ ||

೧ ರಸ (ಗ.) ೨ ದೊಡಿ (ಇ, ಕ, ಜ.) ೩ ಯೆಂ। ದಾಡಿದರು ಜೋ (ಅ.) ೪ ದಿಟ ವಿಚಾರಿಸು (ಗ.) ೫ ದ (ಆ, ಇ, ಉ, ಒ, ಕ, ಗ, ಜ.) ೬ ಹೆಚ್ಚಿದರೆ (ಚ.) ೭ ಜರಿವು (ಇ.)

ಬಂದನಾಗಳೆ ಬಸವ ತನ್ನಯ
ಮಂದಿರಕೆ ಗುರುಪಾದದಲಿ ಶರ
ಣೆಂದು ಬಳಿಕಾ ಹದನನೆಲ್ಲವನೊಲಿದು ಬಿನ್ನೈಸೆ
ಮುಂದೆ ಮೋಹಿಸಿ ನೆರೆದ ಭಕ್ತರ
ಸಂದಣಿಗಳುಘೆ ಎನಲು ಪರಮಾ
ನಂದಶರಧಿಯ ಲಹರಿಯಂತಿರೆ ಮೆಱೆದುದಾ ಸ್ಥಾನ || ೬೦ ||

ಬಸುಱ ಹೆಂಡತಿಯೂ[1]ಟ ಹೊಟ್ಟೆಯ
ಶಿಶುವ ದಣಿಸುವವೊಲು ಜಗಂಗಳ
ಬಸುಱಲಡಗಿಸಿಕೊಂಡು ನೀ ದಣಿಯುಣಲು ಜಂಗಮಕೆ
ಹಸಿವದೆಲ್ಲಿಯದೆಲ್ಲರಿಗೆ ಸಂ
ತಸವು ಸಂತುಷ್ಟತೆಯಲಿದ್ದರು
ಹೊಸತಿದಾದುದು ಲೋಕದೊಳು ಗುರುರಾಯ ಕೇಳೆಂದ || ೬೧ ||

ನಿನ್ನ ಭಾವನೆಯಿದ್ದ ಪರಿಯಲಿ
ನಿನ್ನ ಜಂಗಮ ತೃಪ್ತರಾದರೆ
ನನ್ನನೇತಕೆ ಱಟ್ಟು ಮಾಡುವೆ ಬಱದೆ ಬಯಲಿಂಗೆ
ನಿನ್ನ ಕತದಿಂದಾದೆನಲ್ಲದೆ
ಮುನ್ನ ನಾನೆಂದೆಂಬ ವಾಸನೆ
ಯೆನ್ನಲುಂಟೇ ದಿಟ ವಿಚಾರಿಸೆ ಬಸವ ಕೇಳೆಂದ || ೬೨ ||

ಲಿಂಗ ನೀನಾರೋಗಿಸಿದೊಡಾ
ಜಂಗಮವು ಸಂತುಷ್ಟರಾದರು
ಜಂಗಮದ ಸಂತುಷ್ಟಿ[2] ಸಚರಾಚರದೊಳೆಲ್ಲರಿಗೆ
ಹಿಂಗದಿತ್ತುದು ದಣಿವನೀ[3]ಚಿ
ತ್ರಂಗಳಾಟದ ಸೂತ್ರವೆಲ್ಲವು
ಲಿಂಗ ನಿನ್ನಯ ಮಹಿಮೆಯೆಂದನು ಬಳಿಕ ಬಸವಣ್ಣ || ೬೩ ||

೧ ಟೆಂಗಸಿಸೂ (ಇ, ಗ.) ೨ ತತ್ ಶೇಷ (ಅ.) ೩ ನಿದು (ಆ, ಇ, ಕ.)

ಎನಲು ನಿರಹಂಕಾರ ಭಾವದ
ಮನದ ಬಸವಗೆ ಚೆನ್ನಬಸವಗೆ
ವಿನುತಮತಿ ಮಡಿವಾಳ ಮೊದಲಾದಖಿಳ ಭಕ್ತರಿಗೆ
ಅನುಪಮಾನಂದೈಕ್ಯ ನಿತ್ಯಾಂ
ಗನೆಯನೆಲ್ಲರಿಗೀವೆನೆನುತಲಿ
ನೆನೆವುತಿರ್ದನು ಗುರು ಗುಹೇಶ್ವರಲಿಂಗ ಲೀಲೆಯಲಿ ‖ ೬೪ ‖

**ಅಂತು ಗತಿ ೨೩ಕ್ಕಂ ಪದ ೧೦೪೫ಕ್ಕಂ ಮಂಗಳಂ**

# ೨೪. ಮನೋಲಯದ ಗತಿ

ಸೂಚನೆ :

ಉದ್ಧರಿಸಿ ಬಸವಣ್ಣ ಮೊದಲಾ
ಗಿರ್ದ ಭಕ್ತರಿಗೊಲಿದು ಕೊಟ್ಟನು
ಸಿದ್ಧಿಗಳನುಚಿತಗದಲಿ ನಮ್ಮಯ ಗುರು ಗುಹೇಶ್ವರನು

ಸಕಲವನು ಸಂಭವಿಸಿ ಮನಸಿಗೆ
ಮಕರಿಸುವ ಹಂಕಾರ ಭಾವದ
ಮುಕುರವನು ಮುಱಿದಚಲ ಪದವಿಗೆ ನಿಲುವ ನಿರ್ಣಯವ
ಸಕಲ ಭಕ್ತರು ಸಕಲ ಯುಕ್ತರು
ಸಕಲ ಮುಕ್ತರು ಮುಖ್ಯವಾಗಿಹ
ಸಕಲರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ಪರಮ ಪರಿಣಾಮದಲಿ ತನ್ನಯ
ಚರಣಸನ್ನಿಧಿ ಸಂಗವಾಗಿಹ
ಶರಣರೆಲ್ಲರ ಕಂಡು ಕರುಣರಸಾರ್ದ್ರಚಿತ್ತದಲಿ
ವರದನಾಗಲಿ ಬೇಕೆನುತ ಮಿಗೆ
ದರಹಸಿತವದನಪ್ರಭಾಶಶಿ
ಕಿರಣಗಳ ಸುರಿವುತ ಮಹಾಪ್ರಭುಲಿಂಗನಿಂತೆಂದ ॥ ೨ ॥

ಪಾವನತೆಯಾಯ್ತಿಷ್ಟಲಿಂಗದ
ಸೇವೆಯಲಿ ಬಹಿರಂಗವಂತ
ರ್ಭಾವಮಾಡೊಡೆ ಶಿವಸಮಾಧಿಯಲಾಯ್ತು ನಿರ್ಮಲತೆ
ನೀವು ನೋಡಲು ನೀವು ನೆನೆಯಲ
ದಾವುದರಿದಿನ್ನೆನುತ ಭಕ್ತರ
ನೋವಿ ಹೊಗಳಿದನಲ್ಲಮಪ್ರಭುಲಿಂಗ ಲೀಲೆಯಲಿ ॥ ೩ ॥

೧ ಕರುಣ (ಉ.) ೨ ದಿ (ಉ.)

ಎನಿತು ಸಂಪದವಾದೊಡೇನದ
ಱನಿತು ದಂದುಗ ಜೆಂಬಿಡದು ದಿಟ
ವೆನಿತು ಮಾಡಿದೊಡೇನು ಮಾಡಿದ ಫಲವ[೧]ನುಣಬೇಕು
ಇನಿತು ಸಾಕಿನ್ನೆಮಗೆ ನಿನ್ನನೆ
ನೆನೆದು ನೆಱೆ[೨] ನಿಶ್ಚಿಂತರಹ ಸುಖ
ದನಿತನೇ ಪೇಳೆನುತ ಬಿನ್ನೈಸಿದನು ಬಸವಣ್ಣ || ೪ ||

ಆವ ವಾಸನೆವಿಡಿದು ಜನಿಸಿದ
ಜೀವರುಗಳಭಿಲಾಷೆ ನಿಲುಕುವ
ದಾ ವಿಳಾಸತೆ ತಪ್ಪದದು ಶಿವನಿತ್ತ ಬೆಸನಿಂದೆ
ನೀವು ನ[೩]ಮ್ಮೊಳು ಪರಮಸುಖಸಂ
ಭಾವನೆಯನಱಿಯಲಿಕೆ ಬಂದಿರಿ
ನಾವು ನಿಮಗದನೊರೆಯಬೇಹುದು ಬಸವ ಕೇಳೆಂದ || ೫ ||

ಮಾನವಾಕೃತಿಯಿಂದೆ ತದ್ಭವ
ಕಾನನಂಗಳ ಸುಡುವ ಸಮ್ಯಗ್
ಜ್ಞಾನವಾಗಲಿಬೇಕೆನುತ ಶಿವಭಕ್ತಿಭರದಿಂದೆ
ಸ್ವಾನುಭಾವನೆಗೆಂದು ಬಂದಿರಿ
ನಾ ನಿಮಗೆ ಬೋಧಿಸುವೆ[೪]ನದನವ
ಧ್ಯಾನಿಸೆನುತಾ ಭಕ್ತರಿಗೆ ಗುರುರಾಯನಿಂತೆಂದ || ೬ ||

ಇಲ್ಲದಿಹ ಮಾಯಾಪ್ರಪಂಚುಗ
ಳುಳ್ಳವೆಂದೆಂಬಂತೆ ವಿಷಯದ
ಭುಲ್ಲವಣೆಗಳಲಿಂದ್ರಿಯದ್ವಾರದಲಿ ರಂಜಿಸುವ
ಎಲ್ಲವನು ಕಾಣಿಸುವದದಱ[೫]ಜೊಳು
ಹೊಲ್ಲಪೊಳ್ಳಿತ್ತೆಂದು ಕೆಲವನು
ಸಲ್ಲವಿಡುವುದು ಮನವು ಮನವಳಿದವನೆ ಸುಖಿಯೆಂದ || ೭ ||

೧ ಬಿತ್ತಿದ ಬೆಳೆಯ (ಇ, ಕ, ಜ.) ೨ ನಿಜ (ಇ.) ೩ ನಿ (ಇ, ಉ, ಜ.) ೪ ನಾನು ಬೋಧಿಸಿ ಪೇಳ್ವೆ (ಇ.) ೫ ವೊಡವ (ಒ, ಮು.)

ಸ್ಥೂಲ ತನುವಿನ ಜಾಗ್ರ ಸ್ವಪ್ನದ
ಕಾಲದಲಿ ಹುಸಿ ಸೂಕ್ಷ್ಮ ತನುವಿಗೆ
ಮೇಲೆ ಕಾರಣ ತನುವಿನಲ್ಲಿ ಸುಷುಪ್ತಿ ಪಸರಿಸಲು
ಬೀಳು ಬಿದ್ದುವು ಜಾಗ್ರ ಸ್ವಪ್ನಗ
ಳಾಳುತಿಹುದಿವನೊಂದೆ ಮನವಾ
ಕಾಳು ಮನವೊಂದಳಿದುದಾದರೆ ನಿತ್ಯರಹರೆ[1]ಂದ || ೮ ||

ಸುರನರೋರಗರೆಂಬ ಮರುಳರ
ಹುರುಳುಗೆಡಿಸಿದ ಮೂಱವಸ್ಥೆಗೆ
ಸಿರಿದೆನಿಸುವಾ ತೂರ್ಯ ತೂರ್ಯಾತೀತವೆಂಬೆಱಡು
ಸರಸತರವಹ ಬಲೆಯ ಬೀಸಿಯೆ
ಹರಹಿಕೊಂಡಿಹುದೀ ಮನಸ್ಸದ
ನುರುಹಬಲ್ಲವನವನೆ ನಿತ್ಯನು ಬಸವ ಕೇಳೆಂದ || ೯ ||

ಮನವ ಬಹಿರಂಗದಲಿ ಚರಿಸುವ
ಮನುಜನವನಜ್ಞಾನಿ ಮತ್ತಾ
ಮನವನಂತರ್ಮುಖದಲಾಚರಿಸಿದೊಡೆ ಸರ್ವಜ್ಞ
ಮನವು ಮನದಲಿ ನಿಂದು ನಿರ್ವಾ
ಸನೆಯುಲಿರೆ ಸುಜ್ಞಾನಿಯಂತಾ
ಮನವನಳಿದರೆ ನಿತ್ಯನೈ ಬಸವಣ್ಣ ಕೇಳೆಂದ || ೧೦ ||

ಎನಿತು ತೋಱುವ ತೋಱಿಕೆಗಳನಿ
ತನಿತು ಮನಸಿಂದಾದುವಲ್ಲದೆ
ಮನವನಳಿದರೆ ಮತ್ತೆ ಕಾಣಿಸಲುಳಿದುದೊಂದಿಲ್ಲ
ಮನವೆ ಬೆಸಲಾದಖಿಳವಹ ವಾ[2]
ಸನೆಗಳಿಗೆ ಬಿದ್ದಾಸೆಗೆಯ್ದರೆ
ಮನುಜಜಾತಿಯುಲಾತನಧಮನು ಬಸವ ಕೇಳೆಂದ || ೧೧ ||

೧ ಸುಖಿಯೆ (ಗ.) ೨ ದುರ್ವಾ (ಇ, ಜ.)

ಆಶೆಯೆಂಬುದು ತಾನೆ ಮಾಯಾ
ಪಾಶವದು ಮುಸುಕಿದರೆ ತಾನೇ
ಕ್ಲೇಶವಿಂತಿವು ಬಗೆಗೆ ಬಲಿಯಲು ತಾನೆ ಭವಬಂಧ
ದೋಷದುರಿತದ ಪುಂಜವದು ಕೀ
ನಾಶಗೊಡ್ಡಿದ ಹರಕೆಗುರಿಯೀ
ಯಾಶೆಯೊಂದಳಿದವನೆ ನಿತ್ಯನು ಬಸವ ಕೇಳೆಂದ ॥ ೧೨ ॥

ಬೇಕು ಬೇಡೆಂದೆಂಬುದೊಂದವಿ
ವೇಕವುಳ್ಳನ್ನಬರ ನಾನಾ
ಶೋಕಮೋಹಾದಿಗಳು ಮುಂಗುಡಿವಱಿದು ಮುಸುಱುವುವು
ಲೋಕರಂಜನೆಗೆಱಗಿದವರೀ[1]
ಕಾಕುತನದಲಿ ಕೆಟ್ಟು ಹೋಹರು
ಬೇಕು ಬೇಡೆಂಬೆಱಡನಳಿದರೆ ನಿತ್ಯರಹರೆಂದ ॥ ೧೩ ॥

ಅನವರತವೇನಾದೊಡೊಂದನು
ನೆನೆವುತಿಹುದೀ ಮನಸು ಮನಸಿನ
ನೆನಹಿನಿಂದವೆ ತೋಱುವುವು ಸರ್ವ ಪ್ರಪಂಚಗಳು
ಇನಿತನಱಿದು ಸಮಾಧಿಯಲಿ ತ
ನ್ಮನ[2]ವನೆಲ್ಲವ ತಿಂದು ತೇಗುವ
ಘನ ಪರಾಕ್ರಮವುಳ್ಳೊಡಾತನೆ ಮುಕ್ತನಹನೆಂದ ॥ ೧೪ ॥

ಘನಮಹಿಮ ಚಿತ್ತೈಸು ದಿಟವಾ
ಮನವನಳಿದಿಹೆನೆಂಬುದದು ತಾ
ಮನವೆಯಲ್ಲದೆಯಾ ಮನಸ್ಸನದೆಂತು ತಿನ[3]ಬಹುದು
ಮನವನೆಂತಾದರೆಯು ನಿರ್ವಾ
ಸನೆಗೆ ತಹುದರಿದಲ್ಲವಲ್ಲದೆ
ಮನವನಳಿವುದು ಚೋದ್ಯವೆಂದನು ಬಳಿಕ ಬಸವಣ್ಣ ॥ ೧೫ ॥

೧ ರತಿ (ಜ.) ೨ ನ್ನಸು (ಕ, ಗ, ಚ, ಜ.) ೩ ಗೆಲ (ಇ.)

ಮನವನಱಿದಿಹೆನೆಂಬುದದು ಮನ
ಮನವನಿಲಿಸಿಹೆನೆಂಬುದದು ಮನ
ಮನವನಳಿದಿಹೆನೆಂಬುದದು ಮನವಾವರೀತಿಯಲಿ
ಮನವೆ ತಾ ಹೆಱಿಸಾಱ ಬಹು ಯೋ
ಚನೆಗಳನು ರಂಜಿಸುವುದಂತಾ
ಮನವನೆಲ್ಲವನಳಿದನಾದರೆ ನಿತ್ಯನಹನೆಂದ || ೧೬ ||

ದೇವ ಬಿನ್ನಹೆ ಮನವನಳಿದ ನಿ
ರಾವಲಂಬಿಯ ಕುಱುಹದೆಂತುಟು
ಜೀವನೋ ಪರಮನೊ ಪರಾಪರನಾಮನುಳ್ಳ[೧]ವನೊ
ಆವುದಾಗಿಹುದಾತನಂಕಿತ[೨]
ನಾವು ತಿಳಿವಂತಿರೆ[೩] ನಿರೂಪಿಸಿ
ಕಾವುದೆನುತಲಿ ಮತ್ತೆ ಬಿನ್ನೈಸಿದನು ಬಸವಣ್ಣ || ೧೭ ||

ನೇಮವಿಲ್ಲದೆ ಮನವನೇ ತಿಂ[೪]
ದಾ ಮಹಾ ನಿರುಪಮ ನಿರಾಳಗೆ
ನಾಮ ರೂಪು ಕ್ರಿಯೆಗಳುಂಟೇ ಕುಱುಹ ತೋಱುವರೆ
ಪ್ರೇಮದಿಂದೊಂದೊಂದು ಕುಱುಹನು
ಕಾಮಿಸುವರಿಂತಿವರಿದಲ್ಲದೆ[೫]
ಆ ಮಹಾತ್ಮನಭೇದ್ಯ ಕಾಣಾ ಬಸವ ಕೇಳೆಂದ || ೧೮ ||

ಗುರುವೆ ಬಿನ್ನಹವಾ ಮನವ ನಿ
ಟ್ಟೊರಸಿದನುಪಮನೊಂದು ಲಕ್ಷ್ಯ
ಸ್ಮರಣೆಯಿಂದಾಗಾದ[೬]ನಲ್ಲದೆ ಬಱದೆ ಬಹುದಿಲ್ಲ
ಕರುಣಿಸಾ ಲಕ್ಷ್ಯವನು ನಮ್ಮ
ಲ್ಲರಿಗೆ ಬಳಿಕೆಮ್ಮನುಭವಂಗಳ
ಪರಿಯನವಧರಿಸೆನುತಲಿದ್ದನು ಚೆನ್ನಬಸವಣ್ಣ || ೧೯ ||

೧ ತ್ಪರ ವಸ್ತುವಾವ (ಇ.) ೨ ಸಿಂಗಿತ (ಅ, ಕ, ಜ.) ೩ ತವ (ಗ, ಜ.) ೪ ಮನ್ನಿಸ (ಉ.) ೫ ರೀತಿಯಿದಿವಲ್ಲವೆ (ಅ); ದರಿದಲ್ಲವಲ್ಲದೆ (ಕ.) ೬ ಓನಿತಾದ (ಇ.)

ಲಕ್ಷ್ಯವನು ಪೇಳುವೊಡೆ ನಾತಿನ
ಲಕ್ಷ್ಯವಲ್ಲ ಮಹಾನುಭಾವದ
ಲಕ್ಷ್ಯವಲ್ಲಷ್ಟಾಂಗಯೋಗದ ಲಕ್ಷ್ಯ ಮುನ್ನಲ್ಲ
ಲಕ್ಷ್ಯವದು ನಿರ್ಲಕ್ಷ್ಯವೇ ತಾ
ಲಕ್ಷ್ಯವಾಗಿಹುದೆಂದು ಘನಗುರು
ಲಕ್ಷಣವ ಲಕ್ಷಿಸಿಯೆ ನುಡಿದನು ಚೆನ್ನಬಸವಂಗೆ || ೨೦ ||

ನೆನಹಿಗಿಲ್ಲದ ನೋಟಕಿಲ್ಲದ
ತನುವಿಗಿಲ್ಲದ ಸಾಧನದ ಭಾ
ವನೆಯೊಳಿಲ್ಲದ ಹೇಳಲಿಲ್ಲದ ಕೇಳಲಿಲ್ಲೆಂಬ
ಅನುಪಮುವನಿನ್ನಾವ ಪರಿಯಿಂ
ದನುಭವಿಸಿ ನೆಱೆ ನಿತ್ಯರಹೆವೆಂ
ದೆನುತ ಕೇಳಿದನಲ್ಲಮುನ ಮಡಿವಾಳ ಮಾಚಯ್ಯ || ೨೧ ||

ಇಲ್ಲದುದ ತಾವಱಿದೆವೆಂಬಱಿ[೧]
ವುಳ್ಳವರು ತನುಮನಗಳೊಳು ತಾ
ವಿಲ್ಲದಿರಬೇಕಾಗಿಹುದು ಸಂಸಾರಸ್ವಪ್ನದಲಿ[೨]
ಇಲ್ಲದೆಚ್ಚತ್ತಱಿವು ಮಱಹಿನ
ಗಲ್ಲಣೆಯನೀಡಾಡಿ ತಾನಿರ
ಬಲ್ಲೊಡಾತನೆ ಮುಕ್ತನೈ ಮಡಿವಾಳ ಕೇಳೆಂದ || ೨೨ ||

ಹುಸಿವೊಡೀ ಮಾಯಕದ ತನು[೩]ಮನ
ದೆ[೩]ಸಕವವನಿನ್ನಿಲ್ಲ[೪]ವೆನಿಸುವ
ಗಸಣೆಯೇತಕೆ ಬೇಱೆ ಮುಕ್ತಿಯ ಬೆದಕುತಿರಲೇಕೆ
ಹುಸಿಯೆ ನಾನಾಗಿರ್ದು ಮೇಣ್ ಹೊ
ಣೆಸುವ ಬಗೆ ದಿಟವಹವೆ ಎನುತಾ
ಬಸವ ನೊದಲಾಗಿರ್ದ ಭಕ್ತರು ಕೇಳ್ದರಲ್ಲಮನ || ೨೩ ||

೧ ಳು| ಪು (ಉ, ಓ, ಕ, ಚ, ಜ.) ೨ ಸಂಪದದೆ (ಗ.) ೩-೩ ವಿನ| ಮ (ಗ.) ೪ ನು
ಖಿನಗಿಲ್ಲ (ಇ.)

ನೀರ ಹೊಳೆ ಕೆಸರಾಗದಿಹುದೆ ನಿ
ಚಾರಿಸಲು ಬಸವನ ಸಮೀಪದ
ಲಾರು ಸಮ್ಯಗ್‌ಜ್ಞಾನಸಾಧಕರಾಗರೆಂದೆನುತ
ಹಾರವಿಸಿ ಭಕ್ತರು ನಿರಾಳವ
ಹಾರಿ ಬಿನ್ನಹ ಮಾಡೆ ಕರುಣಾ
ಕಾರ ಘನಗುರುವದಕೆ ಸಂತಸನಡುತಲಿಂ[೧]ತೆಂದ || ೩೪ ||

ಮಾತಿನದ್ವೈತದಲಿ ಮಾಱಿಯ
ಘಾತಿ ಮಾಣ[೨]ದು ಮನದ ಸಂಕ
ಲ್ಪಾತಿಶಯದಲಿ ನಾಮ ರೂಪು ಕ್ರಿಯೆ ನಿವಾರಿಸಲು
ಪ್ರಿತಿ ನೀ[೩]ತಿಯು ನುಂಗಿದುಪಮಾ
ತೀತನಾದಂಗಲ್ಲದಾಗದು
ಕೌತುಕವ ನಾನೇನ ಹೇಳುವೆ ಬಸವ ಕೇಳೆಂದ || ೩೫ ||

ತೆಂಗಿನಗಿದಗಿದೊಡೆಯುದೊಯ್ಯನೆ
ನುಂಗಿ ತಿರುಳನೆ ಜೀರ್ಣಿಸುವ ಮಾ
ತಂಗದಂತಿರೆ ಶರಿರವಳಿಯದ ಪರಿಯುಲವಗವಿ[೪]ಸಿ
ಅಂಗದೊಳಹೊಱಗಿಡಿದ ಮಾಯೆಯ
ಹಿಂಗಿಸುವ ಗುರು[೫]ಮಹಿಮೆ ನಿನಗೊ
ಬ್ಬರಿಗೆ ಸಲುವುದು ವೇದ ಮುಚ್ಚುಲು ದೇವ ಕೇಳೆಂದ || ೩೬ ||

ಬಸವನೇ ಗುರುವಾಗಿ ತಾ ಬೋ
ಧಿಸಿದನೊಡನಧ್ಯಾತ್ಮಭಾವದ
ಬೆಸುಗೆಯನು ಮುಸು ಭಾಪು ನೀನಹುದೈ ಸಮಾಧಿಯಲಿ
ಹಸನ ಮಾಡಿದೆ ತನು ಮನಂಗಳ
ದೆಸೆಯನಲ್ಲದೊಡೀ ತೆಱನನಾ
ದುಸುರ ಬಲ್ಲರು ಚಾಗೆನುತ ಮುಚ್ಚಿದನು ಗುರುರಾಯ || ೩೭ ||

೧ ಪಾಗುತಿಂ (ಉ.); ಮಾಡುತಿಂ (ಹು.) ೨ ಹಿಂಗ (ಅ.) ೩ ರೀ (ಉ.); ಗೀ (ಇ.)
೪ ದಿ (ಇ.) ೫ ಘನ (ಅ, ಇ.)

ಧರೆಯ ಕಠಿಣವ ಕೆಡಿಸಿ ನೀರಿನ
ಸಿ[1]ರಿಯ ರಸವನೆ ದಹಿಸಿ ಪಾವಕ
ನುರಿಯ ನಂದಿಸಿ ಮಾರುತನ ಸಂಚಲವ ಗತಿಗೆಡಿಸಿ[2]
ಹಿರಿಯ ಗಗನವನಿಂಬುಗೊಂಡಿಹ
ಶರಣತನದಮಹಾತ್ಮೆ ನಿನ್ನನು
ಶರಣುವೊಕ್ಕುದು ಬಸವ ಮಝು ಭಾಪೆಂದ ಗುರುರಾಯ || ೨೮ ||

ಬಸವ ಮಾಡಿದೊಡಾಯ್ತು ಗುರುನೆಲೆ
ಬಸವ ಮಾಡಿದೊಡಾಯ್ತು ಲಿಂಗವು
ಬಸವ ಮಾಡಿದೊಡಾಯ್ತು ಜಂಗಮವಜೀವ ಮಹಿಮಂಗೆ
ಬಸವನಿಂದಧ್ಯಾತ್ಮವೇ ಪಸ
ರಿಸಿತು ಲೋಕದೊಳಂತುಕಾರಣ
ಬಸವನೇ ಪರದೈವವೆಂದೆನುತಿರ್ದ ಗುರುರಾಯ || ೨೯ ||




ಮನವೆಯಕ್ಕನು ಚೆನ್ನಬಸವನೆ
ನೆನಹು ಮಡಿವಳನಜೀವು ಬಾಚರ
ಸನೆ ವಿವೇಕ ಸುಶೀಲವೇ ತಾ ಹಡಪದಪ್ಪಣ್ಣ
ತನುವೆ ಕಿನ್ನರ ಬಸವನೇ ಚೇ
ತನಕಳಾತ್ಮಕನಂತು ಬಸವ
ಣ್ಣನ ಮಹಾತ್ಮೆಯನೇನ ಹೊಗುಳುವೆನೆಂದ ಗುರುರಾಯ || ೩೦ ||

ದೇವ ನಿನ್ನಯ ಭಕ್ತರೆಲ್ಲರು
ಜೀವ ನೀನೇ ಪರಮನಿಂತೀ[3]
ಜೀವಪರಮರನೊಂದುಮಾಡಿ ನಿರಾವಲಂಬನದ
ಠಾವನೆಡೆಗುಡು ಸಾಕು ಹೊಗಳುವೊ
ಡಾವು ನಿನಗೊಂದಿದಿರೆ ಎನುತವೆ
ತೀವಿ ಭಯಭಕ್ತಿಯಲಿ ಬಿನ್ನೈಸಿದನು ಬಸವಣ್ಣ || ೩೧ ||

೧ ಝು (ಜ.) ೨ ನತಿಗಳೆದು (ಇ.) ೩ ಸಂತಿರೆ (ಉ.)

ಹೆಚ್ಚಿದನು ಗುರು ಕರುಣದಿಂದಲಿ
ನಚ್ಚಿದನು ಗುರು ಬಸವರಾಜನ
ಮಚ್ಚಿದನು ಗುರು ತನ್ನ ಭಕ್ತಿಯ ಸವಿಯ[೧]ತಸಿರಸವ
ಕೊಚ್ಚಿದನು ಗುರು ಮಱವೆಯಲ್ಲವ
ಮುಚ್ಚಿದನು ಗುರು ಭಿನ್ನ ಭಾವವ
ಬಿಚ್ಚಿದನು ಗುರು ಭವದ ಬಂಧವ ತನ್ನ ಭಕ್ತರಲಿ || ೩೨ ||

ಹಲವು ದಿನ ಮಱೆ[೨]ದೊಱಗಿ ನಿದ್ರೆಯ
ಬಲೆಯೊಳಗೆ ದುಸ್ವಪ್ನಕೋಟಿಯ
ಕೊಲೆಗೆಲಸಕೊಳಗಾದವರನೆಬ್ಬಿಸುವ ತೆಱನಂತೆ
ತೊಲಗಿಸುವೆ ಸಂಸಾರ ಸ್ವಪ್ನವ
ತಿಳುಹಿ ನಿಜ ಪದವಿಗಳ ಕೊಡುವೆನು
ಸುಲಭದಲಿ ನಾನೆನ್ನ ಭಕ್ತರಿಗೆಂದ ಗುರುರಾಯ || ೩೩ ||

ಎಂದು ಬಳಿಕವರವರಿಗುಚಿತಗ
ಳಿಂದಲವರವರನುಭವಂಗಳ
ಹೊಂದಿಕೆಯ ಹೋಲುವೆಯ ಬೆಂಬಳಿವಿಡಿದು ಕರುಣದಲಿ
ಸಂದ ಸಮ್ಯಗ್ಜ್ಞಾ[೩]ನ ಶಿರದ
ಲ್ಲಿ[೪]ಂದ ಮೀ[೫]ಱಿದ ಸುಖದ ಪರಮಾ
ನಂದವಹ ಸಂಕೇತಗಳ ಕರುಣಿಸಿದ ಗುರುರಾಯ (2) || ೩೪ ||

ನಾನು ನೀನೆಂದೆಂಬ ಭೇದವಿ
ಧಾನವಲ್ಲದಳಿ ನದ್ವಿತೀಯವ
ಧಾನವಲ್ಲದಳಿ ಜ್ಞಾತೃ ಜ್ಞಾನ ಜ್ಞೇಯ ವಿರಚಿಸಿದ
ಏನುವೆನಿಸದ ಏನುವಿಲ್ಲದ
ಏನುವಲ್ಲದ ನಿರುಪಮದ ಸುಯಿ
ದಾನ ಸುಖವನೆ ಕೊಟ್ಟನಾ ಗುರು ಬಸವರಾಜಂಗೆ || ೩೫ ||

೧ ಫಲದ (ಇ.) ೨-೨ ನಿ ಶಿರದಲಿ| ಮಿಱಿದೆ ಱೀ (ಗ.) ೩ ಸಾರದ| ೨ (ಇ.) ೪-೪ ನಿರು ಪಮದಸು| ಜ್ಞಾನಪ್ರೊತ್ತಿಹ (ಚ.)

[೧]ಮರಣವಿಲ್ಲದ ಜನನ[೧]ವಿಲ್ಲದ
ಕರಣವಿಲ್ಲದ ಕರ್ಮವಿಲ್ಲದ
ಯಿಹಪರಂಗಳೊಳೊಡಲ ಬಿಟ್ಟಯ ಹೊಱೆಗಳನು ಹೊಱದ
ನಿರುಪಮದ ನಿಶ್ಚಿಂತ ನಿಶ್ಚಲ
ಪರಮ ನಿತ್ಯಾನಂದಪದವಿಯ
ಕರುಣಿಸಿದನಾ ಗುರು ಗುಹೇಶ್ವರಲಿಂಗ ಬಸವಂಗೆ ॥ ೩೬ ॥

ಭೂರುಹದ ತಾಯ್ಬೇರಿಗಮೃತದ
ನೀರನೆಱೆದೊಡೆ ಶಾಖೆಗಳಿಗೆ ಸು
ಸಾರ ವೇದಿಸುವಂತೆ ಬಸವನ ಭಕ್ತಬಂಧುಗಳು
ಹಾರವಿಸುವಂತೆಮ್ಮ ಬಸವನ
ಕಾರಣದಲೆಲ್ಲರಿಗೆ ತನ್ನಯ
ಸಾರ ನಿತ್ಯಾನಂದಪದವಿಯನಿತ್ತ ಗುರುರಾಯ ॥ ೩೭ ॥

ತಾನೆಯೊಡ್ಡಿದ ಮಾಯೆಯನು ದಿಟ
ತಾನೆ ಹುಸಿಯೆಂದಿಲ್ಲವೆನಿಸುವ
ದೇನರಿದು ಬಸವಣ್ಣ ಮೊದಲಾಗಿರ್ದ ಭಕ್ತರಿಗೆ
ತಾನೆ ಕರುಣಿಸಿ ನುಡಿದು ಪರಮ
ಜ್ಞಾನದೃಷ್ಟಿಯನಿತ್ತು ಕೊಟ್ಟನು
ತಾನೆ ತನ್ನೊಲವಿಂದಲಾ ಪ್ರಭು ತನ್ನ ನಿಜಪದವ ॥ ೩೮ ॥

ಪರಿಪರಿಯ ಬಣ್ಣದಲಿ ಬಂದ
ಬ್ಬರದ ಮುಗಿಲೊಡ್ಡವಣೆಯಾ ಕ್ಷಣ
ಹರಿದು ನಿರ್ಮಲವಾಗದೇ ಬಿರುಗಾಳಿ ಬೀಸಿದರೆ
ಹರಿದು ಹೋಯಿತು ನಿಮಿಷಮಾತ್ರಕೆ
ಹರಗಣಂಗಳ ಮನದ ವಾಸನೆ
ಪರಮಸುಖಸಾಯ್ತವರಿಗಾ ಪ್ರಭುಲಿಂಗಲೀಲೆಯಲಿ ॥ ೩೯ ॥

೧-೧ ಜರೆಯು ಜನನವು ಮರಣ (ಇ.)   ೨ ತಳಜೀ (ಗ.)

ಪ್ರೌಢವಿಯುಜೀಯುಲು ಬಸವರಾಜನು
ಮಡಿವಳಯ್ಯನು ಚೆನ್ನಬಸವನು
ಹಡಪದಪ್ಪಣ್ಣಗಳು ನಾಗಾಯಿಗಳು ಮೊದಲಾದ
ನ್ಯಡನ ಶರಣರು ಗುರು ಗುಹೇಶ್ವರ
ನಡಿಯ ೧ಕರುಣದಲಚಲ ಪದವಿಯು೧
ಹಡೆದು ಹರುಷದಲಿದ್ದರನುದಿನ ಪರಮ ಸುಖದಿಂದೆ || ೪೦ ||
ಇತ್ತಲತಿ ಸುಲಭದಲಿ ಕರುಣಿಸಿ
ನಿತ್ಯಪದವಿಯನಖಿಳ ಶರಣರಿ
ಗಿತ್ತು ತಾ ಪರಿಪೂರ್ಣತೆಯ ನಿರ್ಲೇಪವೃತ್ತಿಯಲಿ
ತತ್ವಮಸಿ ವಾಕ್ಯಂಗಳಿಂದ
ತ್ರುತ್ರಲನುಪಮನಾಗಿ ತೊಲಗದೆ
ಸತ್ಯ ಶರಣರ ಸಲಹುತಿರ್ದನು ಗುರು ಗುಹೇಶ್ವರನು || ೪೧ ||

ಅಂತು ಗತಿ ೨೪ಕ್ಕಂ ಪದ ೧೦೪೬ಕ್ಕಂ ಮಂಗಳಂ

೧–೧ ಪದವಿಯ ಸಂಪದಂಗಳ (ಉ.)

# ೨೫ ಪರಮೇಶ್ವರನು ಗಿರಿಜೆಗೆ ಬೋಧಿಸಿದ ಗತಿ

ಸೂಚನೆ :

ಸತ್ಯಶರಣರಿಂಗಲ್ಲಮಪ್ರಭು
ನಿತ್ಯಪದವಿಯನೀಯೆ ನಿಗಮ
ಸ್ತುತ್ಯ ಶಂಕರನದನು ವಿಸ್ತರಿಸಿದನು ಗಿರಿಸುತೆಗೆ

ಬಲ್ಲವರು ಭಾವಕರು ಭಕ್ತಿಯ
ನುಳ್ಳವರು ಸಾಧಕರು ರಸಿಕರು[೧]
ಸೊಲ್ಲಿನೊಳಗಱುವವರು ಸಕಳ ಕಳಾವಿಳಾಸಿಗಳು
ಎಲ್ಲರಾಲಿಸಿ ಕೇಳುವುದು ಸಲೆ
ಸಲ್ಲಲಿತ ಸಂಗತಿ[೨]ಯ ಪದದೊಳ
ಗಲ್ಲಮನ ಮಹಿಮೆಗಳನೀ ಪ್ರಭುಲಿಂಗಲೀಲೆಯಲಿ ॥ ೧ ॥

ಶರಣಸಂದೋಹವನು ತನ್ನಯ
ಪರಮ ನಿತ್ಯಾನಂದ ಪದವಿಯ
ಲಿರಿಸಿ ತಾನಲ್ಲಿಂದೆ ಹೋಗುತಲವರ ಬೀಳ್ಕೊಟ್ಟು
ಕರುಣದಿಂದಲಿ ಸಕಲ ಸಚರಾ
ಚರರೊಳಂತರಿಯಾಮಿಯಾಗಿಯೆ
ಗುರು ಗುಹೇಶ್ವರಲಿಂಗನಿರ್ದನು ತನ್ನ ಲೀಲೆಯಲಿ ॥ ೨ ॥

ಖರಕರಪ್ರತಿಬಿಂಬವಖಿಳರೊ
ಳಿರಲದೇನೆಲ್ಲರಿಗೆಯದು ಗೋ[೩]
ಚರವೆ ನಿರ್ಮಲ ನಿಶ್ಚಲದ ನೀರಿನಲಿ ತೋರ್ಪಂತೆ
ಭರಿತನಾಗಿರ್ದೆಲ್ಲರಿಗೆ ವಿ
ಸ್ತರಿಸಿ ತೋಱದೆ ಸತ್ಯ ಸದ್ಭ
ಕ್ತರಲಿ ಕಾಣಿಸುತಿರ್ದನಲ್ಲಮಲಿಂಗ ಲೀಲೆಯಲಿ ॥ ೩ ॥

೧ ಋಷಿಗಳು (ಇ.); ಸಿದ್ಧರು (ಉ.) ೨ ಸದ್ಗತಿ (ಉ.) ೩ ದೃಗ್ಗೋ (ಕ, ಚ, ಜ.)

ಗುರು ಗುಹೇಶ್ವರಲಿಂಗ ತನ್ನಯ
ಚರಣ ಭಕ್ತರ ಹೃದಯಕಮಲಾ
ಕರದಲಾಡುತ[೧] ಹಂಸೆಯಂತಿರುತಿರ್ದಸೊಲಿದಿತ್ತು[೨]
ಹರುಷದಲಿ ಬಳಿಕತ್ತ ಪರಮೇ
ಶ್ವರನೊಳಾ ಕೈಲಾಸಪುರದೊಳು
ಸರಸಗೋಷ್ಠಿಯ ಮಾಡುತಂದಿಂ[೩]ತೆಂದಳಾ ಗಿರಿಜೆ || ೪ ||

ಎಲೆ ಸದಾಶಿವ ನನ್ನ ಸಾತ್ವಿಕ
ಕಳೆಯ ನಿನ್ನಯ ಗಣವ ನೀನಂ
ದಿಳೆಯಲುದಯಿಸಿಯುಲ್ಲವ-ಪ್ರಭುಲಿಂಗನೊಲವಿಂದೆ
ತಿಳಿದು ನಿತ್ಯತ್ವವನು ಸಾಧಿಸಿ
ಕೊಳಲಿಯೆಂದನಿಬರವನು ಕಳುಹಿದೆ
ಬಳಿಕಲವರೇನಾದರೆಂದಾಲಿಸಿದಳಾ ಗಿರಿಜೆ || ೫ ||

ಎನಲು ಬಸವಣ್ಣಾದಿ ಭಕ್ತರಿ
ಗನುಪಮದ ಪದವಾದುದನು ತಾ
ನೆನೆದ ನೆನಹಿಗೆ ಮುಂಚೆ ಕಂಡನು ಶರ್ವ ಸರ್ವಜ್ಞ
ಮನವೊಲಿದು ನಸುನಗೆಯ ಕಾಂತಿಯ
ನನೆಯನಲರಿಸುತಾ ಹದನ ನಿಜ
ವನಿತೆಗೊರೆವುತಲಿರ್ದನಾನಂದದಲಿ ಶಶಿಮೌಳಿ || ೬ ||

ದೇವಿ ನಿನ್ನಯ ಸಾತ್ವಿಕವೆ ಮಹ
ದೇವಿನೆಸರಲಿ ಹುಟ್ಟಿ ಬಳೆದಳು
ದೇವಗಣದೊಳು ವೃಷಭರಾಜನೆ ಬಸವನೆಸರಿನಲಿ[೪]
ಠೀವಿ ಮಿಕ್ಕವರೆಲ್ಲರುಚಿತವ
ಚೋವಿಳಾಸತೆ ಹೆಸರುವಡೆದಾ
ಭೂಪಸಯದಲಿ ಸಂಜನಿಸಿದರು ಕಾಂತೆ ಕೇಳೆಂದ || ೭ ||

೧ ಪಕ್ಷ್ಯದ (ಬ.) ೨ ಕೊಲಿದಾಡುತಿರಲಿತ್ತು (ಒ.) ೩ ಸಮಯದೊಳಗಿಂ (ಇ.)
೪ ನಾಮದಲಿ (ಇ, ಜ.)

ಜನಿಸಿ ಬಳಿದೊಂದೊಂದು ಕಾಯಕ
ದನುವಿಡಿದು ತಾವಲ್ಲಮಪ್ರಭು
ವನೆ ಸದಾ ಧ್ಯಾನಿಸುತಲಿದ್ದರು ಭಕ್ತಿಭಾವದಲಿ
ಅನಿಬರೊಳಗೊಬ್ಬರಿಗದೊಬ್ಬರು
ಘನವೆನಲು ಸಂಪ್ರೀತಿಯಿಂದಲಿ
ತನುಮನಂಗಳ ಸವೆವು[1]ತಿರ್ದರು ಲಿಂಗಜಂಗಮಕೆ ॥ ೮ ॥

ಆತನಲ್ಲಮ ಸಕಲ ಸಮಯ
ಪ್ರೀತನಲ್ಲಿಯು ಶೈವದಲಿ ಸಂ
ಪ್ರೀತನದರೊಳು ವೀರಶೈವದಲತಿಮಹಾ ಪ್ರೀತ
ಈ ತೆರನನರಿದಖಿಳ ಭಕ್ತಸ
ಮೇತವಂತಾ ವೀರಶೈವದ
ನೀತಿಯನೆ ನಿರ್ಣಯಿಸುತಿರ್ದರು ಕಾಂತೆ ಕೇಳೆಂದ ॥ ೯ ॥

ಉಳ್ಳ ಷಡುಸಮಯಗಳ ನಡಿವಳಿ
ಯೆಲ್ಲವೇಕೆಂದವರ ಮಾರ್ಗವ
ನೊಲ್ಲ ನೀನೀ[2]ಹೊಗಳಿ ಹೇಳಿದ ವೀರಶೈವದಲಿ
ಒಳ್ಳಿತೇನುಂಟೆಂದು ಮೆಚ್ಚಿದ
ನಲ್ಲಮನು ಹೇಳೆನುತ ತನ್ನಯ
ವಲ್ಲಭನ ಕೇಳಿದಳು ಮಾಣದೆ ಮತ್ತೆ ಗಿರಿಜಾತೆ ॥ ೧೦ ॥

ಆದೊಡಾಲಿಸಿ ಕೇಳು ಧರ್ಮಾ
ರ್ಥಾದಿಯಾಗಿಹ ಕಾಮ ಮೋಕ್ಷಾ
ಮೋದವಾಗಿಹವುಳಿದ ಸಮಯಗಳಾಗಮೋಕ್ತಿಯಲಿ
ವೇದವರಿಯಲು ವೀರಶೈವದ
ಹಾದಿಯೆಂಬುದು ನಿಸ್ಪೃಹದ ಸಂ
ಬೋಧೆಯಾಗಿಹುದೇನನೆಂಬೆನು ಗಿರಿಜೆ ಕೇಳೆಂದ ॥ ೧೧ ॥

೧ ಸಲಿಸು (ಇ. ಉ.)　೨ ನೊಲ್ಲದೆಯು ನೀ (ಇ.): ನಲ್ಲನೆನಿಸಿಯೆ (ಉ.)

ಕರ್ಮಮಾತ್ರವೆ ಪಾಪವೆನ್ನದೆ
ಕರ್ಮಲಂಪಟರುಗಳು ಪಾಪದ
ಕರ್ಮ ಪುಣ್ಯದ ಕರ್ಮವೆಂಬಿಂತೆರಡ ಮಾಡಿದರು
ಕರ್ಮಮಾತ್ರವೆ ಭವದ ಬೀಜದ
ಧರ್ಮವೆಂದಾ ವೀರಶೈವದ
ಕ[೧]ರ್ಮಿಗಳು ನಿಷ್ಕರ್ಮರೆನಿಪರು ಗಿರಿಜೆ ಕೇಳೆಂದ ॥ ೧೨ ॥

ಊಹಿಸಲು ಕರ್ಮದಲಿ ಜೀವ
ದ್ರೋಹವಾ ದ್ರೋಹದಲಿ ಭವಸಂ
ದ್ರೋಹವಾ ಭವವುಳ್ಳ ಭವಿಗಳು ಶುದ್ಧ ನರಕಿಗಳು
[೨]ಮೋಹವಿಲ್ಲದೆ ಸಕಲ ಜೀವ[೨]
ಸ್ನೇಹವುಳ್ಳಾ ವೀರಶೈವದ
ಗಾಹುಕಾಱರು ಪರಮ ಸುಖಿಗಳು ಗಿರಿಜೆ ಕೇಳೆಂದ ॥ ೧೩ ॥

ವೀರಶೈವವನದುನಿಮಿತ್ತದ
ಲಾರು ಹೊಕ್ಕಂಗೈಸಿ ಭಕ್ತಿಯ
ಪಾರವೆಯ್ದಿಸಬಲ್ಲರೇ ಅವರಲ್ಲದುಳಿದವರು
ಧಾರಣಿಯಲಿದನಱಿದು ಕರುಣಾ
ಕಾರನಲ್ಲಮ ತನ್ನ ಭಕ್ತರು
ಹಾರವಿಸಿಕೊಂಬಂತೆ ಸುಳಿದನು ಗಿರಿಜೆ ಕೇಳೆಂದ ॥ ೧೪ ॥

ಬಂದು ಬಳಿಕವರವರಿಗುಚಿತಗ
ಳಿಂದಲನುಭವಮಾರ್ಗವನು ದಯೆ
ಯಿಂದಲುಪದೇಶಿಸಿ ಮಹಾ ಸುಜ್ಞಾನ ದೃಷ್ಟಿಯನು[೩]
ಕಂದೆಱಿಸಿ ಮಹದೇವಿಯಕ್ಕಗೆ
ಸಂದ ನಿಜ ಶರಣರಿಗೆ ನಿತ್ಯಾ
ನಂದ ಪದವಿಯನಿತ್ತನಲ್ಲಮ ಗಿರಿಜೆ ಕೇಳೆಂದ ॥ ೧೫ ॥

೧ ಧ (ಉ.) ೨-೨ ದೇಹವಿಲ್ಲದೆ ಸಕಲದೊಳು ನಿ (ಜ.) ೩ ಲಿ (ಇ, ಗ.)

ಭವಭವದಲಜ್ಞಾನವಿಧಿಯಲಿ
ಭುವನಭವನವ ತೊಳಲಿ ಬಳಲುವ
ವ್ಯವಹರಣೆಯಂತಲ್ಲ ಗುರುಕೃಪೆಯಾದ ಶರಣರಿಗೆ
ಹವಣಿಸಲು ಬಾರದ ಪರಬ್ರ
ಹ್ಮವನು ಮೀಱಿದ ನಿರುಪಮಸ್ಥಾ
ನವನು ಸೂಜಿಯ ಕೊಟ್ಟನಲ್ಲಮ ಗಿರಿಜೆ ಕೇಳೆಂದ ॥ ೧೬ ॥

ದೇವಿ ಕೇಳ್ ನಿನ್ನಂಶದಾ ಮಹ
ದೇವಿ ನನ್ನಂಶದ ಗಣಂಗಳು
ದೇವಕನ್ಯೆಯರೆಲ್ಲರಲ್ಲಮನಿಂದೆ ಜಗವಱಿಯೆ
ತೀವಿ ತಮ್ಮಯ ನಾಮ ರೂಪು
ಕ್ರೀ[1]ವಿಳಾಸ[2]ವನಿಳುಹಿ ನಿತ್ಯ[3] ನೀ
ರಾವಲಂಬದ ಸುಖಿಗಳಾದರು ಗಿರಿಜೆ ಕೇಳೆಂದ ॥ ೧೭ ॥

ಲೇಸು ಮತ್ತೆಯು[4]ನಿ[5]ಮ್ಮವರು ಕೈ
ಲಾಸಪದವಿಯ ಮೀಱಿ ನಿರುಪಮ
ವಾಸವನೆ ವೆಂಟಣಿಸಿಕೊಂಡರೆಲೈ ಮಹಾದೇವ
ಈ ಸುಖಂಗಳನಲ್ಲಮನೆ ನಿ
ರ್ದೈಸಿ ಕೊಟ್ಟನು ಶರಣರಿಗೆ ಸಂ
ತೋಷವಿನ್ನೆನಗಾದುದೆಂದಳು ಬಳಿಕ ಗಿರಿಜಾತೆ[6] ॥ ೧೮ ॥

ದೇವ ನೀನೆಂದಂತೆ ಘನಮಹಿ
ಮಾವಲಂಬನು ತಪ್ಪದೈ ಪ್ರಭು
ದೇವ ನಾನದನಱಿದೆನೀಗಳು ನಿನ್ನ ಕರುಣದಲಿ
ದೇವ ನಿನ್ನ ನಿಜಸ್ವರೂಪಕೆ
ದಾವುದರಿದೆಂದೆನುತ ಪಾರ್ವತಿ
ದೇವಿ ಸಂತೋಷದಲಿ ನುಡಿದಳು ಬಳಿಕ ಶಂಕರಗೆ ॥ ೧೯ ॥

೧ ಕ । ಳಾ (ಇ.)  ೨ ಕಳಾಪ (ಕ.)  ೩ ತಿಳಿದು ನಿಖಿಳ (ಜ.)  ೪ ಈಶ ಬಿನ್ನಹ (ಇ.)
೫ ತ್ರಿನ್ನೆ (ಜ.)  ೬ ಗಿರಿಜೆ ನಸುನಗುತ (ಇ.)

ಇಂತು ಸತತೋತ್ಸಾಹದಿಂದಲಿ
ಸಂತತಾನಂದೈಕಸುಖ[೧]ದಲಿ
ಕಾಂತೆ ಸಹಿತಿ[೨]ರ್ನೀಶ್ವರನತ್ತ ಬಳಕಿತ್ತ
ಚಿಂತಿತಾರ್ಥವನಖಿಳ ಭಕ್ತರ
ತಿಂತಿಣಿಗೆ ಕೊಡುತಲ್ಲಮಪ್ರಭು
ಸಂತಸದಲಿರುತಿರ್ದನೆಲ್ಲರ ಹೃದಯಕಮಲದಲಿ ॥ ೨೦ ॥

ಬಾಲರನು ವೃದ್ಧರನು ಭೂಮೀ
ಪಾಲರನು ಬಡವರನು ಸದಮಲ
ಶೀಲರನು ಗುಣಿಗಳನು ಗೋ ಬ್ರಾಹ್ಮರನು ಭಕ್ತರನು
ಲೋಲತೆಯಲಿ ಸಮಸ್ತಜಾತಿಯ
ಜಾಲವನು ಸರ್ವರನು ಕರುಣಿಸಿ
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು ॥ ೨೧ ॥

ಹಿರಿಯರಿಗೆ ಕಿರಿಯರಿಗೆ ಸದಮಲ
ಚರಿತರಿಗೆ ಚದುರರಿಗೆ ಸಜ್ಜನ
ಶರಣರಿಗೆ ಮುಗ್ಧರಿಗೆ ಸಕಳಕಳಾವಿದಗ್ಧರಿಗೆ
ಗುರುವರಿಗೆ ಹಿತವರಿಗೆ ಸಚರಾ
ಚರರಿಗನುದಿನ ಕರುಣದಿಂದಲಿ
ವರದನಾಗಲಿ ಗುರು ಗುಹೇಶ್ವರಲಿಂಗ ಲೀಲೆಯಲಿ ॥ ೨೨ ॥

ಆಲಸಿಕೆಯಿಂದಾದೊಡೋದಲು
ನಾಲಗೆಯ ಬಜ ಬಿಟ್ಟು ಹೋಹುದು
ಕೇಳಲನುಕರಿಸಿದೊಡೆ ಕರ್ಣೇಂದ್ರಿಯಕೆ ದಣಿ[೩]ವಹುದು
ಆಲಿಸಿದ[೪] ಪದದರ್ಥ[೪]ಮನಸಿನ
ಮೇಲೆ ನಿಲೆ ನಿತ್ಯತ್ವವಹುದೆನೆ
ಲಾಲಿಸುವು[೫]ದವನೊಲಿಪ್ರೊಡೀ[೫] ಪ್ರಭುಲಿಂಗಲೀಲೆಯಲಿ ॥ ೨೩ ॥

೧ ರಸ (ಇ,) ೨ ಸುಖ (ಇ.) ೩ ಯೆ (ಇ.) ೪-೪ ಮಾಡಲು । ಮೇಲುಗತಿ ನಿತ್ಯತ್ವವಹುದಿದೆ । ಕೇಳಲೊದಗುವುದೀ ಸುಹಾ (ಇ.) ೫ ಪೆಸಸರಿವುದೇ (ಅ.); ನನರ ತದಲಿ (ಗ.)

ನೋಡಿದರೆ ಭಯಭಕ್ತಿಯಲಿ ಕೊಂ
ಡಾಡಿದರೆ ರಾಗದಲಿ ರಂಜಿಸಿ
ಹಾಡಿದರೆ ಹಾರೈಸಿದರೆ ಕಿವಿಗೊಟ್ಟು ಕೇಳಿದರೆ
ಕೂಡೆ ಲೀಲೆಯನಱಿದು ಹರುಷವ
ಮಾಡಿದರೆ ಭವಬಾಧೆಗಳನೀ
ಡಾಡಿ ನಿತ್ಯವ ಹಡೆವರೀ ಪ್ರಭುಲಿಂಗಲೀಲೆಯನು || ೨೪ ||

ಒಂದು ಸಾವಿರದೊಂದು ಶತ ಹ
ನ್ನೊಂದು ಪದವೆಂದೆಂಬ ಪರುಷದ
ಸಂದ ಶಿಲೆಯನು ಬಳಸಿದಿಪ್ಪತ್ತೈದು ಗತಿಯೆಂಬ
ಹೊಂದಿಗೆಯ ಸೋಪಾನಗಳ ಬಲಿ
ದಂದವಿಸಿಯಲ್ಲಮನ ಪರಮಾ
ನಂದಲೀಲಾಮೃತಸರೋವರವಾಯ್ತು ಜಗದೊಳಗೆ[೧] || ೨೫ ||

**ಅಂತು ಗತಿ ೨೫ಕ್ಕಂ ಪದ ೧೧೧೧ಕ್ಕಂ ಮಂಗಳಂ**

**ಚಾಮರಸ ಕೃತ ಪ್ರಭುಲಿಂಗಲೀಲೆ**

**— ಸಮಾಪ್ತಂ —**

**ಮಂಗಳ ಮಹಾ ಶ್ರೀ ಶ್ರೀ ಶ್ರೀ**

೧ ಜಗಮೋಗೆಂಪಿ (ಅ.); ಜಗ ಮುಳುಗೆ (ಇ.); ಜಗಱಿವಂತೆ (ಬ.); ಜಂಗಮಕೆ (ಗ.)

# ಅನುಬಂಧ



## ೧. ಮಂಗಲಾಚರಣದ ಗತಿ

ವಚನ ॥ ೧ ॥

ಸಹಜದಿಂದೆ ನಿರಾಲಂಬವಾಯಿತ್ತು ನಿರಾಲಂಬದಿಂದೆ ನಿರಾಳವಾಯಿತ್ತು
ನಿರಾಳದಿಂದೆ ನಿರವಯವಾಯಿತ್ತು, ನಿರವಯದಿಂದೆ ಆದಿಯಾಯಿತ್ತು,
ಆ ಆದಿಯ ಮೂರ್ತಿಯಿಂದಲೊಬ್ಬ ಶರಣನಾದ;
ಆ ಶರಣನ ಮೂರ್ತಿಯಿಂದೆ ಸದಾಶಿವನಾದ
ಆ ಸದಾಶಿವನ ಮೂರ್ತಿಯಿಂದೆ ಈಶ್ವರನಾದ
ಆ ಈಶ್ವರನ ಮೂರ್ತಿಯಿಂದೆ ರುದ್ರನಾದ,
ಆ ರುದ್ರನ ಮೂರ್ತಿಯಿಂದೆ ವಿಷ್ಣುವಾದ,
ಆ ವಿಷ್ಣುವಿನ ಮೂರ್ತಿಯಿಂದೆ ಬ್ರಹ್ಮನಾದ
ಆ ಬ್ರಹ್ಮನ ಮೂರ್ತಿಯಿಂದಲಾದವು ಸಕಲ ಜಗದ ಜೀವಜಂತುಗಳು
ಇಂತಿವರೆಲ್ಲ ನಮ್ಮ ಗುಹೇಶ್ವರನ ಕರಸ್ಥಲದ ಹಂಗಿನಲ್ಲಿ ಬೆಳೆದರು ॥ ೧ ॥
ಆದಿಯಲ್ಲೊಬ್ಬ ಮೂರ್ತಿಯಾದ ಆ ಮೂರ್ತಿಯಿಂದೆ ಸದಾಶಿವನಾದ।
ಆ ಸದಾಶಿವಂಗೆ ಜ್ಞಾನಶಕ್ತಿಯಾದಳು
ಆ ಸದಾಶಿವಂಗೆ ಜ್ಞಾನಶಕ್ತಿಗೆ ಇಬ್ಬರಿಗೆಯು ಶಿವನಾದ
ಆ ಶಿವಂಗೆ ಇಚ್ಛಾಶಕ್ತಿಯಾದಳು
ಆ ರುದ್ರಂಗೆ ಕ್ರಿಯಾಶಕ್ತಿಗೆ ಇಬ್ಬರಿಗೆಯು ರುದ್ರನಾದ।
ಆ ರುದ್ರಂಗೆ ಕ್ರಿಯಾಶಕ್ತಿಯಾದಳು
ಆ ರುದ್ರಂಗೆ ಕ್ರಿಯಾಶಕ್ತಿಗೆ ಇಬ್ಬರಿಗೆಯು ವಿಷ್ಣುವಾದ
ಆ ವಿಷ್ಣುವಿಂಗೆ ಮಹಾಲಕ್ಷ್ಮಿಯಾದಳು
ಆ ವಿಷ್ಣುಂಗೆ ಮಹಾಲಕ್ಷ್ಮಿಗೆ ಇಬ್ಬರಿಗೆಯು ಬ್ರಹ್ಮನಾದ

ಆ ಬ್ರಹ್ಮಂಗೆ ಸರಸ್ವತಿಯಾದಳು ಆ ಬ್ರಹ್ಮಂಗೆ ಸರಸ್ವತಿಗೆ ಇಬ್ಬರಿಗೆಯು
ನರರು ಅಸುರರು ಮನುಮುನಿಗಳು ದೇವರ್ಕಳು ಹೆಣ್ಣು ಗಂಡು
ಸಚರಾಚರಂಗಳು
ಸಹಿತವಾಗಿ ಎಂಬತ್ತುನಾಲ್ಕು ಲಕ್ಷ ಜೀವಜಂತುಗಳು
ತೋರುವ ತೋರಿಕೆಯಲ್ಲವು
ಹುಟ್ಟಿತ್ತು ಕೂಡಲಚೆನ್ನಸಂಗಮದೇವ ॥ ೨ ॥

## ೨. ಪಾರ್ವತೀ ಪರಮೇಶ್ವರ ಸಂವಾದದ ಗತಿ

**ವಚನ** ॥ ೨ ॥
ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿವಂದು,
ದೇವದಾನವರ ಮಾಯೆ ಅಗಿದಗಿದು ತಿಂಬಂದು,
ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು
ನೊಸಲಕಣ್ಣು ಪಂಚಮುಖ ದಶಭುಜದವರಿಗೆ ಮಾಯೆ
ಅರ್ಧಾಂಗಿಯಾದಂದು
ಅಷ್ಟಾಶೀತಿ ಸಹಸ್ರ ಋಷಿಗಳ ಮಾಯೆ ತಪೋಮದದಲಿ ಕೆಡಹುವಂದು
ನಾನು ಮಾಯಾಕೋಳಾಹಳನಾಗಿರ್ದೆ ಕಾಣಾ ಗುಹೇಶ್ವರಾ ॥ ೩ ॥

## ೩. ಮಾಯೆ ಹುಟ್ಟಿದ ಗತಿ

**ವಚನ** ॥ ೧ ॥
ದೇವರೆಲ್ಲರ ಹೊಡೆತಂದು ದೇವಿಯರೊಳಗೆ ಕೂಡಿತ್ತು ಮಾಯೆ
ಹರಹರ ಮಾಯೆ ಇದ್ದೆಡೆಯ ನೋಡಾ
ಶಿವಶಿವ ಮಾಯೆ ಇದ್ದೆಡೆಯ ನೋಡಾ
ಎರಡೆಂಬತ್ತು ಕೋಟಿ ಪ್ರಮಥಗಣಂಗಳು ಅಂಗಾಲ ಕಣ್ಣವರು
ಮೈಯೆಲ್ಲ ಕಣ್ಣವರು
ನಂದಿವಾಹನ ರುದ್ರರು ಇವರೆಲ್ಲರು ಮಾಯೆಯ ಕಾಲುಗಾಹಿನ
ಸರಮಾಲೆ ಕಾಣಾ ಗುಹೇಶ್ವರಾ ॥ ೪ ॥

ಬ್ರಹ್ಮನ ಘನವೆಂಬೆನೆ ಬ್ರಹ್ಮನ ನುಂಗಿತ್ತು ಮಾಯೆ
ವಿಷ್ಣುವ ಘನವೆಂಬೆನೆ ವಿಷ್ಣುವ ನುಂಗಿತ್ತು ಮಾಯೆ
ರುದ್ರನ ಘನವೆಂಬೆನೆ ರುದ್ರನ ನುಂಗಿತ್ತು ಮಾಯೆ
ತಾ ಘನವೆಂಬೆನೆ ತನ್ನ ನುಂಗಿತ್ತು ಮಾಯೆ
ಸರ್ವವು ನಿನ್ನ ಮಾಯೆ ಒಬ್ಬರನೊಳಕೊಂಡಿತ್ತೆ ಹೇಳಾ ಗುಹೇಶ್ವರಾ ‖ ೫ ‖

## ೪. ಮಾಯೆ ಮಧುಕನಾಥನ ಪೂಜಿಸಿದ ಗತಿ

**ವಚನ** ‖ ೧ ‖

ಹೊತ್ತಾರೆ ಎದ್ದು ಅಗ್ಗವಣಿಯ ಪತ್ರಿಯ ತಂದು ಹೊತ್ತು ಹೋಗದ
ಮುನ್ನ ಪೂಜಿಸು ಲಿಂಗವ ।
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು
ಹೊತ್ತು ಹೋಗದ ಮುನ್ನ ಮೃತ್ಯು ಒಯ್ಯದ ಮುನ್ನ
ತೊತ್ತುಗೆಲಸವ ಮಾಡು ಕೂಡಲಸಂಗಮದೇವನ ‖ ೬ ‖
ಆಚ್ಚುಗವೇಕಯ್ಯ ಸಂಸಾರದೊಳಗೆ
ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು, ಜೇಗ ಜೇಗ ಅರ್ಚನೆ ಪೂಜೆಯ
ಮಾಡುವುದು ಕೂಡಲಸಂಗನ ಕೂಡುವುದು ‖ ೭ ‖
ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವುದು
ಮಾಡಿದ ಪೂಜೆಯ ನೋಡುವುದಯ್ಯಾ
ಶಿವತತ್ವಗೀತವ ಪಾಡುವುದು ಶಿವನ ಮುಂದೆ ನಲಿದಾಡುವುದಯ್ಯಾ
ಭಕ್ತಿಸಂಭಾಷಣೆಯ ಮಾಡುವುದು ನಮ್ಮ ಸಂಗಯ್ಯನ ಕೂಡುವುದು ‖ ೮ ‖

## ೫. ಪ್ರಭು ಮದ್ದಳೆಯ ಬಾರಿಸಿದ ಗತಿ

**ವಚನ** ‖ ೧ ‖

ಕಡಲ ನುಂಗಿದ ಕಪ್ಪಿನ ಪರಿ ನವಸಾಸಿರ ಸಿಡಿಲು ಹೊಯ್ದು
ಬಯಲಿಂಗೆ ಬಣ್ಣವುಂಟೆ
ಕಂಗಳ ಮುಂದಣ ಕನಸು ಹಿಂಗದ ತುಂಬಿಯ ಪರಿಮಳ ಅಂಗವಿಲ್ಲದ
ರೂಹಿಂಗೆ ಸಂಗವುಂಟೆ

ಇದೇಸೋ ಗಗನದ ಹಣ್ಣನೆ ಕೊಯ್ದು ಮುಗದೆ ರುಚಿಯುನರಿಯಳು
ಹೆಗರಣದ ಹೆಮ್ಮಾವಿನ ಹೆಯನು ಸಯುವಪ್ಪುದೆ ಗುಹೇಶ್ವರಾ || ೯ ||

## ೬. ವಿಮಳೆ ಬಂದ ಗತಿ

**ವಚನ** || ೧ ||

ಕೃತಯುಗದಲ್ಲಿ ಭಕ್ತಿಕಾರಣ ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆ
ತ್ರೇತಾಯುಗದಲ್ಲಿ ಭಕ್ತಿಕಾರಣ ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆ
ದ್ವಾಪರಯುಗದಲ್ಲಿ ಭಕ್ತಿಕಾರಣ ಅನಿಮಿಷನೆಂಬ ಗಣೇಶ್ವರನಾಗಿರ್ದೆ
ಕಲಿಯುಗದಲ್ಲಿ ಭಕ್ತಿಕಾರಣ ಪ್ರಭುವೆಂಬ ಜಂಗಮನಾಗಿರ್ದೆ ಕಾಣಾ
ಗುಹೇಶ್ವರಾ || ೧೦ ||
ಆದಿಯಾಧಾರವಿಲ್ಲದಂದು ಹೆಮ್ಮುಬಿಮ್ಮುಗಳಿಲ್ಲದಂದುಂದು ಶೂನ್ಯನಿಶ್ಶೂನ್ಯ
ವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನ
ಶರಣನುದಯಿಸಿದನಂದು || ೧೧ ||
ಆದಿಯ ಸಂಗದಿಂದಾದವನಲ್ಲ, ಸಂಗಸುಖದೊಳಗಿದ್ದವನಲ್ಲ,
ಇಬ್ಬರ ಸಂಗದಿಂದಾದವನಲ್ಲ
ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ ನಾದಬಿಂದುಕಳೆ ಹುಟ್ಟದ ಮುನ್ನ
ಅಲ್ಲಿಂದತ್ತ ಗುಹೇಶ್ವರಾ || ೧೨ ||

## ೭. ಪ್ರಭು ಮಾಯೆಗೆ ಸಿಕ್ಕದೆ ಹೋದ ಗತಿ

**ವಚನ** || ೧ ||

ಕರೆಯದೆ ಬಂದುದ ಹೇಳದೆ ಹೋದುದನಾರು ಬಲ್ಲರು ?
ಅಂದಂದಿಗೆ ಬಂದ ಪ್ರಾಣಿಗಳಾರು ಅರಿಯರಲ್ಲ
ಬಂದಬಂದವರೆಲ್ಲ ಮಿಂದುಂಡು ಹೋದರು !
ಗುಹೇಶ್ವರಲ್ಲಯ್ಯನುಣ್ಣದೆ ಹೋದುದನಾರು ಅರಿಯರಲ್ಲ || ೧೩ ||
ಭಾವಗೆಟ್ಟನು ಭವಗೆಟ್ಟನು ಒಡಹುಟ್ಟಿದರೈವರ ಕೈಬಿಟ್ಟನು

ಭಂಡನು ಲಜ್ಜಭಂಡನು ಕಂಡರೆ ನುಡಿಸದಿರಾ ಮಾಯಾದೇವಿ
ಅರುವೆಯನುಟ್ಟನು ನೆರೆಮರುಳಾದನು ಹುಟ್ಟಮುರಿದನು ಮಡಿಕೆಯನೊಡೆದನು
ಆದಿಪುರಾತನು ಅಚಲ ಲಿಂಗೈಕ್ಯನು
ಗುಹೇಶ್ವರಲ್ಲಯ್ಯಂಗೆ ಮೂಗಿಲ್ಲ ಮಗಳೇ ‖ ೧೪ ‖

ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿವಂದು
ದೇವದಾನವರ ಮಾಯೆ ಅಗಿದಗಿದು ತಿಂಬಂದು,
ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು,
ನೊಸಲಕಣ್ಣು ಪಂಚಮುಖ ದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು
ಅಷ್ಟಾಶೀತಿಸಹಸ್ರ ಋಷಿಯರುಗಳ ಮಾಯೆ
ತಪೋಮದದಲಿ ಕೆಡಹುವಂದು, ನಾನು
ಮಾಯಾಕೋಳಾಹಳನಾಗಿರ್ದೆ ಕಾಣಾ ಗುಹೇಶ್ವರಾ ‖ ೧೫ ‖

## ೮. ಬಸವಾದಿ ಪ್ರಮಥರು ಧರೆಗಿಳಿದ ಗತಿ

**ವಚನ** ‖ ೧ ‖

ಪ್ರಥಮಕಾಲದಲ್ಲಿ ದೇವಗಣ ಮಹಾಗಣ ಸುರಗಣ ಕಿನ್ನರಗಣ ಸಹಿತ ನಮ್ಮ
ಬಸವಣ್ಣನು ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವ ತಂದು ಶಿವಗಣವ
ಮಾಡಿದಾತನು ನಮ್ಮ ಬಸವಣ್ಣನು
ಸ್ವರೂಪಸಾರಾಯವನು ಪದಾರ್ಥವೆಂದಾತ ನಮ್ಮ ಬಸವಣ್ಣನು ।
ಕಲಿದೇವರದೇವಾ ನಿಮ್ಮ ಶರಣ ಬಸವಣ್ಣನಿಂದಾನು ಬದುಕಿದೆನು ‖ ೧೬ ‖

ಮಾರಾರಿಯ ಬೆಸನದಿಂದ ಧಾರುಣಿಗೆ ಬಸವನವತರಿಸಿ
ಸಾರಾಯ ಸದ್ಭಕ್ತಿಯನು ತೋರಿದನು ಶಿವಶರಣರಿಗೆಲ್ಲ
ಭಕ್ತಿಯ ಪಥವ ಮುಕ್ತಿಯ ಭೇದವ ಸತ್ಯಶರಣರಿಗೆ ಉಪದೇಶವ ಮಾಡಿ
ನಿತ್ಯಲಿಂಗಾರ್ಚನೆಯೊಳಗೆನ್ನನಿರಿಸಿ ರಕ್ಷಿಸಿದಾತ
ಚೆನ್ನಬಸವಣ್ಣ ಕಾಣಾ ಕಲಿದೇವರದೇವಾ ‖ ೧೭ ‖

## ೯. ಪ್ರಮಥರು ಕಲ್ಯಾಣಕ್ಕೆ ಬಂದ ಗತಿ

**ವಚನ** ॥ ೧ ॥

ಪ್ರಾಣಲಿಂಗದ ಪೂರ್ವಾಶ್ರಯವ ತಳೆಯಲೆಂದು ಲಿಂಗಪ್ರಾಣಿಯಾದ
ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ
ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾದ
ಈ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು
ಬಸವಣ್ಣನು ಮರ್ತ್ಯಕ್ಕೆ ಬಂದನು ಕಾಣಾ ಗುಹೇಶ್ವರಾ ॥ ೧೮ ॥

## ೧೦. ಮಹಾದೇವಿಯಕ್ಕನ ಗತಿ

**ವಚನ** ॥ ೧ ॥

ಮುಡಿ ಬಿಟ್ಟು ಮೊಗ ಬಾಡಿ ತನು ಕರಗಿದವಳ
ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ
ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ; ಬಲುಹಳಿದು ಭವಗೆಟ್ಟು ಛಲವಳಿದು
ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ ॥ ೧೯ ॥

ಎರದ ಮುಳ್ಳಿನಂತೆ ಪರ ಗಂಡರೆನಗವ್ವಾ;
ಸೋಂಕಲಮ್ಮೆ ಸುಳಿಯಲಮ್ಮೆ ನಂಬಿ ನಚ್ಚಿ ಮಾತಾಡಲಮ್ಮೆನವ್ವಾ
ಚೆನ್ನಮಲ್ಲಿಕಾರ್ಜುನನಲ್ಲದುಳಿದ ಗಂಡರ ಉರದಲ್ಲಿ ಮುಳ್ಳುಂಟೆಂದು
ನಾನಪ್ಪಲಮ್ಮೆನವ್ವಾ ॥ ೨೦ ॥

ಕಾಯ ಕರ್ರನೆ ಕಂದಿದರೇನಯ್ಯಾ, ಕಾಯ ಮಿರ್ರನೆ ಮಿಂಚಿದರೇನಯ್ಯಾ ?
ಅಂತರಂಗ ಶುದ್ಧವಾದ ಬಳಿಕ ಕಾಯವೇನಾದರೇನಯ್ಯಾ
ಚೆನ್ನಮಲ್ಲಿಕಾರ್ಜುನದೇವರಿಗೊಲಿದ ಕಾಯವೇನಾದರೆ ನಿಮಗೇನಯ್ಯಾ ॥ ೨೧ ॥

ಎರೆಯಂತೆ ಕರಕರಗಿ ಮಳಲಂತೆ ಜರೆಜರೆದು
ಕನಸಿನಲಿ ಕಳವಳಿಸಿ ಆನು ಬೆರಗಾದೆ
ಆವುಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ

ಆಪತ್ತಿನ ಸಖಿಯರನಾನಾರುವನು ಕಾಣೆ
ಆರಸಿಕಾಣದ ತನುವ ಬೆರಸಿ ಕೂಡಿದ ಸುಖವ ನೀನೆನಗೆ ಕರುಣಿಸಾ
ಚೆನ್ನಮಲ್ಲಿಕಾರ್ಜುನಾ ॥ ೨೨ ॥

## ೧೧. ಗೊಗ್ಗಯ್ಯನ ಗತಿ

**ವಚನ** ॥ ೧ ॥

ಕಾಣದುದನರಸುವರಲ್ಲದೆ ಕಂಡುದನರಸುವರೇ ?
ಘನಕ್ಕೆ ಘನವಾದ ವಸ್ತು ತಾನೆ ಗುರುವಾದ,
ತಾನೆ ಲಿಂಗವಾದ, ತಾನೆ ಜಂಗಮವಾದ, ತಾನೆ ಪ್ರಸಾದವಾದ,
ತಾನೆ ಮಂತ್ರವಾದ ತಾನೆ ತಂತ್ರವಾದ ತಾನೆ ಯಂತ್ರವಾದ
ತಾನೆ ಸಕಲ ವಿದ್ಯಾಸ್ವರೂಪವಾದ
ಇಂತಿವೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದ ಬಳಿಕ
ಇನ್ನು ನಿರ್ವಿಕಾರ ಕಾಣಾ, ಗುಹೇಶ್ವರಾ ॥ ೨೩ ॥

॥ ೨ ॥

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳಂ ಕಳೆದುಳಿದು ನಿರ್ಮಲವಾದ ಶಿಷ್ಯನು
ಕಾಯಜೀವದ ಭ್ರಾಂತಿಸೂತಕವ ವಿವರಿಸಿ ಕಳೆದು ನಿಶ್ಶಂಕನಾದ ಗುರುವು
ಉಭಯ ಭಾವದೊಳಗೆ ಆವುದು ಮುಂದು ಆವುದು ಹಿಂದೆಂದರಿಯಲಹುದೇ?
ಕರಸ್ಥಲಕೆ ಕಾರುಣ್ಯವ ಮಾಡಿದರೆ ಮನಸ್ಥಲಕೆ ಹಂಗಿಲ್ಲ;
ಮನಸ್ಥಲದಲ್ಲಿ ಸೆರೆಗೊಡ್ಡಿ ಬೇಡಿದರೆ ಕರಸ್ಥಲದ ಲಿಂಗ ಕೈಸಾರಿತ್ತು,
ಗುರುಸ್ಥಲದ ನೀವು ಪರಸ್ಥಲದಲಡಗಿದರೆ ಭಾವ ಬೆರಗಾಯಿತ್ತು
ಗುಹೇಶ್ವರಾ ॥ ೨೪ ॥

## ೧೨. ಮುಕ್ತಾಯಿಯಕ್ಕನ ಗತಿ

**ವಚನ** ॥ ೧ ॥

ಮುಕ್ತಿಗೆ ಮುಖವಾಗಿ ಯುಕ್ತಿಗೆ ಹೊರಗಾಗಿ
ಅರಿವಿಂಗೆ ಅರಿವಾಗಿಪ್ಪ ಭೇದವು ಎನಗೆ ಕಾಣಬಂದಿತ್ತು ನೋಡಾ.

ನಿನ್ನೊಳಗಾನೊರೆದು ನೋಡಿದಡೆ ಒರೆಯಿಲ್ಲದ ಚಿನ್ನದ ಪರಿಮಳ
ಎನ್ನ ಮನವನಾವರಿಸಿ ಪರಮಸುಖದ ಪರಿಣಾಮವನೊಳಕೊಂಡಿತ್ತು ನೋಡಾ;
ಈ ಕುರುಹಿನ ಮೊಳೆಯ ಬರಿಯ ಬಯಲಲಿ ನಿಲಿಸಿ ನಿಲವ ನೋಡಿ ಕೂಡಾ;
ನಮ್ಮ ಗುಹೇಶ್ವರನ ಶರಣ ಅಜಗಣ್ಣನೊಳಗೆ ನೀನು ನಿರಾಳಸಂಗಿಯಾಗಿ ||೨೫||

|| ೨ ||

ದೇವ ದೇವ, ಶರಣಾರ್ಥಿ; ಎನ್ನ ಬಿನ್ನಪವ ಅವಧರಿಸಯ್ಯಾ
ಕೇಳಿದ ಸುಖ ಕಿವಿಗೆ ಬೇಟವಾಯಿತ್ತು,
ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಗೊಂಡಿತ್ತು,
ಕಂಗಳ ಮುಂದೆ ಕಂಡ ಸುಖ ಮನಕ್ಕೆ ವೇದ್ಯವಾಯಿತ್ತು,
ಘನಮಹಿಮರ ದರುಶನದ ಸುಖವ ನೆನೆದು,
ಮದವಳಿದು (ಮರಣವ ಗೆಲಿದು) ಮಹನನೊಡಗೂಡಿದ
ಎನ್ನ ಅಜಗಣ್ಣನ ಅಗಲದ ದುಃಖ ನಿಮ್ಮ ಸಂಗದಲ್ಲಿ ಸ್ವಯವಾಯಿತ್ತು
ಕಾಣಾ ಪ್ರಭುವೇ || ೨೬ ||

## ೧೩. ಸಿದ್ಧರಾಮನ ಗತಿ

**ವಚನ** || ೧ ||

ಕಳ್ಳಗಂಜಿ ಕಾಡಹೊಕ್ಕರೆ ಹುಲಿ ತಿನ್ನದೆ ಮಾಬ್ಬುದೆ ?
ಹುಲಿಗಂಜಿ ಹುತ್ತಹೊಕ್ಕರೆ ಸರ್ಪ ಕಚ್ಚದೆ ಮಾಬ್ಬುದೆ ?
ಕಾಲಗಂಜಿ ಭಕ್ತನಾದಡೆ ಕರ್ಮತಿನ್ನದೆ ಮಾಬ್ಬುದೆ ? ಅಯ್ಯಾ
ಇಂತೀ ಮೃತ್ಯುವಿನ ಬಾಯ ತುತ್ತಾದ
ವೇಷ ಡಂಬಕರನಾನೇಂಬೆನಯ್ಯಾ! ಗುಹೇಶ್ವರಾ || ೨೭ ||

|| ೨ ||

ಅಯ್ಯಾ, ನಿಮ್ಮ ಸರ ಉಂಡ ಸಬುದವೆನ್ನ ಮನಕ್ಕೆ ವೇದ್ಯವಾಯಿತ್ತು
ಅಯ್ಯಾ, ನಿಮ್ಮ ನಿಜ ಉಂಡ ನಿಲವು ಎನ್ನ ಮತಿಗೆ ವೇದ್ಯವಾಯಿತ್ತು
ಅಯ್ಯಾ, ನಿಮ್ಮ ಕರುಣ ಪ್ರಸಾದವೆನ್ನ ಸರ್ವಾಂಗಕ್ಕೆ ವೇದ್ಯವಾಯಿತ್ತು

ಅಂತು ನಿಮ್ಮ ಕಾಯವಿಡಿದಿಪ್ಪ ಕರಸ್ಥಲವೆಂತು ಪೇಳಾ
ಕಪಿಲಸಿದ್ಧ ಮಲ್ಲಿನಾಥಾ ॥ ೨೮ ॥

॥ ೩ ॥

ದೇಹಭಾವವಳಿದಲ್ಲದೆ ಜೀವಭಾವವಳಿಯದು
ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು
ಭಕ್ತಿಭಾವವಳವಟ್ಟಲ್ಲದೆ ಅರಿವು ತಲೆಸೋರದು
ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು
ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು
ಅದು ಕಾರಣ ಕಾಯ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲರೆ
ನಮ್ಮಗುಹೇಶ್ವರಲಿಂಗದ ಅರಿವು ಸಾಧ್ಯವಪ್ಪದು ಕಾಣಾ ಸಿದ್ಧರಾಮಯ್ಯಾ॥೨೯॥

॥ ೪ ॥

ನೀರಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲುದು ನೋಡಯ್ಯಾ
ದೇಹದ ಜೀವದ ಸಂದುಗಳ ನೀವು ಬಿಚ್ಚಬಲ್ಲಿರಲ್ಲದೆ ನಾನೆತ್ತಬಲ್ಲೆನಯ್ಯಾ?
ನೀವಿಕ್ಕಿದ ತೊಡಕ ಬಿಡಿಸಬಾರದು,
ನೀವು ಬಿಡಿಸಿದ ತೊಡಕನಿಕ್ಕಬಾರದು; ಕಪಿಲಸಿದ್ಧ ಮಲ್ಲಿನಾಥಯ್ಯಾ
ನೀವೆನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ ॥ ೩೦ ॥

॥ ೫ ॥

ಎಲೆ ಅಯ್ಯ, ಎನ್ನ ಹೊತ್ತಿಪ್ಪವಳ ನೆತ್ತಿಗಣ್ಣಿನಲಿಪ್ಪ ಲಿಂಗವ
ನಾನೆಚ್ಚತ್ತು ನೋಡುವೆನೆಂತಯ್ಯಾ?
ನೋಡಹೋದರೆ ನೆತ್ತಿ ಬಿರಿದು ಕಣ್ಣಾಯಿತ್ತು ನೋಡಾ;
ನೋಡದಿದ್ದರೆ ಎನಗೆ ಅವಳು ತೋರಳು;
ನಾ ಕಾಂಬ ತೆರನ ತೋರಾ ಕಪಿಲಸಿದ್ಧ ಮಲ್ಲಿನಾಥಾ ॥ ೩೧ ॥

## ೧೪. ಪ್ರಭುದೇವರು ಕಲ್ಯಾಣಕ್ಕೆ ಬಂದ ಗತಿ

**ವಚನ** ॥ ೧ ॥

ಕಲ್ಯಾಣವೆಂಬ ಪ್ರಣತೆಯಲ್ಲಿ, ಭಕ್ತಿರಸವೆಂಬ ತೈಲವನೆರೆದು,
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು

ತೊಳಗಿ ಬೆಳಗುತಿರ್ದುದಯ್ಯಾ ಶಿವನ ಪ್ರಕಾಶ;
ಆ ಬೆಳಗಿನೊಳಗೊಪ್ಪುತಿರ್ದರಯ್ಯ ಅಸಂಖ್ಯಾತ ಭಕ್ತ ಮಹಾಗಣಂಗಳು |
ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ ?
ಶಿವಭಕ್ತರಿರ್ದ ದೇಶವು ಪಾವನವೆಂಬುದು ಹುಸಿಯೆ ?
ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು
ಬದುಕಿದೆ ಕಾಣಾ ಸಿದ್ಧರಾಮಯ್ಯಾ || ೩೨ ||

|| ೨ ||

ಆದಿಯಾಧಾರವಿಲ್ಲದ ಆಗಮನಾಸ್ತಿಯಾಗಿಪ್ಪ
ಸಂಸಾರವಿರಹಿತನನಾರು ಅರಿಯರಲ್ಲ
ದಶಮುಖ ಮಾಣಿಕದ ಎಸಳುಗಂಗಳು ಪರ್ಬಿ ಪಸರಿಸಿದುದನಾರು ಅರಿಯರಲ್ಲ;
ಹಿರಿದೊಂದು ವೃಕ್ಷವು ಅತಿಶಯದ ರೂಪಾಗಿ
ಪೃಥ್ವಿಗಿಂಬಾಗಿರ್ದುದನಾರು ಅರಿಯರಲ್ಲ;
ಅಂತರಂಗದ ಭುವನವನು ಮೆಟ್ಟಿ ನೋಡುತ್ತ
ಬೆಡಗಿನ ತಾವರೆಯ ಮಧ್ಯದ ತಾರಕಿಯನಾರು ಅರಿಯರಲ್ಲ;
ಇನಶಶಿಗಳಿಬ್ಬರು ನಯನೋಟದ ಪುಷ್ಪಪರಿಮಳವಾಗಿರ್ದುದನಾರು
ಅರಿಯರಲ್ಲ;
ಇಂಬುನಯನದಲ್ಲಿ ಸಂಭ್ರಮವಿಲ್ಲದ ರೂಪು ಮಹತ್ತಾಗಿರ್ದುದನಾರು
ಅರಿಯರಲ್ಲ;
ಸಾಗರದೊಳಗಣ ಜ್ಯೋತಿಯಂತೆ ಗುಹೇಶ್ವರಲಿಂಗದೊಳಗೆ
ಎನ್ನ ಪರಮಾರಾಧ್ಯ ಸಂಗನಬಸವಣ್ಣ ನಿಂದ ನಿಲವ ಉಪಮಿಸಬಾರದು
ಕಾಣಾ ಸಿದ್ಧರಾಮಯ್ಯಾ || ೩೩ ||

|| ೩ ||

ಯತ್ರ ಯತ್ರ ಮಹೇಶ್ವರರಿರ್ದ ಗ್ರಾಮ ತತ್ರ ತತ್ರ ಶಿವಲೋಕ ನೋಡಾ,
ಸತ್ಯರ ವಚನ ತಪ್ಪುವಡೇನಯ್ಯಾ ಕಪಿಲಸಿದ್ಧ ಮಲ್ಲಿನಾಥಾ,
ನಿಮ್ಮ ಶರಣಬಸವಣ್ಣ ಮೆಟ್ಟಿದ ಧರೆ ಪಾವನವೆಂಬುದು
ಇಂದು ಕಾಣಬಂದಿತಯ್ಯಾ ಪ್ರಭುವೇ || ೩೪ ||

|| ೪ ||

ಜಲದಲುದ್ಭವಿಸಿದ ಮುತ್ತು ಜಲವು ತಾನಲ್ಲ ಜಲವೆಂದಿಪ್ಪರು ಲೋಕದವರು
ಪರಮಗುರು ಬಸವಣ್ಣ ಜಗವ ಪಾಲಿಸಬರಲು
ಎನ್ನ ಪರಿಭವದ ದಂದುಗ ಹರಿಯಿತಯ್ಯಾ
ಆ ಸುದ್ದಿಯನರಿಯಲರಿಯದೆ ಬೇಕಾದ ಪರಿಯಲ್ಲಿ
ಅನೇಕ ಜಡರೆಲ್ಲ ನುಡಿವುತ್ತಿಹರು
ಸತ್ತವರ ಪ್ರಾಣವನೆತ್ತಿ ಒಪ್ಪಿರ್ಪ ನಿರ್ಣಯ ಮರ್ತ್ಯದವರಿಗುಂಟೇ?
ಶಿವಂಗಲ್ಲದೆ
ಶಿವಗುರು ಬಸವಣ್ಣ ಬಸವಗುರು ಶಿವನಾಗಿ ದೆಸೆಗೆಟ್ಟ ದೇವತಾಪಶುಗಳಿಗೆ
ಪತಿಯಾದನು; ಬಸವಣ್ಣನ ನೆನಹು ಸುಖಸಮುದ್ರವಯ್ಯಾ,
ಕಪಿಲಸಿದ್ಧಮಲ್ಲಿನಾಥಾ ಬಸವಣ್ಣನ ತೋರಿದಿರಾಗಿ ನಾನು ಬದುಕಿದೆನು ||೩೫||

|| ೫ ||

ಕರ್ಮವಿಲ್ಲದ ಕಾಯ ಕರಣವಿಲ್ಲದ ಪ್ರಾಣ ಮಥನವಿಲ್ಲದ ಶಬ್ದ ಗಮನವಿಲ್ಲದ
ಮನ, ಗುಹೇಶ್ವರ ನಿಮ್ಮ ಬರವು ಸಂಗನಬಸವಣ್ಣನ ಮೆಚ್ಚು ನೋಡಾ|| ೩೬ ||

|| ೬ ||

ಉಪಪಾತಕಮಹಾಪಾತಕವ ಮಾಡಿದ ಕರ್ಮಂಗಳು ಕೋಟಾನುಕೋಟಿ
ಒಬ್ಬ ಶಿವಶರಣನ ಅಂಗಳವ ಕಂಡಲ್ಲಿ ಹರಿದು ಹೋಹವು ನೋಡಾ,
ಅದೇನು ಕಾರಣವೆಂದರೆ ಶಿವಶರಣನಂತರಂಗದಲ್ಲಿ ಶಿವನಿಪ್ಪನಯ್ಯಾ,
ಶಿವನಿದ್ದಲ್ಲಿ ಕೈಲಾಸವಿಪ್ಪುದು;
ಕೈಲಾಸವಿದ್ದಲ್ಲಿ ಸರ್ವ ರುದ್ರಂಗಳಿರ್ಪರು, ಅಷ್ಟಾಷಷ್ಟಿ ತೀರ್ಥಂಗಳಿಪ್ಪುವು
ಶಿವನು ಒಲಿದಲ್ಲಿ ಇನಿತು ನೆಲಸಿಪ್ಪುವಯ್ಯಾ;
ಇಂತಪ್ಪ ಶರಣ ಬಸವಣ್ಣನಂಗಳವ ಕಂಡನಾಗಿ ಗುಹೇಶ್ವರಲಿಂಗನ
ಕಂಗಳಿಗೆ ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯಾ || ೩೭ ||

|| ೭ ||

ಜಂಗಮದಿಂಗಿತಾಕಾರವ ನೋಡಿ ಲಿಂಗವೆಂದರಿದ ಸದ್ಭಕ್ತರು
ಮನ ಮನ ಬೆರಸಿದ ಕೂರ್ಮನ ಶಿಸುವಿನ ಸ್ನೇಹದಂತೆ;

ಕಾಣದ ಮುನ್ನವೆ ತೆರಹಿಲ್ಲದಿರ ಬೇಕು ನೋಡಾ
ಬಂದ ಭರವನರಿಯದೆ ನಿಂದ ನಿಲವ ನೋಡದೆ ಕೆಮ್ಮನೆ ಅಹಂಕಾರವ
ಹೊತ್ತಿಪ್ಪವರ ನಮ್ಮ ಗುಹೇಶ್ವರಲಿಂಗನೊಲ್ಲ ಕಾಣಾ || ೩೮ ||

|| ೮ ||

ಎನ್ನ ಗುಣಾವಗುಣವ ಸಂಪಾದಿಸದಿರಯ್ಯಾ
ಪ್ರತಿಯಿಲ್ಲದಪ್ರತಿಮ ನೀನು, ನಿನಗಾನು ಸರಿಯೆ ?
ಅನುಪಮುಮಹಿಮ ಕೂಡಲಸಂಗಮದೇವ ನೀ ಮಾಡಲಾನಾದೆನಯ್ಯಾ ||೩೯||

|| ೯ ||

ಕೈಯಲ್ಲಿ ಡೊಣ್ಣೆ ಮನದಲ್ಲಿ ಕ್ರೋಧ ವಚನದಲ್ಲಿ ಕಿಂಕಿಲ
ಲಿಂಗದ ವಾರ್ತೆ ನೀನಗೇಕೆ ಹೇಳಾ ಬಸವಾ
ಜಂಗಮವೆ ಲಿಂಗವೆಂಬ ಶಬ್ದಸಂದೇಹಸೂತಕಿ ನೀನು,
ಸಜ್ಜನಸದ್ಭಕ್ತಿಯ ಮಾತು ನಿನಗೇಕೆ ಹೇಳಾ ಬಸವಾ;
ಕಬ್ಬುನದರೂಪು ಪರುಷವ ಮುಟ್ಟೆ ಹೊನ್ನಾಯಿತಲ್ಲದೆ
ಪುರುಷವಪ್ಪುದೆ ಹೇಳಾ ಬಸವಾ
ಗುಹೇಶ್ವರನೆಂಬ ಪರುಷದ ಪುತ್ಥಳಿಯನರಿಯಬಲ್ಲರೆ
ತಿಳಿದುನೋಡಾ ಸಂಗನಬಸವಣ್ಣಾ || ೪೦ ||

|| ೧೦ ||

ಧ್ಯಾನ ಮೌನವೆಂಬ ಶಬ್ದವ ಹಿಡಿದು ನಮ್ಮ ಗೆಲಲರಿಯದೆ
ಅಹಂಕಾರದ ಧಾರೆಯೆಂಬ ಮೊನೆಯ ಶಸ್ತ್ರವ ಹಿಡಿದು ಕೆಟ್ಟೆನಯ್ಯಾ;
ಅಂಜುವೆನಂಜುವೆನಯ್ಯಾ;
ಜಂಗಮಲಿಂಗವೆಂಬ ಭಾಷೆ ಪಲ್ಲಟವಾಯಿತ್ತು;
ಜಂಗಮಲಿಂಗವೆಂಬ ದೀಕ್ಷಾ ಶಸ್ತ್ರದಲ್ಲಿ ಎನ್ನ ಹೊಯ್ದು ಬೈದು
ರಕ್ಷಿಸು ಕೂಡಲಸಂಗಮದೇವಾ || ೪೧ ||

# ೧೫. ಮರುಳುಶಂಕರದೇವರ ಗತಿ

**ವಚನ** ॥ ೧ ॥

ಬೀದಿಯಲ್ಲಿ ಬಿದ್ದ ಮಾಣಿಕ್ಯವು ಹೂಳಿದ್ದ ನಿಧಾನವು
ಆರಿಗೂ ಕಾಣಬಾರದು ನೋಡಾ
ಮರಣವುಳ್ಳವರಿಗೆ ಮರುಜೀವಣಿ ಸಿಕ್ಕುವದೆ ?
ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿಯಿಪ್ಪಂತೆ ಅಡಗಿಪ್ಪರಯ್ಯಾ ಶಿವಶರಣರು
ನಮ್ಮ ಗುಹೇಶ್ವರನ ಶರಣ ಮರುಳುಶಂಕರದೇವರ ನಿಲವ ನೋಡಾ
ಸಂಗನಬಸವಣ್ಣಾ ॥ ೪೨ ॥

॥ ೨ ॥

ಕಾಮನ ಕಣ್ಣ ಮುಳ್ಳ ಕಳದ ಭೂಮಿಯ ತೈಲದ ಸೀಮೆಯ ಕೆಡಿಸಿ
ಹೋಮವನುರುಹಿ ದಕ್ಷನ ತಲೆಯನರಿದ ನಿಸ್ಸೀಮನಾದ ಮಹಿಮನ
ನಿಲವನರಿಯಬಹುದೆ ?
ಅರಿವಿಂಗಸಾಧ್ಯ ಉಪಮೆಗೆ ಕಡೆಮುಟ್ಟದು.
ಗುಹೇಶ್ವರನ ಕರುಣಪ್ರಸಾದಿ ಮರುಳುಶಂಕರದೇವನೆಂತಪ್ಪನೆಂಬುದ
ತಿಳಿದು ನೋಡಾ ಸಂಗನಬಸವಣ್ಣಾ ॥ ೪೩

॥ ೩ ॥

ಆದಿಯಲ್ಲಿ ಹುಟ್ಟಿತ್ತಲ್ಲ, ಅನಾದಿಯಲ್ಲಿ ಬೆಳೆಯಿತ್ತಲ್ಲ
ಮೂರ್ತಿಯಲ್ಲಿ ನಿಂದುದಲ್ಲ, ಆ ಮೂರ್ತಿಯಲ್ಲಿ ಭಾವಿಯಲ್ಲ
ಅರವಿನೊಳಗೆ ಅರಿದುದಲ್ಲ ಮರಹಿನೊಳಗೆ ಮರೆದುದಲ್ಲ
ಎಂತಿರ್ದಡಂತೆ ಬ್ರಹ್ಮ ನೋಡಾ
ತನುಮನಲೀಯವಾಗಿ ಘನಕ್ಕೆ ಘನ ಒಂದಾದರೆ
ಮುಕ್ತಿ ಮನಕ್ಕೆ ವಿಸ್ಮಯವ ಮಾಡಲುಂಟೆ
ಕೂಡಲಸಂಗನ ಶರಣ ಮರುಳುಶಂಕರದೇವರು ಪ್ರಭುದೇವರ ಪ್ರಭೆಯಲ್ಲಿ
ಕಾಯವೆಂಬ ಕಂತೆಯ ಕಳೆಯದೆ ಬಯಲಾದರೆ ನಿಜವೆಂದು
ಪರಿಣಮಿಸಬೇಕಲ್ಲದೆ ಅಂತಿಂತೆನಲುಂಟೆ? ಸಂಗನಬಸವಣ್ಣಾ ॥ ೪೪ ॥

## ೧೬. ಇಷ್ಟಲಿಂಗದ ಗತಿ

**ವಚನ**

॥ ೧ ॥

ಮೂಗ ಕಂಡ ಕನಸಿನಂತಾಯಿತೆನ್ನ ಶಿವಾಚಾರ,
ಹೇಳಬಾರದು ಕೇಳಬಾರದಾರಿಗೆಯು;
ಎನ್ನ ಹೆಗ್ಗತನವ ಮಾಣಿಸಯ್ಯಾ ಕೂಡಲಸಂಗಮದೇವಪ್ರಭುವೇ ॥ ೪೫ ॥

॥ ೨ ॥

ಎಲ್ಲ ಎಲ್ಲವನರಿಯಬಹುದು, ಸಾವನರಿಯಬಾರದು
ಶಿವಶಿವ, ಮಹಾಪುರುಷರಿಗೆಯು ಸಾವು,
ದೇವ ದಾನವ ಮಾನವ ಕಾಮ ಕಾಲ ದಕ್ಷಾದಿಗಳಿಗೆಯೂ ಸಾವು
ಈ ಸಾವನರಿದು ಲೋಕಪ್ರಪಂಚವ ಮರೆದು
ಲಿಂಗದಲ್ಲಿಯೇ ನೆನಹು ನೆಲೆಗೊಂಡ ಮಹಾನುಭಾವಂಗೆ ಮರಣವಿಲ್ಲ;
ಸಾವನರಿಯದೆ ಲೋಕಪ್ರಪಂಚವ ಮರೆಯದೆ ಅರಿವ ಮರುಳುಗಳು
ಅರಿತಿಹೆವೆಂಬುದು ಮಹಾ ಹಾನಿ ಕಾಣಾ, ಗುಹೇಶ್ವರಾ! ॥ ೪೬ ॥

॥ ೩ ॥

ನಾನು ಭಕ್ತನಲ್ಲವಯ್ಯಾ, ನಾನು ಯುಕ್ತನಲ್ಲವಯ್ಯಾ,
ನಾನು ಮುಕ್ತನಲ್ಲವಯ್ಯಾ, ನಾನು ಕಪಟವೇಷಡಂಬಕನಯ್ಯಾ,
ಕೂಡಲಸಂಗಮದೇವಾ ಎನ್ನ ಭಕ್ತಿ ಮಳಲೊಟ್ಟಿಲು ಎಂಬುದ ನೀವು
ತೋರಿದಿರಾಗಿ ಎನಗೆ ಅರಿಯ ಬಂದಿತಯ್ಯಾ ಪ್ರಭುವೇ ॥ ೪೭ ॥

॥ ೪ ॥

ಸಜ್ಜನಸನ್ನಿಹಿತವಾದ ಭಕ್ತಿ ಹೊತ್ತಿಗೊಂದು ಪರಿಯುಂಟೆ ಅಯ್ಯಾ
ಒಮ್ಮೆ ಅಹಂಕಾರ ಒಮ್ಮೆ ಕಿಂಕರವೆ
ಮನಕ್ಕೆ ಮನ ಸಾಕ್ಷಿಯಾಗಿ ಮಾಡುವ ಭಕ್ತರಲ್ಲಿ ಗುಹೇಶ್ವರನಿಪ್ಪನಲ್ಲದೆ
ಪ್ರಪಂಚಿನೊಳಗಿಲ್ಲ ಕಾಣಾ ಸಂಗನಬಸವಣ್ಣಾ ॥ ೪೮ ॥

# ೧೭. ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನವಾದ ಗತಿ

**ವಚನ** ॥ ೧ ॥

ಅಂಗವಿಕಾರಸಂಗವ ಮರೆದು ಲಿಂಗವನೊಡಗೂಡುತಿಪ್ಪವರ ತೋರಾ ಎನಗೆ
ಕಾಮವಿಕಾರಕತ್ತಲೆಯಳಿದು ಭಕ್ತಿಯೇ ಪ್ರಾಣವಾಗಿಪ್ಪವರ ತೋರಾ ಎನಗೆ
ತ್ರಿಕರಣಶುದ್ಧವಾಗಿ ನಿಮ್ಮ ನೆರೆ ನಂಬಿದ ಸದ್ಭಕ್ತರ ತೋರಾ ಎನಗೆ
ಚೆನ್ನಮಲ್ಲಿಕಾರ್ಜುನಾ ॥ ೪೯ ॥

॥ ೨ ॥

ಕಲ್ಯಾಣವೆಂಬುದಿನ್ನಾರಿಗು ಹೊಗಬಾರದು; ಅಸಾಧ್ಯವಯ್ಯಾ
ಆಸೆ ಆಮಿಷವನಳಿದಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು;
ಒಳಗು ಹೊರಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೊಗಬಾರದು;
ನೀನೆಂಬುದನರಿದು ನಾನೆಂಬುದ ಮರೆದು ತಾನು ತಾನಾದಂಗಲ್ಲದೆ
ಕಲ್ಯಾಣವ ಹೊಕ್ಕು ಬೆರಸಬಾರದು ಲಜ್ಜೆಗೆಟ್ಟಿನಲಾ
ಸತಿಬೇಟಕ್ಕೋಲಿದು ನಾನಾವುದನು ಅರಿಯೆನಾಗಿ
ಚೆನ್ನಮಲ್ಲಿಕಾರ್ಜುನನ ಧರ್ಮದಿಂದ ನಾನು ಕಲ್ಯಾಣವ ಕಂಡೆನು ॥ ೫೦ ॥

॥ ೩ ॥

ಗಿರಿಯೊಳು ವನದೊಳು ಗಿಡಗಿಡದತ್ತ ದೇವ ಬಾರಯ್ಯಾ ತೋರಯ್ಯಾ
ನಿಮ್ಮ ಕರುಣವನೆಂದು ನಾನು ಅರಸುತ್ತ ಅಳಲುತ್ತ ಕಾಣದೆ
ಸುಯಿದು ಬಂದು ಕಂಡೆ ಶರಣರ ಸಂಗದಿಂದ;
ಅರಸಿ ಹಿಡಿದೇನೆಂದು ನೀನಡಗುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನಾ ॥ ೫೧ ॥

॥ ೪ ॥

ಅರಸಿ ತೊಳಲಿದರಿಲ್ಲ, ಹರಸಿ ಬಳಲಿದರಿಲ್ಲ,
ಬಯಸಿ ಹೊಕ್ಕರಿಲ್ಲ, ತಪಸ್ಸು ಮಾಡಿದರಿಲ್ಲ,
ಅದು ತನ್ನ ತಾನಹ ಕಾಲಕಲ್ಲದೆ ಸಾಧ್ಯವಾಗದು
ಶಿವನೊಲಿದಲ್ಲದೆ ಆಗದು
ಚೆನ್ನಮಲ್ಲಿಕಾರ್ಜುನನೆನಗೊಲಿದನಾಗಿ
ನಾನು ಸಂಗನಬಸವಣ್ಣನ ಶ್ರೀಪಾದವ ಕಂಡು ಬದುಕಿದೆನಯ್ಯಾ ॥ ೫೨ ॥

|| ೫ ||

ಅಯ್ಯಾ ನಿಮ್ಮ ಸದ್ಭಕ್ತರ ಕಂಡೆನಾಗಿ ಎನ್ನ ಕಂಗಳ ಪಟಲ ಹರಿಯಿತ್ತು,
ಅಯ್ಯಾ ನಿಮ್ಮ ಸಜ್ಜನ ಸದಕ್ತರ ಶ್ರೀಚರಣಕ್ಕೆರಗಿದೆನಾಗಿ
ಎನ್ನ ಹಣೆಯ ಲಿಖಿತ ತೊಡೆಯಿತ್ತು,
ಚೆನ್ನಮಲ್ಲಿಕಾರ್ಜುನದೇವಾ ನಿಮ್ಮ ಶರಣ ಸಂಗನಬಸವಣ್ಣನ ಕಂಡು
ಮಿಗೆ ಮಿಗೆ ನಮೋ ನಮಃ ಎನುತಿರ್ದೆನಯ್ಯಾ || ೫೩ ||

|| ೬ ||

ಕಾಯದ ಲಜ್ಜೆಯ ಕಲ್ಪಿತವಳಿದು ಜೀವದ ಲಜ್ಜೆಯ ಮೋಹವನಳಿದು
ಮನದ ಲಜ್ಜೆಯ ನೆನಹು ಸುಟ್ಟು ಭಾವದ ಕೂಟ ಬತ್ತಲೆ ಎಂದರಿದು
ತವಕದ ಸ್ನೇಹ ವ್ಯವಹಾರಕ್ಕೆ ಹೋಗದ ಕೂಡಲಸಂಗಮದೇವರಲ್ಲಿ
ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲುವು ನೋಡಾ ಪ್ರಭುವೇ || ೫೪ ||

|| ೭ ||

ರೂಪಿಲ್ಲದವಂಗೆ ಒಲಿದವರಿಗೆ ತನುವಿನ ಹಂಗುಂಟೇ?
ಮನವಿಲ್ಲದವಂಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೇ?
ದಿಗಂಬರಗೊಲಿದವರಿಗೆ ಕೌಪೀನದ ಹಂಗುಂಟೇ?
ಕೂಡಲಸಂಗಮದೇವಯ್ಯಾ ಮಹಾದೇವಿಯಕ್ಕನೆಂಬ ಭಕ್ತೆಯ ರೂಪಿಂಗೆ
ಆವ ಹೋಲ್ಕೆಯುವಿಲ್ಲಾ ಪ್ರಭುವೇ || ೫೫ ||

|| ೮ ||

ಉನ್ಮದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆ ಹೇಳವ್ವಾ
ಸತಿ ಎಂದರೆ ಮುನಿಯುವರೆಮ್ಮ ಶರಣರು
ಗುಹೇಶ್ವರಲಿಂಗದಲ್ಲಿ ನಿನ್ನ ಪತಿಯ ಕುರುಹು ಹೇಳಾ
ಎಲೆ ಅವ್ವಾ; ಇಲ್ಲದಿರ್ದೊಡೆ ತೊಲಗು ತಾಯೆ.

## ೧೮. ಸಾಧಕಾಂಗದ ಗತಿ

**ವಚನ** || ೧ ||

ಸಂಬಂಧ ಸಂಬಂಧವೆಂದು ಹೆಸರಿಟ್ಟುಕೊಂಡು ನುಡಿವಿರಿ
ಸಂಬಂಧವಾವುದು ಬಲ್ಲರೆ ಹೇಳಿರೇ

ಕಾಯ ಜೀವ ಪ್ರಾಣ ಈ ತ್ರಿವಿಧಸಂಬಂಧವನರಿದಡೆ
ಗುಹೇಶ್ವರಲಿಂಗದಲ್ಲಿ ಆತನೇ ಸಂಬಂಧಿ || ೫೬ ||

|| ೨ ||

ಒಳಗೆ ತೊಳೆಯಲರಿಯದೆ ಹೊರಗನೆ ತೊಳೆದು ಕುಡಿವುತಿರ್ದರಲ್ಲಾ
ಪಾದೋದಕ ಪ್ರಸಾದವನರಿಯದೆ ಭವಬಂಧನದಲ್ಲಿ
ಮುಳುಗುತ್ತಿಹರು ಗುಹೇಶ್ವರಾ || ೫೭ ||

|| ೩ ||

ಆಧಾರದಲ್ಲಿ ಅಜನೆಂಬ ಸ್ವಾಯತ ಸ್ವಾಧಿಷ್ಠಾನದಲ್ಲಿ ವಿಷ್ಣುವೆಂಬ ಸ್ವಾಯತ
ಮಣಿಪೂರಕದಲ್ಲಿ ರುದ್ರನೆಂಬ ಸ್ವಾಯತ ಅನಾಹತದಲ್ಲಿ ಈಶ್ವರನೆಂಬ ಸ್ವಾಯತ
ವಿಶುದ್ಧಿಯಲ್ಲಿ ಸದಾಶಿವನೆಂಬ ಸ್ವಾಯತ ಆಜ್ಞಾಚಕ್ರದಲ್ಲಿ ಶಾಂತ್ಯತೀತ
ಗುಹೇಶ್ವರಲಿಂಗದಲ್ಲಿ ವ್ಯೋಮ ವ್ಯೋಮವ ಕೂಡಿದಂತೆ || ೫೮ ||

|| ೪ ||

ಊರಕ್ಕಿ ಊರೆಣ್ಣೆ ಉಣ್ಣ ಮಾರಿಕವ್ವ ತಾಯೆ ಬಾರೇ ಕುಮಾರನ
ತಲೆಗಾಯಿ ಎಂಬಂತೆ ಕಾಡ ಹೂವಿನಲಿ ಕಲ್ಲಲಿಂಗಪೂಜೆಯ ಮಾಡುವ
ಭವಿಯು ಭಕ್ತನೆಂಬರು ನೋಡಾ; ಹಾಗಲ್ಲ
ತನ್ನ ತನುವೇ ಲಿಂಗ ಮನವೇ ಪುಷ್ಪವಾಗಿ ಪೂಜೆಯ
ಮಾಡುವಾತನೇ ಸದ್ಭಕ್ತ ಕಾಣಾ ಗುಹೇಶ್ವರಾ || ೫೯ ||

|| ೫ ||

ಇಷ್ಟಲಿಂಗವೇ ಪ್ರಾಣಲಿಂಗವೆಂದು ನುಡಿವ ಮಿಟ್ಟೆಯ ಭಂಡರು
ನೀವು ಕೇಳಿರಯ್ಯಾ
ಇಷ್ಟಲಿಂಗವನು ಕಾಯವನು ಮೆಟ್ಟಿ ಹೂಳುವಲ್ಲಿ ಬಿಟ್ಟು ಹೋದ
ಪ್ರಾಣಕಿನ್ನಾವುದು ಲಿಂಗ ಹೇಳಾ ಗುಹೇಶ್ವರಾ || ೬೦ ||

|| ೬ ||

ಅಸ್ಥಿಗೆ ಚರ್ಮವಾಧಾರವಾಗೆ ಪ್ರಾಣಕ್ಕೆ ಪ್ರಸಾದವೇ ವೃತ್ತಿಕೆಯಾಗೆ
ಇದು ಪ್ರಾಣಲಿಂಗಸಂಬಂಧವಲ್ಲ ನಿಲ್ಲಿ ಛೋ

ಪ್ರಾಣಲಿಂಗಸಂಬಂಧವೆಂಬುದು ಕರ ಕಷ್ಟ ನೋಡಾ
ಒಡೆದ ಮಡಿಕೆಗೆ ಒತ್ತಿ ಮಣ್ಣು ಮೆತ್ತಿದರೆ ಅದು
ತರಹರವಾಗಬಲ್ಲುದೇ ಗುಹೇಶ್ವರಾ || ೬೧ ||

|| ೭ ||

ಪ್ರಾಣಲಿಂಗವೆಂಬ ಶಬುದಕ್ಕೆ ನಾಚಿತ್ತು ನಾಚಿತ್ತು ಎನ್ನ ಮನ
ಪ್ರಾಣ ಹೋದರೆ ಕಾಯ ಬಿದ್ದರೆ ಲಿಂಗ ಒಂದೆಸೆಯಾವರೆ
ನಾಚಿತ್ತು ನಾಚಿತ್ತು ಎನ್ನ ಮನ
ಪ್ರಾಣಲಿಂಗಸಂಬಂಧಿ ಗುಹೇಶ್ವರಾ ನಿಮ್ಮ ಶರಣನು || ೬೨ ||

|| ೮ ||

ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷ ಗಂಗೆಯ ಮಿಂದಡಿಲ್ಲ
ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ
ಸುತ್ತಿ ಸುಳಿಯ ಮನವ ಚಿತ್ತದಲಿ ಸಂತೈಸಬಲ್ಲಡೆ
ಬಟ್ಟಬಯಲು ಕಾಣಾ ಗುಹೇಶ್ವರಾ || ೬೩ ||

|| ೯ ||

ಒಕ್ಕುದ ಮಿಕ್ಕುದನುಂಬ ನಿಚ್ಚ ಪ್ರಸಾದಿಗಳು ನೀವು ಕೇಳಿರೋ
ಒಕ್ಕು ಹೋಹುದಾವುದು ಬಲ್ಲರೆ ನೀವು ಹೇಳಿರೋ
ಒಕ್ಕು ಹೋಹುದೇ ಕಾಯ,ಮಿಕ್ಕು ಹೋಹುದೇ ಪ್ರಾಣ, ಇವು ತಕ್ಕುವೆಂದರಿದು
ಸಿಕ್ಕಿಸಿಕೊಳಬಲ್ಲಡೆ ಸಿಕ್ಕದಾದ ಕಾಣಾ ನಮ್ಮ ಗುಹೇಶ್ವರಾ || ೬೪ ||

|| ೧೦ ||

ಕಾಲನ ಕೊಂದಾತನಲ್ಲದೆ ಶುದ್ಧಪ್ರಸಾದಿಯಲ್ಲ,
ಕಾಮನ ತಿಂದಾತನಲ್ಲದೆ ಸಿದ್ಧಪ್ರಸಾದಿಯಲ್ಲ,
ತ್ರಿಪುರವ ಸುಟ್ಟಾತನಲ್ಲದೆ ಪ್ರಸಿದ್ಧಪ್ರಸಾದಿಯಲ್ಲ,
ಕೆಸರಲ್ಲಿ ಕಿಚ್ಚನಿಕ್ಕಿ ಜಸುರ ಬಡಿದುಕೊಂಡಾತಗಲ್ಲದೆ
ಈ ತ್ರಿವಿಧ ಪ್ರಸಾದವಿಲ್ಲ ಕಾಣಾ ಗುಹೇಶ್ವರಾ || ೬೫ ||

|| ೧೧ ||

ಅಚ್ಚಪ್ರಸಾದಿಗಳು ನಿಚ್ಚಪ್ರಸಾದಿಗಳು ಎಂಬಿರಿ
ನಿಚ್ಚಕ್ಕೆ ನಾವು ಹುಸಿಗಳ ಕಂಡೆವಲ್ಲಾ:
ವಾಯು ಬೀಸುವಲ್ಲಿ ಆಕಾಶ ಬಲಿವಲ್ಲಿ ಲಿಂಗಾರ್ಪಿತಮುಖವರಿಯರಲ್ಲಾ
ಭೋಜನವನುಂಡು ಭಾಜನವ ವಿಕ್ಕಿಟ್ಟು ಹೋಹ ಹಿರಿಯರಿಗೆ
ಅದೇ ಭಂಗ ಗುಹೇಶ್ವರಾ || ೬೬ ||

|| ೧೨ ||

ತನು ಹೊರಗಿರಲು ಪ್ರಸಾದ ಒಳಗಿರಲು ಏನೆಂಬೆನಯ್ಯಾ?
ನಿಮ್ಮ ಮನಕ್ಕೆ ಮನಕ್ಕೆ ಮನ ಸಾಚದು
ಪ್ರಾಣಲಿಂಗದಲ್ಲಿ ಪ್ರಸಾದವ ಕೊಂಡರೆ ವ್ರತಕ್ಕೆ
ಭಂಗ ಕಾಣಾ ಗುಹೇಶ್ವರಾ || ೬೭ ||

|| ೧೩ ||

ತಲೆಯುಲಟ್ಟುಣಲೊಲ್ಲದೆ ಒಲೆಯುಲಟ್ಟುಂಬರೇ
ಒಲೆಯುಲಟ್ಟುಂಡು ಒಡಲ ತುಂಬಿದರೆ ಹೊಗೆಯು ಘನವಾಯ್ತು
ಇದು ಕಂಡಾದರೆಯೂ ಹೇಸಿ ಬಿಡಬೇಡವೇ ಗುಹೇಶ್ವರಾ || ೬೮ ||

## ೧೯. ಗೋರಕ್ಷನ ಗತಿ

**ವಚನ**

|| ೧ ||

ಕಳ್ಳಗಂಜಿ ಕಾಡಹೊಕ್ಕರೆ ಹುಲಿ ತಿನ್ನದೆ ಮಾಬುದೆ
ಹುಲಿಗಂಜಿ ಹುತ್ತ ಹೊಕ್ಕರೆ ಸರ್ಪ ತಿನ್ನದೆ ಮಾಬುದೆ
ಕಾಲಗಂಜಿ ಭಕ್ತನಾದರೆ ಕರ್ಮ ತಿನ್ನದೆ ಮಾಬುದೆ
ಮೃತ್ಯುವಿನ ಬಾಯ ತುತ್ತಾದ ವೇಷಡಂಬಕರ
ನಾನೇನೆಂಬೆನು ಗುಹೇಶ್ವರಾ || ೬೯ ||

|| ೨ ||

ನಾರುಬೇರಿನ ಕುಟಿಲಕರ್ಮದ ಯೋಗವಲ್ಲದು ನಿಲ್ಲಿ ಭೋ!
ಕಾಯಸಮಾಧಿ ಕರಣಸಮಾಧಿ ಯೋಗವಲ್ಲದು ನಿಲ್ಲಿ ಭೋ!
ಜೀವಸಮಾಧಿಯೆಂಬುದಲ್ಲ ನಿಜಸಹಜಸಮಾಧಿ ಕಾಣಾ ಗುಹೇಶ್ವರಾ || ೭೦ ||

## ೨೦. ಮುನಿಗಳಿಗೆ ಬೋಧಿಸಿದ ಗತಿ

**ವಚನ** || ೧ ||

ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ
ಗಳಿಗೆಯ ಬೇಟವ ಮಾಡಿಹೆನೆಂಬ ಪರಿಯ ನೋಡಾ
ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂಬ ಬಿನ್ನಾಣ ತಪ್ಪಿತು ಗುಹೇಶ್ವರಾ || ೭೧ ||

|| ೨ ||

ಜಗವ (ಜಘನ) ಕದ್ದ ಕಳ್ಳನು ಅಗಲಿ ಮಿಕ್ಕುಹೋದರೆ
ಗಗನ ಅಗಲಕ್ಕೆ ಹಬ್ಬಿತ್ತು
ಅಲ್ಲಲ್ಲಿಗೆ ನೋಡಲು ಶರಣರ ಸಂಗವನರಸುವರೆಲ್ಲರು ಅಲ್ಲಲ್ಲಿಗೆ ನೋಡಲು
ಸಾಧಕರೆಲ್ಲರು ಸಾಧಿಸಹೋಗಿ ಆ ಭೇದವನರಿಯದೆ ಕೆಟ್ಟರು ಗುಹೇಶ್ವರಾ ||೭೨||

|| ೩ ||

ದೇಶಗುರಿಯಾಗಿ ಲಯವಾಗಿ ಹೋದವರ ಕಂಡೆ,
ತಮಂಧಗುರಿಯಾಗಿ ಲಯವಾಗಿ ಹೋದವರ ಕಂಡೆ,
ಕಾಮ ಗುರಿಯಾಗಿ ಬೆಂದು ಹೋದವರ ಕಂಡೆ,
ನೀ ಗುರಿಯಾಗಿ ಹೋದವರನಾರನು ಕಾಣೆ ಗುಹೇಶ್ವರಾ! || ೭೩ ||

## ೨೧. ಬಸವೇಶ್ವರನು ಶೂನ್ಯಸಿಂಹಾಸನವನ್ನು ರಚಿಸಿದ ಗತಿ

**ವಚನ** || ೧ ||

ಅಷ್ಟದಳಕಮಲದ ಹೂಗಲ್ಲವಿಡಿದು ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತು
ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರವ ತೆಗೆದು ನೋಡುವರೆ ವಿಪರೀತ
ಏಕೋಭಾವವೆಂಬುದೊಂದು ಕಂಭ
ಅದಕ್ಕೆ ಅನೇಕ ಚಿತ್ರಂಗಳಡಗಿದ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ
ಮಸ್ತಕದ ಮೇಲೆ ಪವಳಹಾರದ ಪಂಜರಮಂ ಕಟ್ಟಿ ಪಂಚ ಮೌಕ್ತಿಕದ
ಮಾಲೆಯನಿಳಿಯಬಿಟ್ಟು ಮಲಕು ಮಲಕಿನ ನಡುವೆ ಕಟ್ಟಿದುವು

ನವರತ್ನದ ಗೊಂಡೆಯಂಗಳು,
ಕಾಳಿಕೆಯ ಕಪ್ಪಡಪದಕೆ ಮೇಲು ಹೊದಕೆ,
ಉಲುಹಿನರಳೆಲೆಯ ಬಳಸುದೋರಣವ ಕಟ್ಟಿ ದಶವಾಯುಗಳನೊಂದುಮಾಡಿ
ಲಿಂಗಸುಖವಾಯುವ ಸಂತೈಸಿ ಆಲವಟ್ಟವಂ ಮಾಡಿ, ಲಂಬಿಸಿದ
ಮಂದಾನಿಲನಂ ಮಲಗಂ ಮಾಡಿ, ಹರುಷವನೀವ ವಸಂತನ ಚೌಕವಟ್ಟಿಗೆಯ
ಆಸನವಂ ಮಾಡಿ, ನಾನಾನಾಳಸುನಾಳದೊಳು ಮೊರೆವ ಶಬ್ದವಂ
ಶುಕಪಿಕಭ್ರಮರಾವೋದಮಂ ಮಾಡಿ, ಪರಮಶಾಂತಿಯೆಂಬ ಶೈತ್ಯಾಕಾರ
ಸೋಂಕಿನ ಚೂತಫಲಂಗಳಂ ಹಾಸಿ, ಉತ್ತರ ದ್ವಾರವೆಂಬ ನುಸುಳುಗಂಡಿಯಂ
ರಚಿಸಿ ಪೂರ್ವಯೋಗಂಗಳೆಂಬ ಸೋಪಾನಮಂ ಮಾಡಿ, ಪಶ್ಚಿಮದ್ವಾರವೆಂಬ
ನಿಜದ್ವಾರಮಂ ಮಾಡಿ, ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಗವಾಕ್ಷಿಯನಿಕ್ಕಿ
ಆಶೆಯಾಮಿಷಮಂ ಕೆಡಿಸಿ, ಊರ್ಧ್ವಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ
ಚಂದ್ರಸೂರ್ಯರೆಂಬ ದೀಪಗಳಂ ಬೆಳಗಿ, ಶಿವೋಹಮೆಂಬ ಶಿಖರಿಯ ಮೇಲೆ
ಮಹಾಜ್ಞಾನಪ್ರಕಾಶವೆಂಬ ಹೊನ್ನಕಳಶವ ಸಿಂಗಾರವಂ ಮಾಡಿ,
ನಿಃಶೂನ್ಯ ನಿರಾಳವೆಂಬ ಶೂನ್ಯಸಿಂಹಾಸನಮಂ ಮಾಡಿದ
ಬಸವಪ್ರಿಯಕೂಡಲಚೆನ್ನಸಂಗನಲ್ಲಿ ಎನ್ನ ಪರಮಗುರು ಸಂಗನಬಸವಣ್ಣ||೭೪||

|| ೨ ||

ಅಂಗದ ಪ್ರಕೃತಿ ಲಿಂಗದಲ್ಲಿ ಅಳಿದು ಮನದ ಪ್ರಕೃತಿ ಅರಿವಿನಲ್ಲಿ ಅಳಿದು
ಜೀವನ ಭ್ರಾಂತಿ ನಿಶ್ಚಿಂತದಲ್ಲಿ ಅಳಿದು ನಿಃಶೂನ್ಯ ನಿರಾಮಯವಾದ
ನಿವಾಸಕ್ಕೆ ಸದಾಚಾರವೆಂಬ ಕೆಸರಗಲ್ಲನಿಕ್ಕಿ ಸರ್ವಾಚಾರ ಸಂಪತ್ತೆಂಬ
ಹೊಗಲ್ಲ ಮುಟ್ಟಿ ಅಂತಃಕರಣಚತುಷ್ಟಯದ ನಾಲ್ಕು ಕಂಭವ ನಿಲಿಸಿ
ಜ್ಞಾತೃವೆಂಬ ಭಿತ್ತಿಯ ಮೇಲೆ ಜ್ಞಾನವೆಂಬ ಶಿಖರಿಯನನುಗೊಳಿಸಿ
ಜ್ಞೇಯವೆಂಬ ಹೊನ್ನಕಳಶವಂ ಶೃಂಗಾರವಂ ಮಾಡಿ ಬ್ರಹ್ಮರಂಧ್ರದ
ಊರ್ಧ್ವದ್ವಾರವೆಂಬ ನಿಜದ್ವಾರವ ಮಾಡಿ ನಿರ್ವಯಲಲಿ ನೆಲೆಗೊಳಿಸಿ
ಬಸವಪ್ರಿಯ ಕೂಡಲಚೆನ್ನಸಂಗನ ಶರಣ ಪ್ರಭುದೇವರ ಬರವಿಂಗೆ
ಶೂನ್ಯಸಿಂಹಾಸನವ ರಚಿಸಿ ಬರವ ಹಾರುತ್ತಿರ್ದ ನಮ್ಮ ಪರಮಗುರು
ಸಂಗನಬಸವಣ್ಣನು || ೭೫ ||

# ೨೨. ಪ್ರಭುದೇವರು ಶೂನ್ಯಸಿಂಹಾಸನವನೇರಿದ ಗತಿ

**ವಚನ** || ೧ ||

ಕೆದರಿದ ತಲೆಯ ತೊನೆವೆ ನಡೆಯ ಹಣೆಯ ಬುಗುಟಿನ ಕರಸ್ಥಲದ
ಅನಿಮಿಷದಿಂ ಒಹಿರಂಗದ ವಚನ ತಪ್ಪಿ ಇದಿರುಗೊಯಿಲು ತಾಗಿ
ಪುರ್ಬೊಡೆದು ಕಣ್ಣು ತೆರೆದು ಕಿವಿ ಹರಿದು ಜೋಲುವ ರಕ್ತಧಾರೆಯ
ಗಾಳಿಯ ಧೂಳಿಯ ಮಳೆಯ ಜೋರಿನ ಬೆನ್ನಬಾಸುಳದ ಎಡಬಲದ ಬದಿಯ
ತಟ್ಟಿನ ಮುಳ್ಳುದರಹಿನ ಕಂಕುಳ ಸೀಳಂ ಕಂಡು ನೋಡುವ ಜನರು
ಬೆರಗಾಗೆ ಪೊರವಾರಿನ ಮುಸಿಯ ದಿಗಂಬರದ ಬಣಗು ಸುರಿವುತ್ತ
ಆಪ್ಯಾಯನವರತು ಬಿದ್ದು ಮೊಣಕಾಲೊಡೆದು ಹೊಸ ಹುಣ್ಣಿನ ರಕ್ತದ
ಜೋರು ಹರಿದು ಮುಂಗಾಲು ತಲೆಯೊಡೆದು ಕಣಕಾಲು ಸಂದು ತಪ್ಪಿ
ಕಿರಿಬೆರಳು ಎಡಹಿ ಜೊಟ್ಟೊಡೆದು ಗಾಯದ ಉರುಗು ಟೊಂಕದ
ಬರುಗುಂಟನ ನೋಡಾ ಚೆನ್ನಬಸವಣ್ಣಾ!
ಅಂತ್ಯಂತ ಮಲಿನ ಕೂಡಲಸಂಗಮದೇವರ ಕುರುಹು ವಿಪರೀತ
ನೋಡುವರೆ ಭಯಂಕರವಾಗಿದೆ ಅಯ್ಯಾ! || ೭೬ ||

|| ೨ ||

ಅಟ್ಟೆ ಹಾಯುತ್ತ ಛೋಂಕನೆ ನಿಲ್ಲುತ್ತ ಒಮ್ಮೆ ಮರುಳಿನಂತೆ ಮಂಕಿನಂತೆ
ಬೆಸಿಬೆಸಿಯ ನೋಡುತ್ತ ಅಂಗಡಿಯ ರಾಜಬೀದಿಯ ಶೃಂಗಾರಂಗಳಂ
ನಲಿನಲಿದು ನೋಡುತ್ತ ಇತ್ತೆರದ ಭದ್ರದ ಮೇಲೆ ನಾಂಟ್ಯವನಾಡುವರಿಗೆ
ಇದಿರಾಗಿ ತಾ ಮುರಳಿ ಆಡುತ್ತ ಹಾಡುತ್ತ ಜೈಯ್ಯುತ್ತ ಕೆರಳಿ ನುಡಿವುತ್ತ
ವಾದ್ಯಮೇಳಾಪವ ಕಂಡು ಆಳಿಗೊಂಡು ನಗುತ್ತ ಹಸ್ತವನಾಡಿಸಿ
ಗತಿಯನುಚ್ಚರಿಸಿ ಕೆಯ್ಯೊಡನೆ ಮರುಳಾಟವನಾಡುತ್ತ
ಮೆಲ್ಲ ಮೆಲ್ಲನೆ ಸಿಂದು ನೋಡಿ ನಲಿವುತ್ತ ಎಂದಿನ ಸುಳಿಹಿನೊಳಗಲ್ಲವ ಸುಳುಹು
ಬಸವ ನಿಮ್ಮಾಣೆ, ಸೊಪ್ಪಳನಲ್ಲದೆ ಮಾಣನು || ೭೭ ||

|| ೩ ||

ಬಾಲನಹನೊಮ್ಮೆ ಲೋಲನಹನೊಮ್ಮೆ ವೃದ್ಧನಹನೊಮ್ಮೆ ಮತ್ತನಹನೊಮ್ಮೆ
ಹೊಳೆದು ತೋರುವನೊಮ್ಮೆ ತೋರಿಯಡಗುವನೊಮ್ಮೆ
ವಿಶ್ವ ನೋಡಿ ಬೆರಗಾಗುತ್ತಿರೆ ಇದ್ದ ಠಾವಿನಲಿದ್ದು ಮುಂದೆ ತೋರುತ್ತಿರಲು
ಸಾಂಪ್ರದಾಯದವರು ಒಡನೊಡನೆ ಹರಿದು ಬಂದು ಹೇಳುತ್ತಿರಲು
ಹತ್ತೆ ಸಾರಿದ ಬಸವಣ್ಣನ ಮಹಮನೆಯ ತಲೆಯೆತ್ತಿ ನೋಡಿ
ಮುಗಿಲಮೂಲೆ ತಪ್ಪದೆ ಕುಸುರಿಗೆಲಸದ ನಂದಿಯ ಮಂಟಪಂಗಳ ಮೇಲೆ
ಉಪ್ಪರಿಗೆಯ ಭದ್ರಂಗಳ ನೋಡಿ ಭವನಭವನೇಶ್ವರ ಹಿಂದು ಮುಂದೆ
ಎಡಬಲನ ನೋಡಿ ನಗುತ್ತ ಮುತ್ತಿನ ತೋರಣಕ್ಕೆ ಹಾರೈಸಿ
ಬಸವಣ್ಣನರಮನೆಯ ಹೊಕ್ಕ ಕಲಿದೇವರ ದೇವನು || ೭೮ ||

|| ೪ ||

ಬಲಕ್ಕೆ ಮುರಿದನು ಪೌಳಿಯ ಉತ್ತರ ಬಾಗಿಲಲ್ಲಿ ತಲೆವಾಗಿ ಹೊಕ್ಕು
ಗತಿಯ ಪವಣದಲ್ಲಿ ಧವಳಾರಮುಪ್ಪ ಪಶ್ಚಿಮದ್ವಾರದಿಂ
ತ್ರಿವಿಧ ಗತಿಯ ಶೂನ್ಯಸಿಂಹಾಸನದ ಮೇಲೆ
ಮುಕ್ತಕೇಶದಪರಮ ಗುರುರಾಜನೇರಿದ ನೋಡಾ !
ಕಲಿದೇವರ ದೇವನು ||೭೯||

|| ೫ ||

ಇದ್ದ ಪರಿಯಿಂತು ಅರಿದೆ ನೋಡಯ್ಯಾ
ನಿಂದರೆ ನೆಳಲಿಲ್ಲ, ನಡೆದರೆ ಹೆಜ್ಜೆಯಿಲ್ಲ, ಭೂತಳದೊಳಗೆ ತಾನು ಕಂಡುದಿಲ್ಲ
ಇಂತಪ್ಪ ಅನ್ಯಾಯದ ಸುಳುಹ
ಅಹುದಹುದು ಅರಿದು
ಜಂಗಮಸ್ಥಲ ಇಂತುಟಲ್ಲದೆ ಎಂತುಟು ಹೇಳಾ
ಆಪ್ಯಾಯನದರಿಕೆಯ ಹೊಲಬ ಕಾಣಬಾರದು
ಊಡಿದರೆ ಉಣ್ಣನೋ ಉಂಬನೊ!
ಉಂಬುದುಂಟಾದರೆ ನೀಡುವೆನು ಕೂಡಲಸಂಗಮದೇವರಿಗೆ
ಚೆನ್ನಬಸವಣ್ಣನು ಅಹುದೆನಲಿಕೆ. || ೮೦ ||

|| ೬ ||

ಅರಳುಗಂಗಳವರಿಗೆ ಹೆರಳುಗಂಗಳವರು ಸೈರಿಸದಂತೆ;
ತುರುಬುಳ್ಳವರಿಗೆ ಬರಿಮುಂಡೆಯವರು ಸೈರಿಸದಂತೆ
ಅರಸನ ಕಂಡು ಪುರುಷನ ಮರೆದಂತೆ ಮಾಡಿದನೀ ವ್ರತಗೇಡಿ ಬಸವನು;
ಮಹೇಂದ್ರಜಾಲಿಗನೊಬ್ಬನ ಪ್ರಭುವೆಂದು ಕುಳ್ಳಿರಿಸಿಕೊಂಡು
ತನ್ನ ಪ್ರಾಣಲಿಂಗವೆಂದು ನಮ್ಮತ್ತ ತಿರುಗಿ ನೋಡಲೊಲ್ಲ;
ಅವನಲ್ಲಿ ಏನು ಲೇಸು ಕಂಡನೋ! ನಮ್ಮಲ್ಲಿ ಏನು ಹೊಲ್ಲೆಯುವ ಕಂಡನೋ!
ಕಂಚನೊಲ್ಲದೆ ಹಂಚ ಹಿಡಿದನು.
ಆ ಅನಾಚಾರಿ; ಅವನೊಬ್ಬ, ವ್ರತಗೇಡಿ ಬಸವನೊಬ್ಬ
ಇವರಿಬ್ಬರು ದೇವಲೋಕಮರ್ತ್ಯಲೋಕಕ್ಕೆ ಹೊರಗು |
ಇವದಿರ ಮುಖವ ನೋಡಲಾಗದೆನುತ ಹೋದರು
ಕಲಿದೇವರ ದೇವನ ಶರಣರು || ೮೧ ||

|| ೭ ||

ವಿಪಿನದೊಳು ಮದಕರಿಯ ಹಿಂಡು ಆನಂದದ ಲೀಲೆಯೊಳಾಡುತ್ತಿರಲು
ಕೇಸರಿ ಬರಲು ಮದಕರಿಗಳೆಲ್ಲ ಕೆದರಿ ಓಡುವ ತೆರನಂತೆ
ಸಾಕಾರ ಸೊಡ್ಡಳ ನಿಮ್ಮ ಶರಣ ಪ್ರಭುದೇವರು ಬರಲೊಡನೆ
ಹರಿದುದಯ್ಯಾ ನೆರೆದ ಶಿವಗಣಂಗಳು || ೮೩ ||

## ೨೩. ಪ್ರಭುದೇವರು ಆರೋಗಣೆ ಮಾಡಿದ ಗತಿ

**ವಚನ** || ೧ ||

ಒಂದಾದುದು ಎರಡಪ್ಪುದೇ? ಎರಡಾದುದು ಒಂದಪ್ಪುದೇ?
ಪರಿಣಾಮದ ವೇಳೆಯಲ್ಲಿ ಸಂದೇಹ ಹುಟ್ಟಲುಂಟೇ?
ಬಂದ ಜಂಗಮದ ನಿಲವನರಿಯದೆ ಹಿಂದನೆಣಿಸಿ ಹಲವ ಹಂಬಲಿಸುವರೇ!
ಈ ಒಂದು ನಿಲವಿಂಗೆ ಪರಿಣಾಮವ ಮಾಡಬಲ್ಲಡೆ
ನಿನ್ನ ಲಕ್ಕದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ
ಪರಿಣಾಮವಹುದು ನೋಡಾ.

ಗುಹೇಶ್ವರನೆಂಬ ಲಿಂಗದ ನಿಲವನರಿಯದೆ
ಮರುಳಾದೆಯಲ್ಲಾ ಸಂಗನಬಸವಣ್ಣಾ! || ೮೩ ||

|| ೨ ||

ದೇವ ದೇವ ಮಹಾಪ್ರಸಾದ ನಿಮ್ಮಡಿಗಳಿಂದಂತಲ್ಲದೆ
ಇನ್ನೆನಗೆ ಬೇರೆ ಸ್ವತಂತ್ರವುಂಟೇ? ಸಂದ ಸಂಶಯವುಂಟೇ?
ದರ್ಪಣದೊಳಗಣ ಪ್ರತಿಬಿಂಬವ ನೋಡುವ ಮುಖಕ್ಕೆ ಭಿನ್ನಭಾವವುಂಟೇ?
ಚರಿಸಿಬಹ ಅನಂತ ಸುಳುಹಿನೊಳಗೆ ನೀನೊಬ್ಬ,
ನಿನ್ನೊಳಗೆ ಅನಂತ ಸುಳುಹು ಅಡಗಿದುವು,
ನಿನಗೆ ಮಾಡಿದ ಸುಯಿದಾನವ ನಿನಗೆ ನೀಡುವೆ ಅವಧರಿಸಯ್ಯಾ
ಕೂಡಸಂಗಮದೇವ ಪ್ರಭುವೇ. || ೮೪ ||

|| ೩ ||

ಹೆಡಗೆ ಹಾರ, ಮೊರ ಹಾರ, ಗೆರಸಿ ಹಾರ, ಮಡಕೆ ಹಾರ, ದೆಸೆದೆಸೆಯಲು
ತಂದು ನೀಡುತ್ತಿರಲು ಹೊಸ ಪರಿಯ ಆರೋಗಣೆಯನವಧರಿಸುತಿರ್ದದು;
ಆವ ದೆಸೆಗಳಲ್ಲಿ ತಂದು ನೀಡುತ್ತಿದ್ದರೆ ಆ ದೆಸೆಗಳಲ್ಲಿ ಬಾಯಾಗಿ ಕೊಳುತಿರ್ದನು;
ಎತ್ತ ನೋಡಿದಡತ್ತ ಮುಖವಾಗೆ ಎವೆ ಹೊಯ್ದಂತೆ ತೆರಹಿಲ್ಲದೊಂದು ನಿಮಿಷ
ಎಡಹೆದರೆ ಅಕ್ಕಿಗಚ್ಚು ಸುಚ್ಚು ತವುಡು ಮೊದಲಾದ ಪದಾರ್ಥವೆಲ್ಲವು
ಸಂದವು ನಿಮಿಷದಲ್ಲಿ.
ಭಕ್ತಿಬಂಧುಗಳೆಲ್ಲ ತಮ್ಮ ತಮ್ಮ ಮಠವಲಾದ ಸುಯಿದಾನಂಗಳಂ ತಂದು
ಸಾರಗಟ್ಟಿ ನೀಡುತಿರ್ದಡೆ ಅದ್ಭುತವಾದ ಆರೋಗಣೆಯಂ ಕಂಡು ಹರಿಹರಿದು
ಪಾಕಪ್ರಯತ್ನವ ಮಾಡಿ ಎನುತ ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ
ಸಂತೋಷದಲೋಲಾಡುತಿರ್ದನೆನ್ನ ಪರಮಗುರು ಬಸವಣ್ಣನು || ೮೫ ||

|| ೪ ||

ಗುರುವೇ ಬೋನ, ಶಿಷ್ಯನೇ ಮೇಲೋಗರ,
ಲಿಂಗಕ್ಕೆ ಪದಾರ್ಥ ಅರ್ಪಿತವಯ್ಯಾ ಘನಕ್ಕೆ ಮನವೆ ಅರ್ಪಿತ

ಘನದೊಳಗೆ ಮನವು ತಲ್ಲೀಯವಾದ ಬಳಿಕ
ಅರ್ಪಿಸುವ ಭಕ್ತರಾರು? ಆರೋಗಿಸುವ ದೇವರಾರು?
ನಿತ್ಯತೃಪ್ತನುಣಕಲಿತನೆಂದಡೆ ಅರ್ಪಿಸಲುಂಟೇ? ದೇವ ಮತ್ತೊಂದನು,
ಕೂಡಲಸಂಗಮದೇವಪ್ರಭುವೇ ಸುಚಿತ್ತದಿಂದ ಆರೋಗಿಸಯ್ಯಾ ॥ ೮೬ ॥

॥ ೫ ॥

ಮನ ಯುಕ್ತಿ ವಿವೇಕವೆಂಬಕ್ಕಿಯನು ಗುಪ್ತವೆಂಬೊರಳೊಳಗಿಕ್ಕಿ
ಅಭಿನ್ನಮಥನವೆಂಬ ಒನಕೆಯಲ್ಲಿ ತಳಿಸಿ, ಕಲ್ಮಷವೆಂಬ ತೌಡು ಹಾರಿಸಿ
ಸಮತೆಯೆಂಬ ಸಲಿಲದಲ್ಲಿ ಜಾಳಿಸಿ, ಅಳುಪೆಂಬ ಹರಳು ಕಳಿದು,
ದಯಾಮೃತವೆಂಬ ಹಾಲಿನಲ್ಲಿ ಬೋನಮಂ ಮಾಡಿ ಸಮರಸ ರುಚಿಕರವೆಂಬ
ಶಾಕಸಾಕಂಗಳಂ ಮಾಡಿ ನೆನಹಿನ, ಅವಲಂಬವೇ ಅಭಿಘಾರವಾಗಿ
ನಿರ್ಮಳವೆಂಬ ಶಿವದಾನವನಳವಡಿಸಿ ಕಾದಿದ್ದರಯ್ಯಾ
ಪಂಚೇಂದ್ರಿಯವೆಂಬ ಶುನಕ ಮುಟ್ಟದಂತೆ ಕಾದಿದ್ದರಯ್ಯಾ
ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ ಕಾದಿದ್ದರಯ್ಯಾ
ಅಷ್ಟಮದಂಗಳೆಂಬ ಮಕ್ಕಳು ಮುಟ್ಟದಂತೆ ಕಾದಿದ್ದರಯ್ಯಾ
ಇನಿತು ಹೀನಂಗಳಿವಾವು ಮುಟ್ಟದಂತೆ ಕಾದಿದ್ದರಾಗಿ
ಈ ಬೋನ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಕಾಣಾ
ಚೆನ್ನಬಸವಣ್ಣಾ ॥ ೮೭ ॥

॥ ೬ ॥

ಭಕ್ತಿಯುಕ್ತಿಯ ಹೊಲಬ ಮೂರು ಲೋಕದೊಳಗೆ ಬಲ್ಲವರಾರನು ಕಾಣೆನು !
ಲಿಂಗದಲ್ಲಿ ಭಕ್ತಿ ಮಾಡಿದಡೆ ಭವ ಹರಿಯದೆಂದು
ಜಂಗಮಮುಖ ಲಿಂಗವೆಂದರಿದು ಅರ್ಚಿಸಿ ಪೂಜಿಸಿ ದಾಸೋಹವ ಮಾಡಿ
ಪ್ರಸನ್ನತೆಯ ಹಡೆದು ಆ ಪ್ರಸನ್ನತೆಯ ರುಚಿಯನು ಪಮಿಸಬಾರದು.
ಆ ಬಸವಣ್ಣನ ಭಕ್ತಿಪ್ರಸಾದವ ಕೊಂಡು ನಾನು ಬದುಕಿದೆನು,
ಆ ಬಸವಣ್ಣನ ಪ್ರಸಾದವ ಕೊಂಡು ಅಲ್ಲಮಪ್ರಭು ತೃಪ್ತನಾದನು,
ಅಲ್ಲಮಪ್ರಭು ಕೊಂಡ ಪ್ರಸಾದದ ತೃಪ್ತಿ
ಲಕ್ಕದ ಮೇಲೆ ತೊಂಬತ್ತಾರುಸಾವಿರ ಜಂಗಮಕ್ಕೆ ತೃಪ್ತಿಯಾಯಿತ್ತು

ಆ ಲಕ್ಕದ ಮೇಲೆ ತೊಂಬತ್ತಾರುಸಾವಿರ ಜಂಗನು ತೃಪ್ತಿಯಾದಲ್ಲಿ
ಸಚರಾಚರವೆಲ್ಲವು ತೃಪ್ತಿಯಾಯಿತ್ತು
ಇಲ್ಲವೆಂದು ಬಿಜ್ಜಳ ತರ್ಕಿಸಲು ಕಪ್ಪೆಯ ಒಡಲೊಳಗೆ
ಪ್ರಭುವಿನ ಪ್ರಸಾದವ ತೋರಿದ ಬಸವಣ್ಣನು
ಇದು ಕಾರಣ ನಮ್ಮ ಕೂಡಲಚೆನ್ನಸಂಗಮದೇವರಲ್ಲಿ
ಬಸವಣ್ಣನ ಪ್ರಭುದೇವರ ಪ್ರಸಾದದ ಘನವು
ತ್ರೈಲೋಕದೊಳಗೆ ಬೆಳವಿಗೆಯಾಯಿತ್ತು || ೮೮ ||

|| ೭ ||

ತೊರೆಯುದಕವ ಕೆರೆಯುಂಡು ತೃಪ್ತವಾಗಲು ಆ ಕೆರೆಯುದಕವ
ಹಲವು ಕೆಲವು ಸ್ಥಾವರ ಜಂಗಮುಗಳುಂಡು ತೃಪ್ತಿವಡೆದಂತೆ ಪ್ರಭುದೇವರ
ತೃಪ್ತಿ ಅಸಂಖ್ಯಾತ ಮಹಾಗಣಂಗಳೆಲ್ಲಕ್ಕೆ ತೃಪ್ತಿಯಾಯಿತ್ತು ನೋಡಾ !
ಬಸುರ ಹೊಗಸು ಉಂಡಲ್ಲಿ ಒಡಲ ಶಿಶು ತೃಪ್ತಿಯಾದಂತೆ
ಸಚರಾಚರವೆಲ್ಲವು ತೃಪ್ತಿಯಾದವು ನೋಡಾ !
ಕೂಡಲಸಂಗಮದೇವಾ ಪ್ರಭುದೇವರ ಪ್ರಸಾದದ
ಮಹಿಮೆಗೆ 'ನಮೋ ನಮಃ' ಎಂಬೆನು || ೮೯ ||

## ೨೪. ಮನೋಲಯದ ಗತಿ

**ವಚನ** || ೧ ||

ಹಸಿವಿನ ಪ್ರೇಮಕ್ಕೆ ಬೋನನ ಹಿಡಿವರು ।
ತೃಷೆಯ ಪ್ರೇಮಕ್ಕೆ ಮಜ್ಜನಕ್ಕೆರೆವರು ।
ಅವರಿಗೆ ದೇವರಿಲ್ಲ ಭಕ್ತರಿಲ್ಲ, ನಾನು ಇಲ್ಲ ನೀನು ಇಲ್ಲ,
ಪೂಜಿಸುವರಿಲ್ಲ ಪೂಜೆಗೊಂಬುವರಿಲ್ಲ ಕಾಣಾ! ಸಂಗನಬಸವಣ್ಣಾ || ೯೦ ||

|| ೨ ||

ಭಾವವಳಿಯದು ಬಯಕೆ ಸವೆಯದು ।
ಐಕ್ಯನಾದಹೆನೆಂದರೆ ಏನಹುದೋ ।
ಸಬುದಸಂಭ್ರಮವಳಿಯದೆ ತನ್ನ ಇದಿರಿನಲಿ ಪ್ರತಿಗಂಡಡಹುದೇ ।
ಗುಹೇಶ್ವರನೆಂಬ ಸಂಬಂಧವಳಿಯದೆ ಬೇಸತ್ತು
ಬಯಸುವಂಗಾಯತವಹುದೇ || ೯೧ ||

ಹೊರಸಿನೆಕ್ಕಿಗೆ ಶಂಖದ ಮಣಿಯ ಪವಣಿಸುವರಾರು ?
ನೀವಾರಾದಡೆಯೂ ಪವಣಿಸಿ ಭೋ !
ಇದನಾನರಿಯೆನು !
ಒಂದು ತಾಳೆಮರದ ಮೇಲೆ ಮೂರು ರತ್ನವಿಹುದ ನಾ ಬಲ್ಲೆ
ಒಂದು ರತ್ನ ಉತ್ಪತ್ತಿ ಸ್ಥಿತಿಲಯಕ್ಕೊಳಗು
ಒಂದು ರತ್ನ ಹದಿನಾಲ್ಕು ಭುವನಕ್ಕೆ ಬೆಲೆಯಾಯಿತ್ತು
ಇನ್ನೊಂದು ರತ್ನಕ್ಕೆ ಬೆಲೆಯಿಲ್ಲವೆಂದು ಗುಹೇಶ್ವರಲಿಂಗೈಕ್ಯರು
ನಿಶ್ಶಬ್ದಂ ಬ್ರಹ್ಮ ಉಚ್ಯತ ಎಂದುದಾಗಿ || ೯೨ ||

|| ೩ ||

ಕಾಯದೊಳಗಣ ಜೀವನ ಮೀರಿ ಹೋಹ ಕಳ್ಳನ ಸಂಗ ಬೇಡ !
ನಿಮ್ಮ ನಿಮ್ಮ ವಸ್ತುವ ಸುಯಿದಾನವ ಮಾಡಕೊಳ್ಳಿ,
ಗುಹೇಶ್ವರನೆಂಬ ಕಳ್ಳನ ಕೊಂದರೆ ಅಳುವರಾರು ಇಲ್ಲ || ೯೩ ||

## ೨೫. ಪರಮೇಶ್ವರನು ಗಿರಿಜೆಗೆ ಬೋಧಿಸಿದ ಗತಿ

**ವಚನ** || ೧ ||

ಆದಿಯನು ಅರಿಯದೆ ಅನಾದಿಯಿಂದತ್ತತ್ತ ತಾನಾರೆಂಬುದ
ತಿಳಿದು ವಿಚಾರಿಸದೆ ಮಾಡಿದ ಫಲವೇನಯ್ಯಾ?
ಸಾವನ್ನಕ್ಕರ ಸಾಧನೆಯಂ ಮಾಡಿದಡೆ
ಕಾದುವ ದಿನವಾವುದಯ್ಯಾ ಬಸವಣ್ಣಾ?
ಬಾಳುವನ್ನಕ್ಕರ ಭಜನೆಯಂ ಮಾಡಿದಡೆ
ತಾನಹ ದಿನವಾವುದಯ್ಯಾ ಬಸವಣ್ಣಾ?
ಇದು ಕಾರಣ ಮಿಥ್ಯವನೇ ಹಿಡಿದು ಮಿಥ್ಯವನೇ ಪೂಜಿಸಿ
ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದರಲ್ಲಾ?

ತಮ್ಮ ತಾವು ಕೆಟ್ಟ ಕೇಡಿಂಗೆ ಬೆರಗಾದೆ?
ಕಣ್ಣ ಕಳೆದುಕೊಂಡು ಹೊಟ್ಟೆ ಸೀಳಿ ಮಗನ ಬಾಣಸವ ಮಾಡಿ
ಕೈಲಾಸಪುರಕ್ಕೆ ಹೋದವರೆಲ್ಲರು ಭಕ್ತರೇ?
ಅವರಿಗೆ ಶಿವಪಥ ಸಾಧ್ಯವಾಯಿತ್ತೇ?
ಭವ ಹಿಂಗಿತ್ತೇ?
ಅಸುರಕರ್ಮಿಗಳ ಮಾತಂತಿರಲಿ!
ನರಲೋಕದ ನರಗುರಿಗಳೆಲ್ಲಾ ನರಸಂಸಾರಕ್ಕೊಳಗಾದರು
ಸುರಲೋಕದ ಸುರರುಗಳೆಲ್ಲಾ ಸುರಸಂಸಾರಕ್ಕೊಳಗಾದರು
ರುದ್ರಲೋಕದ ರುದ್ರರುಗಳೆಲ್ಲಾ ರುದ್ರಸಂಸಾರಕ್ಕೊಳಗಾದರು
ಮುನಿಜನಂಗಳೆಲ್ಲಾ ತಪಸಂಸಾರಕ್ಕೊಳಗಾದರು
ಲಿಂಗವ ಹಿಡಿದವರೆಲ್ಲಾ ಫಲಪದವೆಂಬ ಸಂಸಾರಕ್ಕೊಳಗಾದರು
ಜಂಗಮವ ಅರ್ಚಿಸಿದವರೆಲ್ಲಾ ಸಾಯುಜ್ಯವೆಂಬ ಸಂಸಾರಕ್ಕೊಳಗಾದರು
ಇಂತೀ ಸಂಸಾರಕ್ಕೊಳಗಾದವರೆಲ್ಲಾ ಮಾಯೆಯ ಹೊಡೆಗಿಚ್ಚ ಗೆಲಬಲ್ಲರೇ?
ಅದೆಂತೆಂದಡೆ ನಿತ್ಯ ನಿಜಾತ್ಮ ತಾನೆಂದರಿಯದೆ
ತತ್ವಮಸಿಯೆಂಬ ವಾಕ್ಯ ತಾನೆಂದರಿಯದೆ
ಹೊರಹೊರಗೆ ಬಳಸಿ ಕೆಟ್ಟರೆಲ್ಲಾ ಹಿರಿಯರು!
ಸತ್ತರಲ್ಲಾ ನಾಯ ಸಾವ!
ಸತ್ತವರ ಹೆಸರ ಪತ್ರವನೋದಿ ಎತ್ತಳ ಮುಕ್ತಿ ಕಾಣಾ ಗುಹೇಶ್ವರಾ ‖ ೯೪ ‖

‖ ೨ ‖

ಪರುಷಕ್ಕೆ ಬೆಲೆಯುಂಟೇ?
ಪ್ರಾಣಕ್ಕೆ ನಿರ್ಮಾಲ್ಯವುಂಟೇ?
ರುಚಿಗೆ ಎಂಜಲುಂಟೇ?
ಸುಖಕ್ಕೆ ಅರೋಚಕವುಂಟೇ?
ಗುಹೇಶ್ವರಾ ನಿಮ್ಮನರಿದ ಶರಣಂಗೆ ಭವಬಂಧನವುಂಟೇ? ‖ ೯೫ ‖



# ಪ್ರಭುಲಿಂಗಲೀಲೆಯ
## ಕಠಿಣ ಶಬ್ದಗಳ ಕೋಶ





### ಅ

ಅಕ್ಕಜ ೪—೧೯ ಅಸೂಯೆ
ಅಗಳು ೨—೬ ಕಂದಕ, ಅಗಳ್ತೆ
೧೧—೪ ತೊಡು, ಅಗಿ.
ಅಚ್ಚುಗ ೪—೨ (ವ) ಮೋಹ.
ಅಟಮುಟಿಸು ೧೬—೩೨ ತಪ್ಪಿಸಿಕೊಂಡು ಹೋಗು
ಅಡಕಿಲು ೪—೧೨ ಒಂದರಮೇಲೊಂದು ಒಟ್ಟಿದ.
ಅಡಬಳ ೮—೧೩ ಮಾಂಸ.
ಅಡೆಯುಣಸು ೪—೧೧ ಅಂಚೆಯಲ್ಲಿ ಕೂಡ್ರಿಸಿದ ಉಂಗುರ
ಅಣಕ ೮—೨೭ ಹಾಸ್ಯ.
ಅಣಲು ೨೩—೪೧ ಬಾಯಿ.
ಅಣೆವರಿ (ಅಣೆ+ಪರಿ)
೪—೨೭ ಸೈನ್ಯದಂತೆ ಸಾಲಾಗಿನಡೆ
ಅಣೆ ೧೮—೫ ಶುದ್ಧ.
ಅನುಭವಣೆ ೫—೪೬ ಭ್ರಮೆಯುಕ್ತ.
ಅನೇಕವಹಣಿ ೧೩—೨೬ ಅನೇಕ ಪ್ರಕಾರ.
ಅನ್ಯಾಪದೇಶ ೧೧—೧೬ ಬೇರೆ ರೀತಿ.
ಅಯುತ ೬—೩೨ ಅಸಂಖ್ಯ.
ಅರ್ಥಿ ೧—೪೨ ಬೇಡುವವ
ಆಳಬಳ ೭—೩೪ ಶಕ್ತಿ.
೫—೨೨ ಇಚ್ಛೆ, ಸಾಮರ್ಥ್ಯ.
ಆಳವಡು ೧೦—೨೪ ಒಪ್ಪು, ಹೊಂದು.
ಆಳವಿ ೫—೧೧ ಸಾಮರ್ಥ್ಯ.
ಅಳುಪು ೪—೨೨ ಪ್ರೀತಿ.
೫—೨ ಪ್ರೇಮ.
೧೫—೨೫ ಆಶೆ.
ಅಂಗಚಿತ್ತ ೫—೪೨ ಬಹುಮಾನ.
ಅವಧಾರು ೪—೨೫ ಎಚ್ಚರಿಕೆಯಿಂದಿರು, ಲಕ್ಷಿಸು.
ಅಂಗವಟ ೪—೨೧ ಸೌಂದರ್ಯ, ಅವಯುವಗಳ ಚೆಲುವು, ದುಂಡುಮುಂಡಾದ
ಅಂಗೈಸು ೧೦—೨೧ ಸ್ವೀಕರಿಸು.
ಅಂದಣ ೪—೨೫ ಪಲ್ಲಕ್ಕಿ.

### ಆ

ಆ ೧೩—೩೭ (ಆನು) ನಾನು.
ಆಡುವೊಲ ೩—೩೧ ಕ್ರೀಡಾಂಗಣ.
ಆಣತಿ ೧೬—೪೨ ಆಜ್ಞೆ.
ಆಯತ ೧—೨ ಸರಿಯಾದ ಕ್ರಮ.
ಆಯತಿಕೆ ೪—(ಸೂ) ವೈಭವ
ಆರವೆ ೧೩—೫೫ ಉಪವನ, ತೋಟ.
ಆಲವಟ್ಟ ೨೧—೧ (ವ) ಬೀಸಣಿಕೆ.
ಆಲಿ ೧೧—೨೩ ದೃಷ್ಟಿ.

ಆಲಿಕಲ್ಲು ೨೩—೪೯ ಆಣಿಕಲ್ಲು,
ಆಣೇಕಲ್ಲು.

ಆವುಜ ೪—೪೧ ಒಂದು ಬಗೆಯ ವಾದ್ಯ.

ಆಳವಾಡು ೭—೫೧ ತಗ್ಗಿಸು.

ಆಳಾಪಿಸು ೪—೫೨ ಸ್ವರದಲ್ಲಿ ಹಾಡು.

ಆಳಿಗೊಳ್ಳು ೨೨—೨೮ ವಂಚಿಸು.

ಆನ್ದೆ ೧೩—೧೦ ಒಡೆಯ.

ಆಸನ್ನಿಸು ೧೦—೫ ಉಂಟಾಗು.

ಇ

ಇಕ್ಕೈ ೯—೪ ಸ್ಥಾನ.

ಇಕ್ಕೆಲ ೪—೧೦ ಎರಡು ಮಗ್ಗಲು.

ಇಟ್ಟಣಿಸು ೪—೪೯ ಗುಂಪಾಗು.

ಇಡಿ ೧೧—೨ ತುಂಬು.

ಇಂಡೆ ೪—೪೦ ಮಾಲೆ, ಗುಚ್ಛ.

ಇದ್ದೆಸ ೪—೨೨ ಎರಡು ಕಡೆ.

ಇನಿಯ ೩—೪೫ ಗಂಡ.

ಇಮ್ಮೆ ೭—೭೦ ಎರಡು ಸಾರೆ.

ಇಱು ೪—೫ ಹೊಂದಿಸಿ ಹಾಕು.

ಇಂಪು ೧—೮ ಮಾಧುರ್ಯ.

ಉ

ಉಕ್ಕಲಿಸು ೧೩—೧೪ ಕೈಮೀರು.

ಉಗ್ಘಡಣೆ ೫—೯ ಸಪ್ಪಳ, ಘೋಷ

ಉಗಿ ೧೩—೨೩ ಒಡೆ.

ಉಗು ೧೩—೫೯ ಸೇರು.

ಉಡಿನೇವಳ ೫—೫ ಉಡಿದಾರ.

ಉತ್ತರಾಯಿಗಳು ೧೦—೨೪ ಹೆರವರು.

ಉದ್ದಂಡ ೧೩—೩ ಗರ್ವಿತ.

ಉಪಾಂಗ ೪—೫೨ ಉಪರಾಗ.

ಉಪ್ಪವಡಿಸು ೪—೨ ನಿದ್ದಿಯಿಂದ ಏಳು.

ಉಚ್ಚಿ ೪—೫೦ ಉಷ್ಣ.

ಉಮ್ಮಳಿಕೆ ೫—೬೭ ಚಿಂತೆ, ದುಃಖ.

ಉರವಣಿಸು ೧೩—೧೫ ಉದ್ಧಟತನದಿಂದ
ವರ್ತಿಸು.

ಉಱಿಸಿಕೆ ೧೦—೨೩ ಸಹನ.

ಉಱಿಗು ೨೨—೩೪ ಡೊಂಕ.

ಉಱಿಬು ೭—೭೧ ಹೆಚ್ಚಾಗು.

ಉಲುಹು ೩—೨೭ ಧ್ವನಿ.

ಊ

ಊಣೆಯ ೭—೭೬ ಕುಂದು, ಕೊರತೆ.

ಊಳಿಗ ೪—೩ ಸೇವೆ.

ಎ

ಎಕ್ಕಲ ೧೩—೧೧ ಹಂದಿ.

ಎಗ್ಗತನ ೭—೨೮ ದಡ್ಡತನ.

ಎಕ್ಕವಿಂಡು ೧೩—೪ ದೊಡ್ಡ ಸಮೂಹ.

ಎಡೆವಱಿ ೧೦—೨೬ ನಾಶವಾಗು.

ಎಱಿಕ ೫—೮೯ ಪ್ರೀತಿ.

ಎರದಮುಳ್ಳು ೧೦—(೨ವ) ಜೋರೆಯ
ಮುಳ್ಳು.

ಎಱಿಯು ೮—೩೦ ಒಡೆಯ.

ಎಸಕ ೧೯—೭ ರೂಪ.
೨೪—೨೩ ಕಾರ್ಯ.

ಏ

ಏಗುವದು ೭—೬ ಏನು ಮಾಡುವುದು.

ಏಡಿಸು ೨೨—೩೫ ಹಿಯಾಳಿಸು.

ಏಳಿಸು ೧೩—೨೨ ಹೀಯಾಳಿಸು.

ಏಱು ೫—೬೮ ಹೊಡೆತ, ಗಾಯ.

ಏಹರಿ ೭—೧೫ ಯಾವಪರಿ.

ಏವಿಧಿ ೭—೧೫ ಯಾವ ಬಗೆ.

ಏಸಲೇ ೧೦—೧೩ ಒಳ್ಳೇಯದು, ಹಾಗೆ ಆಗಲಿ.

ಐಸು ೫—೫ ಅಷ್ಟು.

ಒ

ಒಕ್ಕಲಿಕ್ಕು ೪—೨೭ ಉರವಣಿಸು ?

ಒಕ್ಕುದನು ೧೪—೧೧ ಹೊರಸೂಸಿದುದನ್ನು, ಹೆಚ್ಚಾದುದನ್ನು.

ಒಗ್ಗು ೪—೫೨ ಗುಂಪು.

ಒಚ್ಚತಗೊಳ್ ೧—೬ ಕೂಡಿಕೊಳ್ಳು, ಐಕ್ಯವಾಗು.

ಒಟ್ಟಿಲ್ ೭—೫೯ ರಾಶಿ.

ಒಡರು ೧೧—೩ ಕೈಕೊಳ್ಳು.

ಒಡರಿಸು ೧೨—೩ ಹೊಂದು, ಊಟಮಾಡು

ಒಡಲುಗ ೧೨—೧೯ ಒಡ್ಡಲುಳ್ಳವ.

ಒಡ್ಡಣೆ ೧೩—೩ ರಾಶಿ.

ಒಡ್ಡವಣೆ ೧೩—೧೩ ಸಿದ್ಧತೆ, ರೀತಿ.

ಒಡ್ಡೈಯಿಸು ೧—೪ ಒಟ್ಟುಗೂಡಿಸು.

ಒಪ್ಪು ೧೯—೩೫ ಕಾಂತಿ.

ಒಪ್ಪುದೆ ೫—೨೨ ಚನ್ನಾಗಿ

ಒಬ್ಬುಳಿ ೧೮—೧೮— ಒಟ್ಟುಗೂಡುವಿಕೆ.

ಒಲವರಕಾಱ ೧೫—೨೨ ಪಕ್ಷ ಹಿಡಿದು ಮಾತಾಡುವವ.

ಒಸೆ ೧೪—೧೬ ಸಂತೋಷಿಸು.

ಓ

ಓಗಡಿಕೆ ೧೮—೭ ಓಕರಿಕೆ.

ಓಗರ ೪—೪೩ ಅನ್ನ.

ಓಜೆ ೫—೫೬ ಸರಿಯಾದ ನಡತೆ.

ಓತು ೯—೩೫ ಪ್ರೀತಿಪಟ್ಟು.

ಓಲಗಿಸು ೨—೨೭ ಸೇವೆಮಾಡು.

ಓಪಾದಿಯಲಿ ೫—೧೪ ಹಾಗೆ, ಅಂತೆ.

ಓವರಿ ೧೮—೨೬ ಕೋಣೆ.

ಓಲೆಸು ೨—೧೬ ಸೇವೆ ಮಾಡು.

ಓರಣಿಸು ೧—೩ ಕ್ರಮಗೊಳಿಸು.

ಓಳಿ ೪—೧೭ ಸಮೂಹ, ಸಾಲು.

ಓಷಧಿ ೧೨—೨೨ ತುಟಿ.

ಕ

ಕಕ್ಕುಲಿಸಿ ೧೧—೫ ಮೋಹಗೊಂಡು

ಕಚ್ಚುರಿ ೪—೪೫ ಚಟ್ಲಿ.

ಕಚ್ಚುಟ ೫—೫೭ ಕೌಪೀನ.

ಕಡವಸ ೭—೪೫ ಚರ್ಮ, ಕೃಷ್ಣಾಜಿನ.

ಕಡಿ ೨೩—೪೧ ತುಂಡು.

ಕಡುದುಳು ೩—೪೨ ಕಡಜೀರಿಗೆಯ ಹುಳ.

ಕಡುಕು ೫—೭ ಕಟುಕು, ಕಿವಿಯ ಅಭರಣ.

ಕಡುಗಳಲು ೮—೮ ನಿರಾಶೆ ಹೊಂದು.

ಕಡುಹು ೧೩—೩೨ ದರ್ಪ.

ಕಡೆಗಣಿಸು ೧೬—೧೮ ಪರಿಹರಿಸು.

ಕತ ೮—೨೬ ನಿಮಿತ್ತ ಕಾರಣ.

ಕನಲು ೭—೮೧ ಸಿಟ್ಟಾಗು.

ಕಬಳಿಸು ೨೩—೧೮ ನುಂಗು.

ಕಬ್ಬಸೆ ೧೯—೧ ನೆಣ.

ಕರ ೨—೩೭ ಹೆಚ್ಚಾದ.

ಕರಗ ೪—೩೯ ನೀರಿನ ಪಾತ್ರೆ.

ಕರಣ ೪—೫೭ ಕುಣಿಯುವ ಭಂಗಿ.

ಕರಣಿಕ ೨೨—೧೮ ಕಾರಕೂನ.

ಕರ ೨—೨೧ ಎರಕದ ಮಾದರಿ.

ಕರಗಟ್ಟು ೪-೯ (ಎರಕದಿಂದ) ಗಟ್ಟಿಯಾಗು

ಕಱುಬು ೫-೪೩ ಅಸೂಯೆ.

ಕರ್ದಮ ೨೨-೧೧ ಕೆಸರು.

ಕವಲುವಟ್ಟೆ ೩-೯ ಕೂಡಿದ ಹಾದಿ, (ಕೂಟ)

ಕಳ ೩—೫ ಕಣ, ಯುದ್ಧರಂಗ.

ಕಳವಳ ೬-೭ ಗದ್ದಲ

ಕಾಕ ೭-೩೭ ಕೆಟ್ಟ ಮನುಷ್ಯ

ಕಾರ್ (ರು) ೧೨-೨ ಕಡಿ, ತಿನ್ನು.

ಕಾರ್ ೪-೧೦ ಮಳೆಗಾಲ.

ಕಾಸೆ ೫-೫ ಕಚ್ಚೆ.

ಕಾಹುರ ೧೩-೫೨ ಉದ್ವೇಗ.

ಕಾಗಬ್ಬು ೭-೭ ಕಾಡುಗಬ್ಬು, ಒಂದು ಗಲಗು.

ಕಿಸುಕುಳ ೧೩-೫೮ ಕಿರುಕುಳ, ತುಚ್ಛ.

ಕಿಸುರು ೬-೩೪ ಅಪಾಯದೃಷ್ಟಿ.

ಕೀನಾಶ ೨೪-೧೨ ಯಮ.

ಕೀಲಣ ೯-೧೩ ಉಪಾಯ, ಮಂತ್ರ.

ಕೀಲಣೆ ೭-೨೬ ಜೋಡಣೆ.

ಕೀಸು ೭-೬೪ ಗೀರು, ಕೆತ್ತು.

ಕೀಳಿಲು ೭-೫೧ ಮನೆಯ ಕೆಳಭಾಗ, ಆವಾರ,

ಕುತ್ತುಱಿ ೭-೪೩ ಹೊದರು.

ಕೂರ್ ೫-೬೫ ಅನುರಾಗಿಸು, ಪ್ರೀತಿಸು.

ಕೂರಂಬು ೫-೨೧ ಹದನವಾದ ಬಾಣ.

ಕೇಯೂರ ೪-೩೧ ತೋಳಬಳೆ

ಕೆತ್ತು ೫-೪೦ ನಡುಗು, ಹಾರು.

ಕೋಣೆಕಾಱ ೧೭-೯ ವೃಥಾ ವ್ಯವಹಾರ ಮಾಡುವವ.

ಕೇವಣ ೨೧-೯ ಕುಂದಣ. ಹೊಂದಿಕೆ.

ಕೈಗಟ್ಟೆ ೪-೪೬ ಧೂಪದ ಗಟ್ಟಿ ಪರಿಮಳ ದ್ರವ್ಯವ ಗಟ್ಟಿ

ಕೈಗೈ ೨೨-೧೩ ಅಲಂಕರಿಸು.

ಕೈದು ೧೩-೧೬ ಆಯುಧ.

ಕೈವಾರಿಸು ೩-೫ ಸ್ತುತಿಸು.

ಕೊಡಕೆ ೪-೧೫ ಕಿವಿ.

ಕೊಡಕೆಗಂಗಳು ೪-೪೮ ಕಿವಿಯವರೆಗೆ ವಿಶಾಲವಾದ ಕಣ್ಣುಗಳು.

ಕೋಟರ ೧೧-೨೮ ಒಳಭಾಗ.

ಕೋಡುಕೈ ೨೭-೩೫ ಜೋಡಿಸಿದ ಕೈ.

ಕೋಳುವೋಗು ೧೩-೫ ಬಲೆಬೀಳು, ತುತ್ತಾಗು.

ಕಂಡಿ ೨೨-೩೮ ಇರುವಿಕೆ, ರೀತಿ.

ಕಂಬುಗ್ರೀವ ೪-೯ ಶಂಕದಂತಿರುವ ಕುತ್ತಿಗೆ.

ಕಂಬಿಕಾರ್ತಿ ೪-೫೧ ಬಾಗಿಲ ಕಾಯುವ ಸ್ತ್ರೀಯರು.

ಕಂಸಾಳ ೪-೪೧ ಕಂಚಿನ ತಾಳ.

ಕಾಂಚೀದಾಮ ೪-೮ ನಡುವಿನ ಪಟ್ಟಿ.

ಕಿಂಕಿಲ ೧೩-೪೯ ತುಂಬಿಕೊಂಡು, ಸಂಕೀರ್ಣ.

ಕೆಂಜುರಿ ೨-೧೭ ಕೆಂಪಾದ ಉರಿ.

ಕ್ರಿ. ೨-೩೩ ಕ್ರಿಯೆ.

ಖ

ಖಡ್ಡತನ ೧೩-೭ ದಿಟ್ಟತನ.

ಖರಖರ ೨೫-೩ ಸೂರ್ಯ.

ಖಂಡೆಯ ೧೩-೩೦ ಕತ್ತಿ.

ಗ

ಗರುವ ೧೧-೨೧ ಶ್ರೇಷ್ಠ.

ಗಡಗ ೩-೧೧ ಸಮೂಹ.

ಗಡಾವಣೆ ೫-೯ ಘೋಷ, ಸಪ್ಪಳ.
ಗನ್ನಗತಕ ೧೬ ೩೪ ಮೋಸ.
ಗಮಕ ೩-೩೩ ರೀತಿ, ಮೋಡಿ.
ಗಮಕ ೭-೨೬ ಕುಣಿಯುವ ಬಗೆ.
ಗವಾಕ್ಷ ೪-೬೦ ಸಣ್ಣ ಕಿಡಕಿ.
ಗಸಣಿ ೭-೩೮ ವಿಚಾರ, ಚಿಂತೆ, ಗೊಡವೆ
ಗಾಡಿ ೧೧-೨೧ ಸೊಬಗು ಸೌಂದರ್ಯ, ರೀತಿ
ಗಾಳು ೫—೬೬ ತಪ್ಪು
ಗಾವಳಿಗ ೫—೬೫ ಬಡಾಯಿಗಾರ
ಗಾವಿಲ ೧೩—೪೦ ಹೆಡ್ಡ
ಗಾಹು ೭—೩೦ ಕಪಟ
ಗಿಡಿಬಿಡಿ ೩—೧೧ ಒಂದು ಬಗೆಯ ವಾದ್ಯ
ಗುಡಿ ೨—೭ ಪತಾಕೆ, ನಿಶಾನೆ
ಗುಡ್ಡ ೧೩—೪ ಶಿಷ್ಯ, ಹುಂಬ
ಗಂದೆ ೫—೧೫ ಚಾವು ಗಂಟು

ಘ

ಘನ ೧೪—೧೧ ಮೋಡ
ಘಸಣಿ ೧೩—೬೪ ಉದ್ಯೋಗ

ಚ

ಚಘಾಳಿಸು ೨—೧೦ ಹೆಚ್ಚಾಗು
ಚಲ್ಲಣ ೪—೯ ಚಡ್ಡಿ
ಚಾಟು ೭—೫೩ ಮುಖಸ್ತುತಿಯ ಮಾತುಗಳು
ಚಿತ್ರಪಾಯು ೪—೨೫ ಲಕ್ಷಗೊಡು (?)
ಚಿಮ್ಮುರಿ ೫—೬ ಬೆನ್ನಿಗೆ ಕೈ ಕಟ್ಟುವದು
ಚಾಳಿ ೪—೬೧ ಕುಣಿತದಲ್ಲಿ ತೋರುವ ಅಂಗಾಂಗಗಳ ಚಲನವಲನ
ಚೈಚೈ ೩—೨೯ ಚನ್ನಾಗಿ
ಚಿಂದಿ ೫—೬ ಅರಿವೆಯು ಪಟ್ಟಿ

ಜ

ಜಾತಿಗಾಣು ೪—೨೧ ಸಹಜವಾದ ಚಾಣ್ಮೆ
ಜಡಿ ೧೩—೧೪ ಬೆದರಿಸು
ಜಗಳೆ ೪—೪೧ ಒಂದು ತರದ ತಾಳ
ಜಾವಳಗ ೫—೩೯ ಸಾಮಾನ್ಯ ಮನುಷ್ಯ
ಜಿನುಗ ೭—೫೭ ಅಲ್ಪ, ಕೀಳ
ಜುಣುಗು ೧೯—೩೬ ಜಾರಿಹೋಗು
ಜೋಗವಿಸು ೫—೭೨ ಸಿದ್ಧಮಾಡು
ಜೋಡು ೧೦—೧೯ ಕವಚ
ಜೋಹ ೭—೩೦ ವೇಷ
ಜಂಕಿಸು ೩—೩೨ ಬೆದರಿಸು
ಜಂಗುಳಿ ೩—೩೧ ಸಮೂಹ
ಜಂಜಡ ೬—೧೪ ತ್ರಾಸ
ಜೊಂಪಿಸು ೧೬—೧೫ ಮೈಮರೆ, ನಡುಗು
ಟೊಣೆ ೨೨—೩೦ ಮೋಸಮಾಡು

ಡ

ಠವಣೆ ೨—೨೨ ಲೆಕ್ಕ
ಡಗೆ ೧೪—೪ ನೀರಡಿಕೆ, ಬಿಸಿಲಿನ ತಾಪ
ಡಾವಣಿ ೩—೧೦ ಅನೇಕ ದನಗಳನ್ನು ಕಟ್ಟುವ ಒಂದು ಹಗ್ಗ
ಡಾಳಕತನ ೫—೩೭ ಬಣ್ಣದ ಮಾತು

ತ

ತಕ್ಕೆ ೨—೨೨ ಬಾಹುಲ್ಯ
ತತ್ತಡೆ ೭—೮೧ ಸಂಭವಿಸಿದರೆ
ತತ್ತವಸರ ೧೪—೧೭ ಇರುವ ಕೆಲಸ
ತಮಂಧ ೩—೨೨ ಕಗ್ಗತ್ತಲೆ
ತರಹರ ೩—೧೭ ಸಮಾಧಾನ, ಶಾಂತಿ
ತಬ್ಬಿಬ್ಬು ೭—೨೬ ಗಾಬರಿ

ತಲ್ಲಣ ೩—೧೮ ಅಂಜಿಕೆ
ತವನಿಧಿ ೧೯—೧೦ ತಪೋನಿಧಿ
ತಾಳೋಷ್ಠ ೧೨—೨೨ (ತಾಳ+ಓಷ್ಠ) ಗಂಟಲ ಮಾತು, ತುಟಿ
ತಳಿತ ೪—೬೨ ಅರಳಿದ
ತಳುವು ೧೧—೧೫ ತಡ, ವಿಳಂಬ
ತಿಟ್ಟವಿಡು ೬—೮ ರೂಪಗೊಳ್ಳು
ತುತ್ತು ೨೩—೨೭ ನುಂಗು
ತೂರ್ಯ ೫—೧೦ ವಾದ್ಯ
ತುಱುಗು ೧೪—೪ ತುಂಬಿರು
ತೂಪಿಱು ೩—೨೬ (ಮಂತ್ರಿಸು) ಊದು
ತೆತ್ತಿಗ ೪—೨೫ ಸೇವಕ, ಆಪ್ತ
ತೆತ್ತಿಸು ೪—೧೪ ಜೋಡಿಸು, ಹೊಂದಿಸು, ಕೆಚ್ಚು
ತೆರೆ ೧೭—೧೮ ಮೈಯುಸುಕ್ಕು
ತೊಡೆ ೧೩—೩೨ ನಾಶಮಾಡು
ತೊನೆ ೨೧—೧ವ ಹೊಯ್ದಾಡಲಿ
ತೊಱೆ ೧೭—೪ ನದಿ
ತೋರ ೪—೯ ದೊಡ್ಡ
ತೋಟಿ ೧೩—೭ ಜಗಳ

## ದ

ದರ್ಶನ ೨೦—೨೭ ತತ್ವಜ್ಞಾನ
ದಸರಿದೊಡಕು ೧೨—೨೨ (ರೇಸಿಮೆಯು) ಹುರಿಯಂತೆ ತೊಡಕಾದುದು
ದಳದುಳ ೧೦—೭ ಬಲ್ಸೂರೆ
ದಾಯ ೧—೨ ಉಪಾಯ, ಸಾಧನ
ದಾಯಿಗರು ೧—೧೧ ಸಾಧಕ, ಭಕ್ತ
ದಾರವಟ್ಟ ೨—೬ ಅಗಸೆಯ ಬಾಗಿಲು, ಗೋಪುರ
ದೀವಸಿ ೧೩—೫೯ ಸಂ: (ದಿವಶಿ) ಧೀರ
ದುಡುಗ ೫—೬೭ ಚಿಂತೆ, ದುಃಖ
ದುಗುಲ ೩—೨೬ ದುಕೂಲ, ಸೀರೆ
ದುಮ್ಮಾನ ೮—೧೦ ದುಃಖ
ದೂರ್ವೆ ೪—೪೦ ಕರಿಕೆ
ದೇಶಿಗ ೮—೩ ಮನೆಮಾರು ಇಲ್ಲದವ
ದೋಠಾರತನ ೧೩—೧೨ ಹಟಮಾರಿತನ
ದೋರಗಡಗ ೪—೩೧ 'ಡೋಕಿ', ಒಂದ ಬಗೆಯ ಕೈಬಳೆ
ದಂಡಿ ೨೭—೨೧ ಸಮತೋಲ
೨೨—೨೮ ಅತಿರೇಕ, ಹೆಚ್ಚಳ
ದಂಡಿಗೆ ೪—೨೭ ಪಲ್ಲಕ್ಕಿ
ದಂಡೆ ೪—೪೦ ಹೂಮಾಲೆ, ಬಾಸೆ
ದಂದುಗ ೨೦—೩೫ ಪೀಡೆ, ಕಷ್ಟ
ಧಾವತಿ ೭—೬೪ ಶ್ರಮ
ಧೂಪಿಸು ೭—೪೪ ದಣಿ, ಸಂಕಟಪಡು

## ನ

ನಟ್ಟುವಿಗ ೭—೩೭ ನಾಟ್ಯ ಶಿಕ್ಷಕ
ನಾಗವಾಸ ೫—೧೭ ನರ್ತಕಿಯರ ಸ್ಥಾನ
ನಿಖಿಳೆ ೧೨—೨೭ ಪರಿಪೂರ್ಣ
ನಿಗಡ ೩-೫ ಆನೆಯನ್ನು ಕಟ್ಟುವ ಸರಪಳಿ
ನಿಧಾನ ೧೨—೭ ಆಧಾರ
ನಿಬ್ಬರ ೭—೭ ವಿಶೇಷವಾದ
ನಿಱುಗೆ ೪—೫೪ ಶೋಭೆ
ನಿಪ್ಪಸರ ೧೯—೩೫ ಉರವಣೆ
ನಿರವಯ ೧೭—೧೩ ಅಖಂಡ
ನೀರಸ ೧೧—೨ ನಿರಸ, ರಸವಿಲ್ಲದ
ನೀಱ ೨೧—೩೦ ಚೆಲುವ, ಪ್ರಿಯ
ನೆಗಳ್ ೧—೧೯ ಮಾಡು, ಉಂಟಾಗು, ಪ್ರಕಟವಾಗು

ನೆಮ್ಮು ೭—೭೦ ಆಸರ ಮಾಡಿಕೊಳ್ಳು
ನೆರವು ೧೬—೩೭ ಸಹಾಯ
ನೆರೆ ೩—೩೮ ಒಂದೆಡೆ ಕೂಡಿಸು
ನೆರೆ ೩—೧೩ (ಕೂದಲು) ಬೆಳ್ಳಗಾಗು
ನೆಱತೆ ೮—೩೦ ಪೂರ್ಣತೆ
ನೇವುರ ೪—೭ ಪೈಜಣ (ಸಂ: ನೂಪುರ)
ನುಂಪು ೨೨—೨೧ ನುಣಪು, ಬಪ್ಪ

ಪ

ಪಟಲ (೧೫—ವ) ತೆರೆ
ಪಟು ೧೨-೧೫ ತೀಕ್ಷ್ಣ, ದಕ್ಷ
ಪತಂಗ ೧೨—೨೫ ಸೂರ್ಯ
ಪತಿಕರಿಸು ೫—೩೩ ಸ್ವೀಕರಿಸು, ಸಹಾಯ ಮಾಡು
ಪಯಪಾಡು ೪—೫೭ ನಾಟ್ಯದಲ್ಲಿ ಪಾದಗಳನ್ನು ಇಡುವ ರೀತಿ
ಪರಿಣಮಿಸು ೧೨—೪ ನಮಸ್ಕಾರ ಮಾಡು
ಪರಿವಿಡಿ ೪—೨೧ ಕ್ರಮ, ತರ
ಪರಿವೇಷ್ಟಿಸು ೪—೧೦ ಸುತ್ತುಗಟ್ಟು
ಪರುಠವಣೆ ೨—೩ ಸರಿಯಾದ ವ್ಯವಸ್ಥೆ
ಪರಠವಿಸು ೧—೭ ಪ್ರಸಾರಮಾಡು
ಪಲ್ಲಟಿಸು ೩—೧೩ ಕ್ರಮತಪ್ಪು, ವಿಕಾಸ ವಶವಾಗು
ಪಾಡು ೪-೫೮ ರೀತಿ
ಪಾತ್ರ ೪—೬೬ ಲಾಸ್ಯ, ಕುಳಿತ
ಪಾಯಕ ೨೭-೪೪ ಕಾಲಾಳು
ಪಾಯವಟ್ಟ ೪—೭ ಪೆಂಡೆಯ, ಅಂದಿಗೆ ಕಾಲಿನಾಭರಣ
ಪುರೀಷ ೧೯—೧ ಮಲ
ಪೂವಲಿ ೩—೪ ರಂಗವಲ್ಲಿ
ಪೈಜೆ ೨—೪೧ ಪಂಥ
ಪ್ರಸ್ತಾವ ೩—೧೫ ಸಮಯ, ಸಂದರ್ಭ
ಪೆಚ್ಚುನೀರ್ ೩-೨೬ ಮಕ್ಕಳು ಬೆಳೆಯುವದಕ್ಕೆಂದು ದಿನಾಲು ಎರೆಯುವ ನೀರು

ಬ

ಬನ್ನ ೧೬—೩೪ ತೊಂದರೆ
ಬಡಬ ೨೩-೪೧ (ಸಂ: ವಡವ) ಸಮುದ್ರದ ತಳದಲ್ಲಿರುವ ಬೆಂಕಿ
ಬಣಗು ೨೨-೩೬ ಯಃಕಶ್ಚಿತ, ಕ್ಷುಲ್ಲಕ
ಬಲವರು ೪—೩೭ ಪ್ರದಕ್ಷಿಣೆ ಮಾಡು
ಬಲ್ಲವಿಕೆ ೧೨—೧೭ ಚಾತುರ್ಯ, ತಿಳುವಳಿಕೆ
ಬಲಿವ ೪-೫೧ ಬಿಗಿಮಾಡು
ಬಳಲು ೪—೩೨ ಸಡಿಲಾಗು, ಜೋಲುಬೀಳು
ಬಳಸು ೪—೨೭ ಸ[illegible]ತ್ತು
ಬಾಣಸ ೮—೧೩ ಅಡಿಗೆ
ಬಳವಿಗೆ ೩—೨೮ ಮಕ್ಕಳ ಬೆಳವಣಿಗೆ
ಬಾಯ್ದೆರೆ ೨—೩೦ ತುಟಿ
ಬಾರಿ ೭—೩೯ ಹೊಡೆತ, ಸರತಿ
ಬಿದ್ದಿನ ೨೨—೨೬ ಅತಿಥಿ, ಬೀಗ
ಬಿನುಗು ೧೬—೪೯ ಕ್ಷುಲ್ಲಕ
ಬೀಯ ೧—೧೧ ವ್ಯಯ, ವೆಚ್ಚ
ಬುಲ್ಲವಣೆ ೧೫—೪೨ ಹೆಚ್ಚುವಿಕೆ
ಬೆಗಡು ೫—೩೫ ಭಯ
ಬೆಂಬಿದ್ದು ೬—೫೭ (ಬೆರಿದು+ಬಿದ್ದು) ದುಃಖದಲ್ಲಿ ಬೆಂದವಳಾಗಿ
ಬೆಱೆತು ೫೬—೩೮ ಅಹಂಕಾರದಿಂದ ಮೈಮರೆದು
ಬೇವಸ ೫—೨೪ ಚಿಂತೆ

ಬೋವಗಾಱಿಕೆ ೫-೧೭ ಹಿರಿಯತನ

ಬೋಳೆಯರು ೭-೪೭ ದೇವತೆಗಳು

ಬೋಳೈಸು ೫-೩೫ ಸಮಾಧಾನಪಡಿಸು

ಬಿಂದ ೫-೧೭ ಸಮೂಹ

## ಭ

ಭರ ೧೦-೫ ಆತುರ

ಭಣಿತೆ ೧೩-೪೦ ರೀತಿ

ಭದ್ರ ೨೨-೨ ವ ಮದ್ದಾನೆ

ಭರಭಾರ ೧೬-೭ ಹೆಚ್ಚಾದ ಭಾರ

ಭರವಸ ಉತ್ಕಂಠತೆ

ಭಾರ್ಗವ ೪- ೧೩ (ವ) ಶುಕ್ರ

ಭಾಗೆಯ ೫-೭೨ ಭಾಗ, ಪಾಲು

ಭಾರಂಕ ೮-೮ ದುಃಖಭಾರ

ಭಾವುಕ ೧-೮ ಪಂಡಿತ, ಸಹೃದಯ, ಕಲಾಕೋವಿದ

ಭುಲ್ಲವಣೆ ೬-೧೧ ಹೆಚ್ಚುಗೆ

ಭುಲ್ಲವಿಸು ೨-೩೭ ಗರ್ವದಿಂದ ಉಬ್ಬು

ಭೂತಿ ೭-೪೫ ಬೂದಿ

ಭೋಗದವ ೫-೭೨ ಸೇವಕ

## ಮ

ಮಕರಿಸು ೭-೩೬ ಹೆಚ್ಚಾಗು

ಮಗಿಲು ೨೨-೩ವ ಮನೆಯ ಚಪ್ಪರದನೆತ್ತಿ

ಮಗ್ಗು ೧೩-೨೬ ವಶೀಕರಣ ರೀತಿ

ಮಡಲು ೫-೮ ಉಡಿ

ಮನಕತ ೭-೮೨ ಸಿಟ್ಟು, ದುಃಖ

ಮಱವೆ ೫-೨೫ ಅಜ್ಞಾನ

ಮಲಯಜ ೯-೩೧ ಶ್ರೀಗಂಧದ ಮರ

ಮಳಲೊಟ್ಟಿಲು ೧೬-೩ ವ ಉಸುಕಿನರಾಶಿ

ಮಿತ್ತು ೨-೨೨ ಕೊಲ್ಲುವ ಶಕ್ತಿ

ಮುಕ್ಕುಹೋಗು ೫-೪೯ ಭಂಗವಾಗು

ಮುಡುಬ ೧೧-೨೪ ಹೆಳವ

ಮುಡುಹು ೧೯-೩೩ ಭುಜ

ಮುತ್ತು ೩-೧೩ ಮುದಿಯಾಗು

ಮುರಿ ೧೩-೩೩ ತಿರುಗು

ಮೂದಲಿಸು ೮-೧೫ ಜರೆ

ಮೆಲಕಲಿಸಿ ೧೨-೨ ತಿನ್ನಲಿಕ್ಕೆ ಕಲಿಸಿ

ಮೇಲುದ ೪-೪೨ ಮೇ ಹೊತ್ತುಕೊಳ್ಳುವ ಬಟ್ಟೆ, ಸೆಲ್ಲೆ, ಪ್ರಾವರಣ, ಉತ್ತರೀಯ

ಮೊಗಸು ೧-೧೬ ಪ್ರಯತ್ನ ಮಾಡು ಶ್ರಮಬಡು

ಮೇಳಾಪ ೪-೫೨ ಕೂಡಿಸುವಿಕೆ

ಮೊಗ್ಗರವಾಯ ೧೩-೧೧ ಗುಂಪಾಗಿ ಮೇಲೆ ಬೀಳು

ಮೋಡಿ ೧೯-೩೪ ರೀತಿ

ಮುಂಗುಡಿ ೪-೨೭ ಮುಂಭಾಗದಲ್ಲಿರುವ ಸಮೂಹ, ಸೇನೆ

## ಯ

ಯೂಪ ೨೦-೩೮ ಯಜ್ಞ ಪಶುವನ್ನು ಕಟ್ಟುವ ಕಂಬ

ಜೋಗವಟ್ಟಿಗೆ ೭-೪೫ ಧ್ಯಾನ ಕಾಲದಲ್ಲಿ ಬೆನ್ನು ಮೊಳಕಾಲುಗಳ ಮೇಲೆ ಹೊರುವ ವಸ್ತ್ರ

## ರ

ರಕ್ಷೆ ೯-೩ (೧) ವಿಭೂತಿ (೨) ರಕ್ಷಣೆ, ರಕ್ಷಿಸುವ ಮಣಿ

ಶಾಷೆ ೧೩–೭೦ ತೊಡೆ

ರೂಹಿಡು ೪–೨೨ ಕಾಣು, ರೂಪವನ್ನುಅರಿ

ಱ

ಱೋಡಾಡು ೭–೬೧ ತಿರಸ್ಕಾರ ಮಾಡು

ಲ

ಲಾಕುಳ ೬–೯೫ ಯೋಗದಂಡ

ಲಾಗು ೧–೯ ಜಾಗ್ರತೆ

ಲಾವಕ ೫–೬೪ ಚಾಡಿಕೋರ

ಲಾಸ್ಯ ೪ ೬೧ ಸಂಗೀತದಿಂದ ಕೂಡಿದ ನೃತ್ಯ, ಶೃಂಗಾರ ಸೂಚಿಸುವ ನರ್ತನ

ಲುಳಿ ೩ ೨೫ ಹೊಳಪು, ಕಾಂತಿ

ಲೋಚು ೭ ೫೭ ಕೂದಲನ್ನು ಕೀಳಿಸಿ ಕೊಳ್ಳುವ ಜೈನ ಧರ್ಮದ ಪದ್ಧತಿ

ವ

ವರುಷ ೧೪ ೧೧ ಮಳೆ

ವರ್ಮ ೧೫ ೧೪ ಮರ್ಮ

ವಹಣ ೫ ೯ ಸೊಬಗು ವಿಡಾಯ,

ವಾಷೆ ೧೩ ೭೦ ಕಡಿವಾಣ

ವಾರುವ ೧೮ ೧೯ ಕುದುರೆ

ವಾಸ ೪ ೫೬ (ಸಂ: ವಾಂಶ) ಕೊಳ್ಳಲು

ವಾಸಿ ೭ ೬೪ ಪಂಥ, ನಿಶ್ಚಯ

ವಾಸಿಗ ೫ ೧೩ ಭೃತ್ಯ, ಊಳಿಗದವ

ವಿಡಾಯ ೧—೧೧ ಆಡಂಬರ, ವಾದ್ಯಗಾರ ಕೊಳಲು ಮೊದಲಾದವನ್ನು ಬಾರಿಸುವವ

ವಿಧಿ ೧—೧೨ ನೇಮ, ರೀತಿ, ವಿಧಾನ

ವಿಧಾವಂತ ೫—೨ (ಬಾಡಿಗೆ ಹಣಕ್ಕಾಗಿ) ಮಡಿಯುವವ

ವಿನಿಯೋಗ ೩—೩೫ ಊಳಿಗ, ಸೇವೆ

ವಿಸಟಂಬರಿ ೧೫—೯ ಯತೇಚ್ಛವಾಗಿ ಹರಿ

ವೆಗ್ಗಳಿಸಿ ೩—೧೩ ಹೆಚ್ಚಾಗಿ

ವೇದಿಸು ೪—೪ ಪ್ರಕಟಿಮಾಡು

ವೇಧೆ ೧೭—೨ ಗುರಿ

ವೈಹಾಳಿ ೧೦—೪ ಕುದುರೆಯ ಸವಾರಿ

ವಂಕದಾರ ೧೪—೧೩ ವಕ್ರದ್ವಾರ ಬಾಗಿಲು

ವೇದನಿಸು ೭—೧೬ ದುಃಖವನ್ನುಂಟು ಮಾಡು

ಸ

ಸಕೀಲ ೧೨—೧೬ ಸಂಬಂಧ ಕೂಡುವಿಕೆ

ಸಯವಾದ ೧೪—೭ ಹೊಂದಿದ, ಪಾತ್ರವಾದ

ಸರಿಸ ೪—೨೨ ಸಮೀಪ, ಎದುರು

ಸಲ್ಲವಿಡು ೫—೧೪ ಬಿಟ್ಟುಬಿಡು

ಸವ್ಯಾಪಸವ್ಯ ೧೯—೩೪ ಎಡಬಲ

ಸಸಿನೆ ೪—೫ ಚನ್ನಾಗಿ, ಸರಿಯಾಗಿ

ಸಾರಗಟ್ಟು ೪—೩೯ ಎತ್ತರದಲ್ಲಿ ನಿಂತು ಅಭಿಷೇಕ ಮಾಡಲು ಬರುವಂತೆ ಅಟ್ಟವನ್ನು ಕಟ್ಟು

ಸಾರೆಯ (೮—೨) ಮೋಕ್ಷ

ಸಾರೆ ೧೧—೩೨ ಸಮೀಪ

ಸಿಂಗುರಿ ೧—೧೫ ಚವರಿ

ಸುಧಾಳ ೩—೨೫ ಚಂದ

ಸುಮಾನ ೩—೨ ಆನಂದ

ಸುವಿಧಾನ ೧೭—೨೨ ರಕ್ಷಿಸುವದು

ಸೊಡರಕ್ಕಿ ೩—೨೬ ಅಕ್ಕಿ ಸುಟ್ಟ ಕಾಡಿಗೆ
ಸೊಡ್ಡಳ (೨೨—೨, ವ ಶಿವ
ಸೊಮ್ಮು ೩—೩೦ ಐಶ್ವರ್ಯ
ಸೋಹೆ ೫—೪೩ ಕುರುಹು
ಸೌರಂಭ ೩—೨ ಸಂಭ್ರಮ, ಆನಂದ
ಸಂಕೋಚ ೧೨—೧೮ ಸಂಕ್ಷೇಪ
ಸಂಘುಟ ೧೬—೩೨ ಹಂಚಿಕೆ
ಸವರಿಸು ೪—೨೪ ಸಿದ್ಧಮಾಡು
೪—೩೨ ಸರಿಮಾಡು
ಸಾಂಗತ್ಯ ೩—೧೯ ಸಂಗತಿ ಕೂಟ

ಹ

ಹಡೆ ೭—೬೯ ಪಡೆ, ಗಳಿಸು
ಹದುಳ ೨—೩೯ ಸುರಕ್ಷಿತ
ಹಣ್ಣಿದ ೭—೨೩ ಜೋಡಿಸಿದ ಮಾಡಿದ
ಸಿದ್ಧಮಾಡಿದ
ಹರಿಸುಟಿಕೆ ೭—೫೬...... ?
ಹರವರಿ ೮—೩೧ ಪ್ರಕಟನೆ
ಹಱುವು ೧೦—೧೦ ಉಪಾಯ
ಹಱುಗೋಲ ೧೨—೧೪ ದೋಣಿ

ಹಳವಿಗೆ ೪—೨೧ ಧ್ವಜ
ಹಾರವಿಸು ೪—೩೯ ಹಾರೈಸು
ಹಾರು ೨—೧೬ ನಿರೀಕ್ಷಿಸು
ಹಿಳುಕು ೫—೧೧ ಬಾಣದ ಹಿಡಿಕೆ, ಪುಂಖ
ಹಿಸುಣತೆ ೧೬—೪೦ ಚಾಡಿಕೋರತನ
ಹೀಹಾಳಿ ೭—೨೬ ತಿರಸ್ಕಾರ
ಹುಗಿಲು ೧೮—೮ ಸೀಳುವಿಕೆ
ಹುದು ೧೬—೪೨ ಹೊಂದಿಕೊಳ್ಳುವದು
ಹೂಣಿಕೆ ೨—೪೦ ಪಂಥ
ಹೂಸಿಹುಂಡ ೧೫—೧೨ ಡಾಂಬಿಕಾಚಾರಿ
ಹೆಕ್ಕಳ ೧೧—೫ ಹೆಚ್ಚಳ
ಹೆಟ್ಟುಗೆ ೯—೩ ವನಿತೆ, ಸ್ತ್ರೀ
ಹೆಱೆ ೯—೩೦ ಚಂದ್ರ
ಹೊಂಗಱಗ ೪— ೩೯ ಬಂಗಾರದ (ನೀರಿನ)
ಪಾತ್ರೆ
ಹೊರಳಿ ೨—೨ ಸಮೂಹ
ಹೊಲಬು ೧—೧೨ ರೀತಿ
ಹೊರಟೆ ೧೧—೫ ಹೋರಾಟ ಪೇಚಾಟ
ಹಂಗು ೧—೧ ವ ನೆರವು, ಸಹಾಯ
ಹಂದೆ ೧೬—೩೭ ಹೇಡಿ

## PRABHULINGALEELE – by CHAMARASA

(1430 A. D.)

'It is one of the best books in Virasaiva Litrature.'

**Dr. S. C. Nandimath**
M A.,Ph D. (LONDON)

**Mr. C. P. Brown says :**

"It is an allegorical poem of considerable beauty, and is particulary attractive from the pleasing manner in which it describes the female sex; neither as God-desses (as they are described in the Brahmanical poems) nor as brutes, which is too often the style of the Brahmanical Puranas. It is not only amusing but is written with such delicacy that any Hindu female might read it with gratification."

* Hand Book of Virasaivsm. Pages 42, 43

# ಚಾಮರಸ
## ಕೃತ
# ಪ್ರಭುಲಿಂಗಲೀಲೆ
## ಕ್ರಿ. ಶ. ೧೪೩೦

ವಿದ್ವಾಂಸರ ಅಭಿಪ್ರಾಯಗಳು

"ವೀರಶೈವ ಸಾಹಿತ್ಯದಲ್ಲಿ
ಇದೊಂದು ಅತ್ಯುತ್ತಮ ಗ್ರಂಥವಾಗಿದೆ"

–ಡಾಕ್ಟರ ಶಿ. ಚ. ನಂದೀಮಠ ಅವರು

"ಪ್ರಭುಲಿಂಗಲೀಲೆಯು ಅತ್ಯಂತ ಸುಂದರವಾದ ಕಾವ್ಯ; ಸ್ತ್ರೀತ್ವದ ದರ್ಶನವು ಈ ಕಾವ್ಯದಲ್ಲಿ ಮನೋಜ್ಞವಾಗುವಂತೆ ನಿರೂಪಿತವಾಗಿದೆ. ಇಲ್ಲಿ ಹೆಣ್ಣು ಮಕ್ಕಳ ಜೀವನವನ್ನು ವೈದಿಕ ಪುರಾಣಗಳೊಳಗಣ ದೇವತಾ ಮಹಿಳೆಯರಂತೆ, ಇಲ್ಲವೆ ರಕ್ಕಸಿಯರಂತೆ ಚಿತ್ರಿಸಲಾಗಿಲ್ಲ. ಭಾರತೀಯ ಸ್ತ್ರೀಯರೆಲ್ಲರೂ ಆತ್ಮಾದರದಿಂದ ಓದಿ ಆನಂದ ಪಡುವಷ್ಟು ಈ ಕಾವ್ಯ ಮನೋಹರವಾಗಿದೆ; ಶ್ರೇಷ್ಠತಮವಾಗಿದೆ."

–ಮೊ|| ಸಿ. ಪಿ. ಬ್ರಾವುನ್ ಅವರು

# ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ
# ಸಾಹಿತ್ಯ ಸಮಿತಿ ಪ್ರಕಟನೆಗಳು



ಕನ್ನಡ ನಾಡಿನ ಸುಪ್ರಸಿದ್ಧ ವಿದ್ವಾಂಸರಾದ
ಪ್ರೊಫೆಸರ್ ಶಿ. ಶಿ. ಬಸವನಾಳರವರಿಂದ ಸಂಪಾದಿತವಾದ

| | | | |
|---|---|---|---|
| ೧ | ಚೆನ್ನಬಸವಪುರಾಣ | (ಅಂಟಿಕ) | ೮—೦—೦ |
| | ವಿರೂಪಾಕ್ಷ ಪಂಡಿತ ಕೃತ | (ಗ್ಲೇಜ) | ೭—೦—೦ |
| ೨ | ಪ್ರಭುಲಿಂಗಲೀಲೆ | (ಕ್ಯಾಲಿಕೋ ಪ್ರತಿ) | ೫—೦—೦ |
| | ಚಾಮರಸ ಕೃತ | (ಸುಂದರ ಪ್ರತಿ) | ೪—೦—೦ |
| ೩. | ಶಬರಶಂಕರವಿಳಾಸಂ | ,, | ೨—೮—೦ |
| | ಷಡಕ್ಷರಿದೇವ ಕೃತ | | |
| ೪ | ರಕ್ಷಾಶತಕ ಮತ್ತು ಪಂಪಾಶತಕ | | ೦—೧೨—೦ |
| | ಹಂಪೆಯ ಹರೀಶ್ವರ ಕೃತ | | |
| ೫ | ಬಸವಣ್ಣನವರ ಷಟ್‌ಸ್ಥಳದ ವಚನಗಳು | | |
| | ,, | ಹೆಚ್ಚಿಗೆ ದೊರೆತ ವಚನ | ೧—೮—೦ |
| | ,, | ಸಾಮಾನ್ಯ ಪ್ರತಿ | ೨—೮—೦ |
| | ,, | ಸುಂದರ ಪ್ರತಿ | ೪—೦—೦ |
| | ,, | ಗ್ರಂಥಾಲಯ ಸಂಸ್ಕರಣ | ೮—೦—೦ |

--ಡಾ॥ ಶಿ. ಚ. ನಂದೀಮಠರವರಿಂದ ಸಂಪಾದಿತ--

೬ ಗಿರಿಜಾಕಲ್ಯಾಣ, ಹಂಪೆಯ ಹರೀಶ್ವರ ಕೃತ (ಪ್ರತಿಗಳು ಮುಗಿದಿವೆ)

—ಶ್ರೀ. ಹಾಲಬಾವಿ ವೀರಭದ್ರಪ್ಪನವರಿಂದ ಸಂಪಾದಿತ—

೭ ಶಂಕರದಾಸಿಮಾರ್ಯ ಪುರಾಣ, ಮಲ್ಲಿಕಾರ್ಜುನ ಕವಿ ಕೃತ ೩—೮—೦

## PUBLICATIONS IN ENGLISH

1. **Musings of Basawa** 1-8-0
   Edited by Prof. S. S. Basawanal
   Dr. K. R. Sreenivas Iyenger
2. **Memoir of Raja Saheb of Wantimuri**
   —Dr. K. R. Sreenivas Iyengar (out of print)
3. **Hand Book of Virashivism** 5-0-0
   —Dr. S. C. Nandimath
4. **Commemoration Volume** 6-8-0
   (Comprising of the above three books)

ಅಚ್ಚಿಗೆ ಸಿದ್ಧವಾಗುತ್ತಿರುವ ಗ್ರಂಥ

**ಶ್ರೀ ಬಸವ ಪುರಾಣ ಭೀಮಕವಿ ಕೃತ** (ಭಾಮಿನಿ ಷಟ್ಪದಿ)

ವಿ. ಸೂಚನೆ– ವೀರಶೈವ ತತ್ತ್ವಪ್ರಕಾಶ ಮತ್ತು ಗಿರಿಜಾಕಲ್ಯಾಣ ಪ್ರಬಂಧ– ಈ ಗ್ರಂಥಗಳ ಪುನರ್ ಮುದ್ರಣದ ಯೋಜನೆ ಕೈಕೊಂಡಿದೆ ಪುಸ್ತಕ ವ್ಯಾಪಾರಿಗಳಿಗೆ ಯೋಗ್ಯ ದಳ್ಳಾಳಿ ಕೊಡಲಾಗುವದು. ಪ್ರತಿಗಳು ಬೇಕಾದವರು ಈ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಗೌರವ ಕಾರ್ಯದರ್ಶಿ ಹಾಗೂ ಲೈಬ್ರೇರಿಯನ್
ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಧಾರವಾಡ

*Please write to:*

Hon. Secretary & Librarian
LITERARY COMMITTEE, L. E. Association Dharwar





ವಚನ : ಜಯಜಯಶಾಹಾಂತ ಪ್ರಭುವೆ। ಜಯತು ನಿರ್ಗುಣ ನಿಧಿಯೆ
ಜಯಸಂಪತ್ತು ಸಾಹಿತ್ಯದೋಲಗಪ್ರಿಯ। ಜಯ ಬಸವಪ್ರಭುದೇವಾ।
ಜಯಕಾಲ ಜಯಶೀಲ। ಜಯಪಾಲ ಜಯಲೋಲ।
ಜಯಜಯವೆಂದು ಗಣಸ್ತೋಮ ಪೊಗಳುತಿದೆ।
ಜಯಪ್ರಭುವೆ ನಿಮ್ಮ ಪಾದ ಪದ್ಮಂಗಳಿಗೆ।
ಶರಣೆಂದು ಜಯ ಜಯವೆಂದು ಸ್ತುತಿಸುತ್ತಿರಲು ॥

ಶ್ರೀ ಶಿ. ಬುದ್ದಯ್ಯಸ್ವಾಮಿ ಪುರಾಣಿಕ ತೇರದಾಳ ಇವರ ಪ್ರತಿಯಲ್ಲಿ
೨೫ ನೆಯ ಗತಿಯ ಮೊದಲು ಹೆಚ್ಚಿಗೆ ದೊರೆತ ವಚನ



